# ಕರ್ನಾಟಕ ಲೋಚನ

ಸಂಪುಟ ೩ ಡಿಸೆಂಬರ್ ೧೯೯೦ ಸಂಚಿಕೆ ೨






## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

| | | | |
|---|---|---|---|
| Annual Subn : | Rs. 10-00 | ವಾರ್ಷಿಕ ಚಂದಾ : | ರೂ. ೧೦-೦೦ |
| Subn. for life | 100-00 | ಅಜೀವ | ೧೦೦-೦೦ |

# "ಕರ್ನಾಟಕ ಲೋಚನ"



**ಲೇಖನಗಳು–ಟಿಪ್ಪಣಿಗಳು**

ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು–ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು–ಇವುಗಳಿಗೆ 'ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibilography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ; ಆದರೆ ಕಳಿಸಿದರೆ 'ಸ್ವೀಕಾರ' ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

**ವಿನಿಮಯ ಪತ್ರಿಕೆಗಳು**

೧. ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ವಿಜ್ಞಾನ ಕರ್ಣಾಟಕ (ಮೈಸೂರು), ೨. ಸಾಧನೆ (ಬೆಂಗಳೂರು,) ೩. ಗ್ರಂಥಲೋಕ (ಮೈಸೂರು), ೪. ತರಳಬಾಳು (ಸಿರಿಗೆರೆ), ೫. ಅಂಕಣ (ಬೆಂಗಳೂರು), ೬. ಸುಗುಣಮಾಲಾ (ಉಡುಪಿ), ೭. ಅನ್ವೇಷಣೆ (ಬೆಂಗಳೂರು) ೮. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ನುಡಿ (ಬೆಂಗಳೂರು), ೯. ಶಂಕರ ಭಾಸ್ಕರ (ಬೆಂಗಳೂರು).

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೫೪, ೩ನೇ ಅಡ್ಡಬೀದಿ, ಗವಿಪುರವಿಸ್ತರಣ, ಬೆಂಗಳೂರು-೧೯

ಸಂಪಾದಕರು : ಪ್ರೊ॥ ವಿದ್ವಾನ್ ಟಿ. ಕೇಶವ ಭಟ್ಟ

ಸಹಾಯಕ ಸಂಪಾದಕರು : ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್

ಸಂಪುಟ ೩ | ಡಿಸೆಂಬರ್ ೧೯೯೦ | ಸಂಚಿಕೆ ೨

## ಪರಿವಿಡಿ

# KARNATAKA LOCHANA

Half-Yearly Journal, Published by B. M. Sri. Memorial Foundation, 54, 3rd Cross, Gavipuram Extn. Bangalore-19



Vol. 3 December 1990 No. 2

CONTENTS

# ಛಂದೋಂಬುಧಿಯ ಕರ್ಣಾಟ ವಿಷಯ ಜಾತಿಬಂಧಗಳು

—ಕ. ಪು. ಸೀತಾರಾಮ ಕೆದಿಲ್ಲಾಯ

ನಾಗವರ್ಮನ ಛಂದೋಂಬುಧಿಯನ್ನು ಬೇರೆ ಬೇರೆ ಕಾಲದಲ್ಲಿ ಅನೇಕ ವಿದ್ವಾಂಸರು ಸಂಪಾದಿಸಿ ಪ್ರಕಟಿಸಿರುವರು. ಆದರೆ ಈ ಗ್ರಂಥದ ಪದ್ಯಗಳಲ್ಲಿ ಪಾಠ ಭೇದವಿರುವುದರಿಂದಲೂ ಲಿಪಿದೋಷವು ನುಸುಳಿರುವುದರಿಂದಲೂ ಸಂಪಾದಕರು ಅನಿವಾರ್ಯವಾಗಿ ಕೆಲವು ಪದ್ಯಗಳನ್ನು ತಮಗೆ ಸರಿಕಂಡಂತೆ ತಿದ್ದಿ ಬರೆದಿರುವರು. ಈವರೆಗೆ ಛಂದೋಂಬುಧಿಯ ಶುದ್ಧ ಪಾಠವನ್ನು ಯಾರಿಗೂ ನಿರ್ಧರಿಸಲು ಸಾಧ್ಯ ವಾಗಲಿಲ್ಲ. ಕೆಲವು ವರ್ಷಗಳ ಹಿಂದೆ ಛಂದೋಂಬುಧಿಯ ಪಂಚಮಾಧಿಕಾರದಲ್ಲಿರುವ ಕರ್ಣಾಟ ವಿಷಯ ಜಾತಿಬಂಧಗಳನ್ನು ನನ್ನ ಮನಸ್ಸಿಗೆ ಹೊಳೆದಂತೆ ತಿದ್ದಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದೆನು (೧). ಅನಂತರ ಕನ್ನಡ ನುಡಿ ಪತ್ರಿಕೆಯಲ್ಲಿ ಇವುಗಳ ವಿಷಯವನ್ನು ವಿಶದವಾಗಿ ವಿವರಿಸಿ ನಿರೂಪಿಸಿದ್ದೆನು(೨). ಛಂದೋಂಬುಧಿಯನ್ನು ಮತ್ತೆ ಸಂಪಾದಿಸಿದ ಮಹನೀಯರು ಈ ಪಾಠಪರಿಷ್ಕರಣ ವನ್ನು ಅಂಗೀಕರಿಸಿರುವರು. ಆದರೆ ನಾನು ಪ್ರಬುದ್ಧ ಕರ್ಣಾಟಕದಲ್ಲಿ ಬರೆದ ತ್ರಿಪದಿಯ ಲಿಪಿದೋಷ ತಿದ್ದುಪಡಿ ಸರಿಯಲ್ಲವೆಂದೂ ಛಂದೋವತಂಸದ ಪಾಠ ಪರಿಷ್ಕರಣವು ದೋಷಪೂರ್ಣವಾಗಿದೆಯೆಂದೂ ಅನಂತರ ತಿಳಿಯಿತು.

1985ರಲ್ಲಿ ಛಂದೋಂಬುಧಿಯಂತೆ ಲಕ್ಷಣಲಕ್ಷ್ಯ ಸಮವಾಯ ಪದ್ಧತಿಯಲ್ಲಿ ನಾನು ಬರೆದ ಛಂದೋದರ್ಪಣದ ಷಷ್ಠಾಧ್ಯಾಯದಲ್ಲಿ ಕರ್ಣಾಟಕ ವಿಷಯ ಜಾತಿ ಬಂಧಗಳ ಛಂದೋ ನಿಯಮವನ್ನು ಸರಿಯಾಗಿ ನಿರೂಪಿಸಿರುವೆನು. ಜಯಕೀರ್ತಿ ಸಂಸ್ಕೃತದಲ್ಲಿ ಬರೆದಿದ್ದ ಛಂದೋನುಶಾಸನದ ಸಪ್ತಮಾಧಿಕಾರದಲ್ಲಿ ಕರ್ಣಾಟ ವಿಷಯ ಜಾತಿಬಂಧಗಳ ಲಕ್ಷಣ ನಿರೂಪಣೆ ಚೆನ್ನಾಗಿದೆ. ಇದರ ಆಧಾರದಿಂದ ಛಂದೋಂಬುಧಿ ಯನ್ನು ತಿದ್ದಲು ಸಾಧ್ಯವಾಗುತ್ತದೆ. ಈ ವರೆಗೆ ಪ್ರಕಟವಾದ ಛಂದೋಂಬುಧಿಯ ವಿವಿಧ ಪಾಠಾಂತರಗಳನ್ನು ಪರಿಶೀಲಿಸಿ ಕರ್ಣಾಟ ವಿಷಯ ಜಾತಿಬಂಧಗಳ ಶುದ್ಧ ಪಾಠವನ್ನು ನಿಷ್ಕರ್ಷಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

### ಪಿರಿಯಕ್ಕರಂ

ಮೊದಲೊ.ಳಜಗಣಂ.ಕುಂದದೆ.ಬರ್ಕತ್ತ.ಮಯುದ್ದ.ಗ.ಣಂಗಳೆ.ವಿಷ್ಣುವಕ್ಕುಂ।
ತುದಿಯೊ.ಳೀಱಿಂಬ.ತಾಣದೊ.ಳೆಲ್ಲಿಯುಂ.ಕಂದರ್ಪ.ರಿಪುಗಣಂ.ನೆಲಸಿ ನಿಲ್ಕೆ॥
ಪದದೊ.ಳೆರಡೆಂಬ.ಸಂಖ್ಯೆಯೊಳ್.ನಾಲ್ಕುಱೊ.ಳಜಗಣಂ.ಸಮವಾಯ.
ಮಪ್ಪೊಡಕ್ಕುಂ।
ಸದಮ.ಳೇಂದು ನಿ.ಭಾನನೆ.ನಾಕಿಗ.ನಿಷ್ಪದಿ.ನಿಂತಿದು.ಪಿರಿಯಕ್ಕರಂ॥

ತಾತ್ಪರ್ಯ :—ಪಿರಿಯಕ್ಕರದ ಪ್ರತಿಪಾದದಲ್ಲಿ ೧ ಬ್ರಹ್ಮಗಣ ೫ ವಿಷ್ಣುಗಣ ೧ ರುದ್ರಗಣ ಇರಬೇಕು. ಎರಡನೆಯ ಸ್ಥಾನದಲ್ಲಿಯೂ ನಾಲ್ಕನೆಯ ಸ್ಥಾನದಲ್ಲಿಯೂ ವಿಕಲ್ಪವಾಗಿ ಬ್ರಹ್ಮಗಣ ಬರಬಹುದು. (೩)

## ದೊರೆಯಕ್ಕರಂ

ಸರಸಿಜೋ.ದರಗಣ.ಮೆರಡ ಜನುವಲ್ಲಿ.ನೆರೆದಿರ್ಕೆ.ಮತ್ತಂ ।
ಸರಸಿಜೋ.ದರಗಣ.ಮೆರಡ.ಜನುವಕ್ಕೆ.ಗಣಮುಮಾ.ಱಕ್ಕುಂ ।
ಸರಸಿಜ.ಲೋಚನೆ.ದೊರೆವೆ.ತ್ತಗಣದಿಂ.ದೊರೆವೆತ್ತ.ಪೆಸಱಿಂ ।
ದೊರೆಯಾಗಿ.ಸಂದುದು.ದೊರೆಯ.ಕ್ಕರವಿದ ನಱಿವುದೀ.ತೆಱದಿಂ ॥

ತಾತ್ಪರ್ಯ :— ದೊರೆಯಕ್ಕರದ ಪ್ರತಿಪಾದದಲ್ಲಿ ೨ ವಿಷ್ಣುಗಣ ೧ ಬ್ರಹ್ಮಗಣ ೨ ವಿಷ್ಣುಗಣ ೧ ಬ್ರಹ್ಮಗಣವಿರಬೇಕು. (೪)

## ನಡುವಣಕ್ಕರಂ

ಜಳಜ.ಸಂಭವ.ಗಣಮಕ್ಕೆ.ಮೊದಲೊಳ್.ನಡುವೆ ಮೂಱು ।
ಜಳರು.ಹೋದರ.ಗಣಮಕ್ಕೆ.ಬಱಿಕೆಕಾ.ಮಾರಿಗಣಂ ।
ತಿಳಕ.ದಂತಿರೆ.ತಲೆಯೊಳ್.ಬಂದಿರ್ಕೆ.ಕಾಮಬಾಣಾ ।
ವಳಿಯ.ಪಾಂಗಯ್ದು.ಗಣಮಕ್ಕೆ.ನಡುವಣ.ಕ್ಕರಕೆಸಖೀ ।

ತಾತ್ಪರ್ಯ :— ನಡುವಣಕ್ಕರದ ಪ್ರತಿಪಾದದಲ್ಲಿ ೧ ಬ್ರಹ್ಮಗಣ ೩ ವಿಷ್ಣುಗಣ ೧ ರುದ್ರಗಣ ಬರಬೇಕು. (೫)

## ಎಡೆಯಕ್ಕರಂ

ವನಜ.ಸಂಭವ.ಗಣಮಕ್ಕೆ.ಮೊದಲೊಳತ್ತಲ್ ।
ವನರು. ಹೋದರ.ಗಣಯುಗ.ಳಮುಮಕ್ಕೆರು ।
ದ ನದ ಱಂತ್ಯದೊಳ್ ಬಂದಿರ್ಕೆ.ನಾಲ್ಕೆಗಣ ।
ವನಿತೆ.ವನಿತೆಕೇ.ಳೆಡೆಯಕ್ಕ.ರಕ್ಕೆಸೆಗುಂ ॥

ತಾತ್ಪರ್ಯ :—ಎಡೆಯಕ್ಕರದ ಪ್ರತಿಪಾದದಲ್ಲಿ ೧ ಬ್ರಹ್ಮಗಣ ೨ ವಿಷ್ಣುಗಣ ೧ ರುದ್ರಗಣ ಬರಬೇಕು (೬)

## ಕಿಱಿಯಕ್ಕರಂ

ಪೊಡೆಯ ಲ ರವರಿರ್ವರ್.ಮೊದಲೊಳಿರ್ಕೆ ।
ಜಡೆಯ ಶಂ ಕರನೊರ್ವಂ.ತುದಿಯೊಳಿರ್ಕೆ ।
ಮಡದಿ ಕೇಳ್.ಮೂಱಿಗ.ಣಂಗಳಿರ್ಕೆ ।
ಗಡ ಕಿಱಿ.ಯಕ್ಕರ.ಕ್ಕಿದೆ ಲಕ್ಷಣಂ ॥

ತಾತ್ಪರ್ಯ :—ಕಿಱಿಯಕ್ಕರದ ಪ್ರತಿಪಾದದಲ್ಲಿ ೨ ವಿಷ್ಣುಗಣ ೧ ರುದ್ರಗಣ ಬರಬೇಕು. (೭)

## ತ್ರಿಪದಿ

ಬಿಸರುಹೋ.ದ್ಭವಗಣಂ.ರಸದಶ.ಸ್ಥಾನದೊಳ್.।
ಬಿಸರುಹ.ನೇತ್ರ.ಗಣವೆಂಬ.ಕರ್ಣಾಟದುವು ।
ಬಿಸರುಹ.ನೇತ್ರೇ.ತ್ರಿಪದಿಗೆ.॥

ತಾತ್ಪರ್ಯ :—ತ್ರಿಪದಿಯು ಹನ್ನೊಂದು ಗಣಗಳಲ್ಲಿ ಷಷ್ಠ ದಶಮ ಸ್ಥಾನಗಳಲ್ಲಿ ಬ್ರಹ್ಮಗಣಗಳಿದ್ದು ಇತರ ಸ್ಥಾನಗಳಲ್ಲಿ ವಿಷ್ಣುಗಣಗಳಿರಬೇಕು.

ಭುಜಪಕ್ಷ.ಗತಿಶಿಖಿ.।
ವ್ರಜಗಣ.ಪಾದದೊ.।
ಳಜನಿರ್ದ.ರಸದೊಳ್.ದಶಮದೊಳ್ ಪೆಱಿವಥೋ.
ಕ್ಷಜಗಣ.ಮಾದೊ ಡದು ಚಿತ್ರಂ ॥

ತಾತ್ಪರ್ಯ :— ತ್ರಿಪದಿಯಲ್ಲಿ ಅನುಕ್ರಮವಾಗಿ ಎರಡು-ಎರಡು-ನಾಲ್ಕು ಮೂರು ಗಣಗಳು ಪಾದಗಳಲ್ಲಿ ಇದ್ದು ಷಷ್ಠ ಸ್ಥಾನದಲ್ಲಿಯೂ ದಶಮ ಸ್ಥಾನದಲ್ಲಿಯೂ ಬ್ರಹ್ಮಗಣಗಳಿದ್ದರೆ ಚಿತ್ರ ತ್ರಿಪದಿಯಾಗುವುದು. ಹಿಂದಿನ ಪದ್ಯದಲ್ಲಿ ತ್ರಿಪದಿಯ ಒಟ್ಟು ಗಣ ಸಂಖ್ಯೆಯನ್ನು ಮಾತ್ರ ಸೂಚಿಸಿ ಮತ್ತಿನ ಪದ್ಯದಲ್ಲಿ ಗಣ ವಿನ್ಯಾಸ ಕ್ರಮವನ್ನು ನಿರೂಪಿಸಲಾಗಿದೆ. (೮)

## ವಿಚಿತ್ರ ತ್ರಿಪದಿ

ತುದಿಯೊಳೀ.ಶ್ವರಗಣ.ಮೊದವಿರೆ.ಪದಮೆಲ್ಲಂ.।
ಮದಗಜ.ಗಮನೇ.ಪೇಱಿಗಣ.ಚಿತ್ರದಂ.।
ದಮೊಳಿರ್ದೊ.ಡದುವಿ.ಚಿತ್ರಮಕ್ಕುಂ ॥

ತಾತ್ಪರ್ಯ :—ಅಂತ್ಯಸ್ಥಾನದಲ್ಲಿ ರುದ್ರಗಣವಿದ್ದು ಇತರ ಗಣಗಳು ಚಿತ್ರದಂತೆ ಇದ್ದರೆ ವಿಚಿತ್ರ ತ್ರಿಪದಿಯಾಗುವುದು. ಕೆಲವು ಪ್ರತಿಗಳಲ್ಲಿ "ವಿಚಿತ್ರಮಕ್ಕುಂ" ಎಂಬಲ್ಲಿ "ಚಿತ್ರಲತೆಯಕ್ಕುಂ" ಎಂಬ ಪಾಠಾಂತರವಿದೆ. ಜಯಕೀರ್ತಿ ಛಂದೋನುಶಾಸನದಲ್ಲಿ ವಿಚಿತ್ರವೆಂಬ ಹೆಸರನ್ನು ಕೊಟ್ಟಿರುವುದರಿಂದ ಮೇಲಿನ ಪಾಠವೇ ಸಾಧುವೆನಿಸುತ್ತದೆ. (೯)

## ಏಳೆ

ಭುಜಪಕ್ಷ ಪುರಗಣ.
ವ್ರಜದೊಳಾ.ಜಜಿಗೊಳಕ್ಕು.।
ಮಜಗಣ.ಮೇಳೆ.ಗಿಭಗಶೀ.॥

ತಾತ್ಪರ್ಯ :—ಏಳೆಯ ಪಾದಗಳಲ್ಲಿ ಅನುಕ್ರಮವಾಗಿ ಎರಡು-ಎರಡು-ಮೂರು ಗಣಗಳಿದ್ದು ಷಷ್ಠ ಸ್ಥಾನದಲ್ಲಿ ಬ್ರಹ್ಮಗಣವಿರಬೇಕು. (೧೦)

## ಷಟ್ಪದಿ

ಮಂದರ.ಧರಗಣಂ.।
ಬಂದಿರ್ಕಾ.ಅಂತ್ಯದೊಳ್.।
ಕುಂದದೆ ನೆಲಸುಗೆ.ಮದನಹರಂ.।
ಇಂದುನಿ.ಭಾನನೆ.।
ಮುಂದಣ.ಶಿಜನಿನ್ನೀ.
ಯಂದಮೆ.ಯಾಗಿರೆ.ಷಟ್ಪದಿಕೆ.॥

ತಾತ್ಪರ್ಯ :—ಅನುಕ್ರಮವಾಗಿ ಪೂರ್ವಾರ್ಧದ ಆರು ವಿಷ್ಣುಗಣಗಳೂ ಒಂದು ರುದ್ರಗಣವೂ (೨ವಿ+೨ವಿ+೨ವಿ.೧ರು) ಇದ್ದು ಮುಂದೆಯೂ ಹೀಗೆಯೇ ಇದ್ದರೆ ಷಟ್ಪದಿಯಾಗುವುದು. (೧೧)

## ಚೌಪದಿ [ಗೆ]

ಮದನನ ತಂದೆಯು ಮುಂ ।
ದುದಯಿಸೆ.ಶಂಕರನೊ ।
ಳ್ಪೊದವಿರೆ.ಸಂದುದು ನೋ ।
ಡಿದು ಸತಿ.ಚೌಪದಿಗೆ.॥

ತಾತ್ಪರ್ಯ :—ಚೌಪದಿಯು ಪ್ರತಿಪಾದದಲ್ಲಿ ಒಂದು ವಿಷ್ಣುಗಣವೂ ಒಂದು ರುದ್ರಗಣವೂ ಇರಬೇಕು. (೧೨)

## ಛಂದೋವತಂಸಂ

ಮಂದರ.ಧರಗ.ಣಮೆಸೆ.ದಿರ್ಕೆ.ಮೊದಲೊಳ್ ।
ಬಂದಿರ್ಕೆ.ನಾಲ್ಕೆ.ಡೆಯೊಳಂ.ಬಿಸಜ.ಜನ್ಮಂ.।
ಸಂದಿರೆ.ಲಕ್ಷ್ಣಣಮುವ.ಸಿಯೊಳೀ.ಶಿಜದಿಂ.।
ಛಂದೋವ.ತಂಸ.ಮೆಸೆವು ದಬ್ಜ.ವದನೇ.॥

ತಾತ್ಪರ್ಯ :—ಛಂದೋವತಂಸದ ಪ್ರತಿಪಾದದಲ್ಲಿ ೧ ವಿಷ್ಣುಗಣ ೪ ಬ್ರಹ್ಮಗಳಿರಬೇಕು. (೧೩)

## ಗೀತಿಕೆ

ಎರಡೆಱೊಳಾ.ಱಂಬ.ಸಂಖ್ಯೆಯೊಳ್. ।
ಬರೆಪದ್ಮ.ಭವನುಟ.ದುವುನೆ.ಚ್ಚುವ ತೆಱದಿಂ ।
ದಿರೆ ಮುಂದಣ.ಪಾದಂ.ಮುನ್ನಿನಂ.।
ತಿರೆ ಕರಂ.ಗೀತಿಕೆ.ಯಿಂತ.ಕ್ಕುಂಸಖೀ ॥

ತಾತ್ಪರ್ಯ :—ಪೂರ್ವಾರ್ಧದ ಎರಡನೆಯ ಸ್ಥಾನದಲ್ಲಿ ಮತ್ತು ಆರನೆಯ ಸ್ಥಾನದಲ್ಲಿ ಬ್ರಹ್ಮಗಣಗಳಿದ್ದು ಇತರ ಸ್ಥಾನಗಳಲ್ಲಿ ವಿಷ್ಣು ಅಥವಾ ರುದ್ರಗಣಗಳು (ಮೆಚ್ಚುವ ರೀತಿಯ ಗಣಗಳು) ಬಂದು ಉತ್ತರಾರ್ಧವು ಹೀಗೆಯೇ ಇದ್ದರೆ ಗೀತಿಕೆ ಯಾಗುವುದು.

## ಅಕ್ಕರಿಕೆ

ಮುರರಿಪು.ಬೊಮ್ಮಂ.ಮುರರಿಪು.ಬೊಮ್ಮಂ.ಮುರರಿಪು.ಶೂಲಧರಂ,।
ಸರಸದೆ.ನಿಲ್ಕುಂ.ವರಗಣ.ಮಕ್ಕುಂ.ಸುರುಚಿರ ಮಾತ್ರೆಗಳಿಂ.।
ನಿರುಪಮ.ದಿಂದಂ.ಪರಿಮಿತ.ಮಪ್ಪಂ.ತಿರೆಯತಿ.ವಸುಕರಿಯೊಳ್.।
ಬರೆತರ.ಳಾಕ್ಷೀ.ಧರೆಯೊಳ.ದೆತ್ತಂ.ಕರಮೆಸೆ.ವಕ್ಕರಿಕೆ.॥

ತಾತ್ಪರ್ಯ :—ಅಕ್ಕರಿಕೆಯ ಪ್ರತಿಪಾದದಲ್ಲಿ ವಿಷ್ಣುಬ್ರಹ್ಮ ವಿಷ್ಣುಬ್ರಹ್ಮ ವಿಷ್ಣು ರುದ್ರಗಣಗಳು ಇರಬೇಕು. ಮಾತ್ರಾಬದ್ಧವಾದ ಗಣಗಳು ಬರಬೇಕು. ಎಂಟನೆಯ ಎಂಟನೆಯ ಮಾತ್ರೆಗಳಲ್ಲಿ ಯತಿ ಇರಬೇಕು. ಪ್ರತಿಪಾದದಲ್ಲಿ ಇಪ್ಪತ್ತ ನಾಲ್ಕು ಮಾತ್ರೆಯೂ ಒಂದು ಗುರುವೂ ಬರುತ್ತವೆ. (೧೪)

## ಮದನವತಿ

ಮದನನ.ತಂದೆಯು.ಗಣಮವು.ವಿಷಯದೊ.ಳಿರೆಗುರು.ಮುಂ ।
ದೊದವಿರೆ.ಪದದೊಳ.ಮದಱವೊ.ಲಪ್ಪುದು.ಪರಪದ.ಮುಂ ।
ವಿದಿತಮು.ಪೇಂದ್ರಚ.ತುಷ್ಟಯ.ದಿಂದತ್ತ.ಬ್ಜಜನುಂ ।
ಮದನಹರ ತ್ರಿತಯಂಹರಿ ಕಡೆಗಿರೆಮದ ನವತೀ ॥

ತಾತ್ಪರ್ಯ :—ಮೊದಲ ಪಾದದಲ್ಲಿ ಐದು ವಿಷ್ಣುಗಣಗಳೂ ಒಂದು ಗುರುವೂ ಇರಬೇಕು. ಮುಂದಿನ ಪಾದಗಳಲ್ಲಿ ಇದೇ ರೀತಿಯ ಗಣಗಳಿರಬಹುದು. ೪ ವಿಷ್ಣುಗಣ ಒಂದು ಬ್ರಹ್ಮಗಣ ಬರಬಹುದು. ೩ ರುದ್ರಗಣ ೧ ವಿಷ್ಣುಗಣ ಬರಬಹುದು. ಅಂತೂ ಇದರಲ್ಲಿ ಪ್ರತಿಪಾದದಲ್ಲಿ ಒಟ್ಟು ಇಪ್ಪತ್ತೆರಡು ಮಾತ್ರೆಗಳು ಇರಬೇಕಾಗು ವುದು. (೧೬)

## ಉತ್ಸಾಹಂ

ಭೂಹಿ.ತಾರ್ಥ.ಮೆನಿಸು.ವಜನ.ಗಣಮು.ಪೆಯ್ದ್ದ.ಸಪ್ತ.ಸಂ ।
ದೋಹ.ಮತ್ತ.ಲೊಂದು.ಗುರುಬೆ.ಡಂಗನಾಳ್ದ್ದ.ನಿಲೆಲ.ಯು ।
ಗ್ರಾಹಿ.ಯಾಗಿ.ಮಧುರ.ವಚನ.ರಚನೆ.ವೆತ್ತ.ಬಂದೊ ಡು ।
ತ್ಸಾಹ.ಮೆಂಬ.ಪೆಸಱಿೞೂ.ಳಿಸೆವು.ದಬ್ಜ.ಪತ್ರ.ಲೋಚ.ನೇ॥

ತಾತ್ಪರ್ಯ :—ಪ್ರತಿಪಾದಲ್ಲಿ ತ್ರಿಲಘುವಿನ ಬ್ರಹ್ಮಗಣ ಅಥವಾ ಗುರುಲಘುವಿನ ಬ್ರಹ್ಮಗಣಗಳು ಹೇಗಾದರೂ ಏಳು ಬಂದು ಕೊನೆಗೆ ಗುರುವಿದ್ದರೆ ಉತ್ಸಾಹವಾಗುವುದು. (೧೭)

## ಉತ್ಸಾಹದಂಡಕಂ

ಕಂದ ॥ ಮೃದುಮಧುರವೆನಿಸುವುತ್ಸಾ ।
ಹದಂಡಕಂ ಧರೆಗೆ ನಾಕಿಯೆಂಬಜ ಗಣದಿಂ ।
ಪುದಿದಬಲೆ ಕಡೆಯು ಗುರು ಚೆ ।
ಲ್ವೊದವಿರೆ ಲಕ್ಷಣ ನಿಯುಕ್ತಮೆನೆ ಪೆಸರ್ವಡೆಗುಂ ॥

ತಾತ್ಪರ್ಯ : —ಪ್ರತಿಪಾದದಲ್ಲಿ ತ್ರಿಲಘುವಿನ ಬ್ರಹ್ಮಗಣ ಅಥವಾ ಗುರುಲಘುಗಳ ಬ್ರಹ್ಮಗಣಗಳು ಯಥೇಷ್ಟವಾಗಿ ಬಂದು ಕೊನೆಗೆ ಗುರು ನಿಂತರೆ ಉತ್ಸಾಹದಂಡಕವಾಗುವುದು. ನಾಗವರ್ಮನು ಉತ್ಸಾಹದಂಡಕದ ಲಕ್ಷಣವನ್ನು ಕಂದದಲ್ಲಿ ಸೂಚಿಸಿರುವನು: (೧೮)

## ಆಕರ – ಅಡಿಟಿಪ್ಪಣಿ

೧. ಪ್ರಬುದ್ಧ ಕರ್ಣಾಟಕ–ಸಂಪುಟ ೪೬, ಸಂಚಿಕೆ ೨ (1964)

೨. ಕನ್ನಡ ನುಡಿ–ಸಂಪುಟ ೨೮ ಸಂಚಿಕೆ ೪ ಮತ್ತು ಸಂಪುಟ ೨೯, ಸಂಚಿಕೆ ೬ (1965–66)

೩. ಇದಕ್ಕೆಛಂದೋನುಶಾಸನದಲ್ಲಿ ಮಹಾಕ್ಷರಾ ಎಂಬಹೆಸರಿದೆ. ಛಂದೋನುಶಾಸನ–ಛಂದೋದರ್ಪಣಗಳಲ್ಲಿ ಪಿರಿಯಕ್ಕರದ ಪಾದಾದಿಯ ಬ್ರಹ್ಮಗಣ ಸ್ಥಾನದಲ್ಲಿ ವೈಕಲ್ಪಿಕವಾಗಿ ವಿಷ್ಣುಗಣವನ್ನು ಪ್ರಯೋಗಿಸಬಹುದೆಂದು ಸೂಚಿಸಲಾಗಿದೆ.

೪. ಛಂದೋನುಶಾಸನದಲ್ಲಿ ಇದನ್ನು ಸಮಾನಾಕ್ಷರಾ ಎಂದಿದೆ.

೫. ಛಂದೋನುಶಾಸನದಲ್ಲಿ ಮಧ್ಯಮಾಕ್ಷರಾ ಎಂದಿದೆ.

೬. ಛಂದೋನುಶಾಸನದಲ್ಲಿ ಅಂತರಾಕ್ಷರಾ ಎಂದಿದೆ.

೭. ಛಂದೋನುಶಾಸನದಲ್ಲಿ ಅಲ್ಪಾಕ್ಷರಾ ಎಂದಿದೆ.

೮. ಛಂದೋನುಶಾಸನ–ಛಂದೋದರ್ಪಣಗಳಲ್ಲಿ ತ್ರಿಪದಿಯ ಏಳನೆಯ ಮತ್ತು ಹನ್ನೊಂದನೆಯ ಗಣಗಳು ಲಘ್ವಾದಿ ವಿಷ್ಣುಗಣಗಳಾಗಬೇಕೆಂದೂ ಇವುಗಳ ಅಂತ್ಯದಲ್ಲಿ ಯತಿಯಿರಬೇಕೆಂದೂ ನಿರೂಪಿಸಲಾಗಿದೆ.

೯. ಛಂದೋನುಶಾಸನ ಛಂದೋದರ್ಪಣಗಳಲ್ಲಿ ವಿಚಿತ್ರಾ ತ್ರಿಪದಿಯ ಅಂತ್ಯಸ್ಥಾನದಲ್ಲಿ ಗುರ್ವಾದಿರುದ್ರಗಣವಿರಬೇಕೆಂದು ಸ್ಪಷ್ಟಪಡಿಸಲಾಗಿದೆ.

೧೦. ಛಂದೋನುಶಾಸನದಲ್ಲಿ ಇದಕ್ಕೆ ಏಲಾ ಎಂದು ಹೆಸರು.

೧೧. ಛಂದೋನುಶಾಸನ–ಛಂದೋದರ್ಪಣಗಳಲ್ಲಿ ಷಟ್ಪದಿಯ ಪ್ರತಿಪಾದದ ಲಕ್ಷಣವನ್ನು ವಿವರಿಸಲಾಗಿದೆ. ಪದ್ಯಾರ್ಧದ ಪ್ರಥಮಪಾದದಲ್ಲಿ ಎರಡು ವಿಷ್ಣು, ದ್ವಿತೀಯ ಪಾದದಲ್ಲಿ ಎರಡು ವಿಷ್ಣು, ತೃತೀಯ ಪಾದದಲ್ಲಿ ಎರಡು ವಿಷ್ಣು ಒಂದು ರುದ್ರಗಣ ಬರಬೇಕೆಂದೂ ನಿರೂಪಿಸಲಾಗಿದೆ.

೧೨. ಛಂದೋನುಶಾಸನದಲ್ಲಿ ಇದಕ್ಕೆ ಚತುಷ್ಪದಿಕಾ ಎಂದು ಹೆಸರಿದೆ.

೧೩. ಹಿಂದೆ ಪ್ರಬುದ್ಧ ಕರ್ಣಾಟಕದಲ್ಲಿ ನಾನು ತಿದ್ದಿ ಬರೆದಿದ್ದ ಛಂದೋವತಂಸದ ಲಕ್ಷಣವು ಸರಿಯಲ್ಲ. ಶ್ರೀ ಡಾ। ಡಿ.ಯಸ್. ಕರ್ಕಿಯವರೂ ಶ್ರೀ ಸೇಡಿಯಾಪು ಕೃಷ್ಣಭಟ್ಟರೂ ಬರೆದ ಹಿಂದಿನ ಲೇಖನಗಳನ್ನು ನೋಡಿ ತಿದ್ದಿದ್ದೆನು. ಆದರೆ ಛಂದೋನುಶಾಸನವನ್ನು ಪರಿಶೀಲಿಸಿ ಈಗ ಛಂದೋವತಂಸವನ್ನು ಈ ರೀತಿಯಲ್ಲಿ ಪರಿಷ್ಕರಿಸಿ ನಿರೂಪಿಸಿರುವೆನು. ಛಂದೋದರ್ಪಣದಲ್ಲಿ ಇದೇ ಲಕ್ಷಣವನ್ನು ವಿವರಿಸಿರುವೆನು. ಸೇಡಿಯಾಪು ಕೃಷ್ಣಭಟ್ಟರೂ ಹೀಗೆಯೇ ಲಕ್ಷಣವನ್ನು ವಿವರಿಸಿರುವರು.

೧೪. ಛಂದೋನುಶಾಸನ ಛಂದೋದರ್ಪಣಗಳಲ್ಲಿ ಗೀತಿಕೆಯ ಲಕ್ಷಣವು ಸ್ಪಷ್ಟವಾಗಿದೆ. ಪದ್ಯಾರ್ಧದ ವಿಷಮ ಪಾದದಲ್ಲಿ ಮೂರು ಗಣಗಳೂ ಸಮಪಾದದಲ್ಲಿ ಐದು ಗಣಗಳೂ ಇದ್ದು ಎರಡನೆಯ ಆರನೆಯ ಸ್ಥಾನದಲ್ಲಿ ಬ್ರಹ್ಮಗಣವೂ ಇತರ ಸ್ಥಾನಗಳಲ್ಲಿ ವಿಷ್ಣು ಅಥವಾ ರುದ್ರಗಣಗಳೂ ಬರಬೇಕೆಂದಿದೆ. ಲಕ್ಷಣಕ್ಕೆ ಸರಿಹೊಂದದ ಗೀತಿಕೆಗಳಿಗೆ ಛಂದೋದರ್ಪಣದಲ್ಲಿ ಸಮಗೀತಿಕೆ ವಿಷಮಗೀತಿಕೆಗಳೆಂಬ ಎರಡು ಪ್ರಭೇದಗಳನ್ನು ಕಲ್ಪಿಸಿ ಲಕ್ಷಣ ನಿರೂಪಣೆ ಮಾಡಲಾಗಿದೆ.

೧೫. ಛಂದೋದರ್ಪಣದಲ್ಲಿ ಇದಕ್ಕೆ ಅಕ್ಷರಿಕಾ ಎಂಬ ಹೆಸರಿದೆ.

೧೬. ಛಂದೋನುಶಾಸನ ಛಂದೋದರ್ಪಣಗಳಲ್ಲಿ ಇದರ ಲಕ್ಷಣ ನಿರೂಪಣೆ ಸ್ವಲ್ಪ ವ್ಯತ್ಯಾಸವಾಗಿದೆ. ಮದನವತಿಯ ಪ್ರಥಮ ಪಾದದಲ್ಲಿ ಇಪ್ಪತ್ತು ಲಘು

ಮತ್ತು ಒಂದು ಗುರುವೂ ಇದ್ದು, ಮುಂದಿನ ಪಾದಗಳಲ್ಲಿ ೪ ವಿಷ್ಣುಗಣ ಮತ್ತು ಒಂದು ಬ್ರಹ್ಮಗಣವೂ ಬಂದು, ಪ್ರತಿಪಾದದಲ್ಲಿ ಇಪ್ಪತ್ತೆರಡು ಮಾತ್ರೆ ಗಳಿರಬೇಕೆಂದು ಬರೆಯಲಾಗಿದೆ. ನಾಗವರ್ಮನು ಸೂಚಿಸಿದ ಮೂರನೆಯ ವಿಧದ ಗಣ ವಿನ್ಯಾಸವನ್ನು ನಿರೂಪಿಸಲಿಲ್ಲ.

೧೭. ಉತ್ಸಾಹದ ಆದಿಯ "ಭೂಹಿತಾರ್ಥ" ಎಂಬ ಪದವನ್ನು ಕನ್ನಡ ಛಂದೋಗತಿ ಯಲ್ಲಿ ಶ್ರೀ ಸೇಡಿಯಾಪು ಕೃಷ್ಣಭಟ್ಟರು "ಊಹಿತಾರ್ಥ" ಎಂದು ತಿದ್ದಿದ್ದಾರೆ. ಉತ್ಸಾಹವು ಮಾತ್ರಾಗಣಬಂಧವಾದುದರಿಂದ ಇದರ ಮತ್ತು ಇದಕ್ಕೆ ಸಂಬಂಧಿಸಿದ ಇತರ ಛಂದಃ ಪ್ರಭೇದಗಳನ್ನು ಜಯಕೀರ್ತಿ ಪಷ್ಠಾಧಿಕಾರದಲ್ಲಿ ಬರೆದಿರುವನು. ಛಂದೋದರ್ಪಣದ ಪಂಚಮಾಧ್ಯಾಯದಲ್ಲಿ ಇವುಗಳ ಲಕ್ಷಣ ವನ್ನು ವಿವರಿಸಿರುತ್ತೇನೆ.

೧೮. ಛಂದೋನುಶಾಸನದಲ್ಲಿ ಇದಕ್ಕೆ ಉತ್ಸವದಂಡಕವೆಂಬ ಹೆಸರಿಟ್ಟು ಒಂದು ಪಾದದ ಲಕ್ಷಣವನ್ನು ಲಕ್ಷ್ಯ ಪದ್ಯದಲ್ಲಿ ನಿರೂಪಿಸಲಾಗಿದೆ. ಛಂದೋ ದರ್ಪಣದಲ್ಲಿ ಇದರ ಲಕ್ಷಣವನ್ನು ಒಂದು ಲಕ್ಷ್ಯ ಪದ್ಯದಲ್ಲಿ ವಿವರಿಸ ಲಾಗಿದೆ.

## ಅಭ್ಯಾಸ ಗ್ರಂಥ ಸೂಚಿ


೧. ಛಂದೋಂಬುಧಿ — ಸಂ। ರೆವರೆಂಡ್ ಎಫ್ ಕಿಟ್ಟೆಲ್‌ರವರು
೨. ,, — ಸಂ। ಶೇಷ ಅಯ್ಯಂಗಾರರರು ಮತ್ತು ರಾಮಸ್ವಾಮಿ ಅಯ್ಯಂಗಾರರು
೩. ,, — ಸಂ। ಎಂ. ಎ. ರಾಮಾನುಜಅಯ್ಯಂಗಾರರು
೪. ,, — ಸಂ। ಕೆ. ರಾಮಚಂದ್ರರಾಯರು
೫. ,, — ಸಂ। ಕುಕ್ಕಿಲ ಕೃಷ್ಣಭಟ್ಟರು.
೬. ಕನ್ನಡ ಛಂದಸ್ಸಂಪುಟ — ಸಂ। ಎಲ್. ಬಸವರಾಜುಅವರು
೭. ಜಯದಾಮನ್ — ಸಂ। ಎಚ್. ಡಿ. ವೇಲಣಕರರು
೮. ಮಾನಸೋಲ್ಲಾಸ — ಚಾಲುಕ್ಯರಾಜ, ಸೋಮೇಶ್ವರ
೯. ಕನ್ನಡ ಕೈಪಿಡಿ — ವಿವಿಧ ಲೇಖಕರು
೧೦. ಕನ್ನಡ ಛಂದೋವಿಕಾಸ — ಲೇ। ಡಾ. ಡಿ.ಯಸ್. ಕರ್ಕಿಯವರು
೧೧. ಕನ್ನಡ ಛಂದಸ್ಸಿನ ಚರಿತ್ರೆ — ವಿವಿಧ ಲೇಖಕರು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟನೆ
೧೨. ಕನ್ನಡ ಛಂದಸ್ಸು — ಲೇ। ಸೇಡಿಯಾಪು ಕೃಷ್ಣಭಟ್ಟರು
೧೩. ಛಂದೋದರ್ಪಣಂ — ಲೇ। ಕ. ಪು. ಸೀತಾರಾಮ ಕೆದಿಲ್ಲಾಯ


— ೦ —

# ವರ್ತಮಾನ ಕಾಲ

— ಎನ್. ರಂಗನಾಥಶರ್ಮ

ನಮ್ಮ ಸರ್ವ ವ್ಯವಹಾರವೂ ಕಾಲವನ್ನಾಶ್ರಯಿಸಿಕೊಂಡಿದೆ. ಹಗಲು, ರಾತ್ರಿ, ದಿನ, ವಾರ, ತಿಂಗಳು, ವರ್ಷ–ಇವೆಲ್ಲವೂ ಕಾಲ ವಿಭಾಗಗಳು. ಇಂದು, ನಾಳೆ, ನಾಡಿದ್ದುಗಳೂ ಕಾಲವಿಭಾಗಗಳು. ಹತ್ತಿರ, ದೂರ, ಮೆಲ್ಲಗೆ, ಬೇಗನೆ–ಇವನ್ನೂ ಕಾಲದ ಗಣನೆಯಿಂದಲೇ ವಿಂಗಡಿಸಬೇಕಾಗುತ್ತದೆ. ಆತನ ವಯಸ್ಸು 30 ವರ್ಷ ಎನ್ನುತ್ತೇವೆ. ವಯಸ್ಸು ಎಂದರೇನು? ದೇಹಕ್ಕೆ ಅವಸ್ಥಾವಿಶೇಷವನ್ನುಂಟುಮಾಡುವ ಕಾಲಪರಿಮಾಣವೇ ವಯಸ್ಸು. ಬಾಲ್ಯ, ತಾರುಣ್ಯ, ಮುಪ್ಪು,—ಇವು ಕಾಲ ಪರಿಣಾಮದಿಂದ ಆದ ಅವಸ್ಥಾವಿಶೇಷಗಳು. ಸಮಸ್ತ ಪದಾರ್ಥಗಳ ಉತ್ಪತ್ತಿ ಸ್ಥಿತಿನಾಶಗಳಿಗೆ ಕಾರಣವಾದದ್ದು ಕಾಲ. ಬೀಜ ಮೊಳೆಯಿತು, ಬಳ್ಳಿ ಚಿಗುರಿತು, ಹೂವಾಯಿತು, ಹಣ್ಣಾಯಿತು–ಎಂಬಲ್ಲಿ ಒಂದು ಕ್ರಮವು ಕಂಡುಬರುತ್ತದೆ. ಹಾಗೆಯೇ ಮಗು ಹುಟ್ಟಿತು, ಬೆಳೆಯಿತು, ಯೌವನ ಬಂದಿತು—ಇತ್ಯಾದಿ ವ್ಯವಹಾರಗಳಲ್ಲಿಯೂ ಕ್ರಮ ಉಂಟು. ಈ ಕ್ರಮವು ಕಾಲಕೃತವಾದದ್ದು ಕ್ರಮರಹಿತವಾದ ಲೋಕಕ್ಕೆ ಒಂದು ಕ್ರಮವನ್ನು ಕಲ್ಪಿಸಿಕೊಡುವುದೇ ಕಾಲ. ವಾಕ್ಯಪದೀಯದಲ್ಲಿ ಭರ್ತೃಹರಿ ಹೇಳುತ್ತಾನೆ—

ನಿರ್ಭಾಗಸೋಽಪಗಮೋ ಯೋಽಯಂ ಕ್ರಮವಾನಿವ ದೃಶ್ಯತೇ ।
ಅಕ್ರಮಸ್ಯಾಪಿ ವಿಶ್ವಸ್ಯ ತತ್‌ಕಾಲಸ್ಯ ವಿಚೇಷ್ಟಿತಮ್ ।

-ಕಾಲ. ೪೬

"ವಿಶ್ವದ ಪ್ರತಿಯೊಂದು ವಸ್ತುವೂ ಪ್ರಕಾಶಕ್ಕೆ ಬಂದು ತನ್ನ ಸ್ವರೂಪವನ್ನು ಕಾಣಿಸಿಕೊಂಡಾಗ ಸರ್ವವೂ ಒಂದು ಕ್ರಮಕ್ಕೆ ಒಳಪಟ್ಟಿರುವಂತೆ ಕಾಣುತ್ತದೆ. ಕ್ರಮವಿರುವಂತೆ ತೋರಿಸಿಕೊಡುವುದು ಕಾಲದ ಚೇಷ್ಟೆ."

ಈ ಕಾಲವು ಶರತ್ಕಾಲಾದಿ ರೂಪದಿಂದ ವಿಭಿನ್ನ ತರುಲತೆಗಳ ಫಲಪುಷ್ಪಾದಿ ಪ್ರಸವಶಕ್ತಿಯನ್ನು ತಡೆಯುತ್ತದೆ. ವಸಂತಾದಿ ರೂಪದಿಂದ ಅವನ್ನು ಚಿಗುರಿಸಿ ಅವುಗಳಲ್ಲಿರುವ ಶಕ್ತಿಯನ್ನು ಅನುಗ್ರಹಿಸುತ್ತದೆ. ಬಾಲ್ಯದಲ್ಲಿ ಪ್ರಾಣಿಗಳ ಕಾಮವಾಸನೆಯು ಪ್ರಬುದ್ಧವಾಗದಂತೆ ತಡೆಯುತ್ತದೆ. ಯೌವನದಲ್ಲಿ ಅದನ್ನು ಕೆರಳಿಸುತ್ತದೆ. ಮುಪ್ಪಿನಲ್ಲಿ ಅಡಗಿಸುತ್ತದೆ. ಸಕಲ ಸ್ಥಾವರ ಜಂಗಮಗಳ ಆಕೃತಿ, ಶಕ್ತಿ, ಅಧಿಕಾರಗಳ ಉತ್ಪತ್ತಿ, ಸ್ಥಿತಿ, ವೃದ್ಧಿ, ಕ್ಷಯ, ನಾಶಗಳು ಕಾಲಕ್ಕೆ ಅಧೀನವಾದವು. 'ಕಲಯತೀತಿ ಕಾಲಃ' ಸಕಲ ಪದಾರ್ಥಗಳನ್ನು ತನ್ನ ಸಾಮರ್ಥ್ಯದಿಂದ ಪರಿಣಾಮಗೊಳಿಸತಕ್ಕದ್ದು ಕಾಲ. ಶಾಸ್ತ್ರಕಾರರು 'ಸರ್ವಾಧಾರಃ ಕಾಲಃ' ಎನ್ನುತ್ತಾರೆ. ಪದಾರ್ಥಮಾತ್ರಕ್ಕೆ ಆಧಾರವಾದದ್ದು ಕಾಲ.

ಹೀಗೆ ನಮ್ಮ ವ್ಯವಹಾರದಲ್ಲಿ ಕಾಲವು ಹಾಸುಹೊಕ್ಕಾಗಿ ಸೇರಿಕೊಂಡು ಬಿಟ್ಟಿದೆ. ಇಷ್ಟು ಪರಿಚಿತವಾಗಿದ್ದರೂ ಕಾಲವೆಂದರೆ ಯಾವುದು? ಅದರ ಸ್ವರೂಪ ವೇನು? ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಕಠಿನ! ಮನಸ್ಸಿಗೆ ತಿಳಿಯುತ್ತದೆ, ಮಾತಿನಿಂದ ಹೇಳಲು ಬರುವುದಿಲ್ಲ—ಎಂಬಂತಾಗಿದೆ. ಕಣ್ಣು-ಮುಂತಾದ ಇಂದ್ರಿಯಗಳಿಗೆ ಗೋಚರವಲ್ಲವಾದ್ದರಿಂದ ಕಾಲವನ್ನು ಪ್ರತ್ಯಕ್ಷವೆನ್ನಲಾಗುವುದಿಲ್ಲ. ನೈಯಾಯಿಕರು ಹೇಳುವುದೇನೆಂದರೆ—

ಅತೀತಾದಿ ವ್ಯವಹಾರ ಹೇತುಃ ಕಾಲಃ । ಸ ಚೈಕೋ ವಿಭುರ್ನಿತ್ಯಶ್ಚ ।
— ತರ್ಕಸಂಗ್ರಹ

'ಅತೀತ-ಆಗಾಮಿ-ವರ್ತಮಾನ ಮುಂತಾದ ವ್ಯವಹಾರಕ್ಕೆ ಯಾವುದು ಕಾರಣವೋ ಅದು ಕಾಲ. ಕಾಲವಿರುವುದು ಒಂದೇ. ಅದು ವಿಭುವೂ ನಿತ್ಯವೂ ಆಗಿದೆ.

ಒಂದು ಕ್ರಿಯೆ ನಡೆದು ಹೋಯಿತು, ಮುಂದೆ ನಡೆಯುವುದು, ಈಗ ನಡೆಯುತ್ತಿದೆ ಎಂದು ಜನರು ಹೇಳುತ್ತಾರಲ್ಲವೆ? ಈ ರೀತಿಯಲ್ಲಿ ಭೂತ ಭವಿಷ್ಯದ್ ವರ್ತಮಾನಗಳ ವ್ಯವಹಾರಕ್ಕೆ ನಿಮಿತ್ತವೇನು? ನಿಮಿತ್ತವಿಲ್ಲದೆ ವ್ಯವಹಾರವು ಬರಲು ಶಕ್ಯವಿಲ್ಲ. ಇದಕ್ಕೆ ಮೂಲಭೂತವಾದ ನಿಮಿತ್ತ ಯಾವುದೋ ಅದು ಕಾಲ. ಅದು ಅಖಂಡವಾದ ಒಂದೇ ವಸ್ತು. ಸರ್ವವ್ಯಾಪಿಯಾದ್ದರಿಂದ ವಿಭು. ಅಂತ್ಯವೇ ಇಲ್ಲವಾದ್ದರಿಂದ ನಿತ್ಯವೆಂದು ಒಪ್ಪಬೇಕು.

ಕಾಲವು ವಿಭುವೆಂದೂ ನಿತ್ಯವೆಂದೂ ಒಪ್ಪಬಹುದು. ಆದರೆ ಅದು ಅಖಂಡವಾದ ಒಂದೇ ವಸ್ತುವೆಂದು ಹೇಳುವುದು ಹೇಗೆ? ಅದು ಅಖಂಡವಾದಲ್ಲಿ ಭೂತ ಭವಿಷ್ಯದ್ ವರ್ತಮಾನಗಳೆಂಬ ಭೇದವಿರುವುದು ಹೇಗೆ? ಇಂದು ನಾಳೆ-ಮುಂತಾದ ವ್ಯವಹಾರವೂ ಕೂಡದೆ ಹೋಗುತ್ತವೆಯೆಂಬ ಆಕ್ಷೇಪ ಮೊದಲಿನಂತೆ ಉಳಿದುಕೊಳ್ಳುತ್ತದೆ. ಇದಕ್ಕಾಗಿ ದಾರ್ಶನಿಕರು ಹೇಳುವುದೇನೆಂದರೆ—ಉಪಾಧಿಭೇದದಿಂದ ಕಾಲವೂ ಸಖಂಡವಾಗಿ ಬೇರೆ ಬೇರೆ ಇರುವಂತೆ ತೋರುತ್ತದೆ. ವ್ಯವಹಾರಕ್ಕೆ ಉಪಾಧಿಭೇದವೇ ನಿಮಿತ್ತ ಎಂದು. ಉಪಾಧಿ ಎಂದರೇನು? ಉಪ=ಸಮೀಪದಲ್ಲಿದ್ದುಕೊಂಡು, ಆಧಿ=ತನ್ನ ಸ್ವರೂಪವನ್ನು ಇನ್ನೊಂದರಲ್ಲಿ ಆಧಾನ ಮಾಡತಕ್ಕದ್ದು ಉಪಾಧಿ. ಗಾಜಿನ ಹಲಗೆಯ ಕೆಳಗಿರುವ ಕೆಂಪು ಬಣ್ಣದ ಕಾಗದ ಗಾಜಿಗೆ ಉಪಾಧಿ. ಅದು ತನ್ನ ಕೆಂಪು ಬಣ್ಣವನ್ನು ಗಾಜಿನ ಹಲಗೆಯಲ್ಲಿರುವಂತೆ ಮಾಡುತ್ತದೆ. ಹಳದಿಯ ಕಾಗದದಿಂದ ಗಾಜು ಹಳದಿಯಾಗಿರುವಂತೆಯೂ ಕಪ್ಪು ಕಾಗದದಿಂದ ಗಾಜು ಕಪ್ಪಾಗಿರುವಂತೆಯೂ ಕಾಣುತ್ತದೆ. ಕಾಗದವು ಗಾಜಿಗೆ ಉಪಾಧಿ. ತನ್ನ ಧರ್ಮವನ್ನು ಇನ್ನೊಂದರಲ್ಲಿ ಅಭಿವ್ಯಂಜಿಸತಕ್ಕದ್ದು ಅದಕ್ಕೆ ಉಪಾಧಿ. ಹಾಗಾದರೆ ಕಾಲಕ್ಕೆ ಉಪಾಧಿ ಯಾವುದು?

ಕ್ರಿಯೆಯೇ ಕಾಲಕ್ಕೆ ಉಪಾಧಿ. ಇದು ನಾವು ಮಾಡುವ ಯಾವುದೇ ಕ್ರಿಯೆಯಾದರೂ ಆಗಬಹುದು. ಆದರೆ ಸರ್ವದಾ ಸರ್ವತ್ರ ಇದ್ದು ಸರ್ವಜನರ ವ್ಯವಹಾರಕ್ಕೂ ಕಾರಣವಾದ ಒಂದು ಕ್ರಿಯೆಯನ್ನು ಆಶ್ರಯಿಸುವುದು ಉತ್ತಮ. ಅದೇ ಸೂರ್ಯನ ಕ್ರಿಯೆ, ಸೂರ್ಯಗತಿ, ಸೂರ್ಯಸ್ಪಂದ. ಭೂಮಿಯು ತಿರುಗುತ್ತದೆಯೆಂಬ ವೈಜ್ಞಾನಿಕ ಸಿದ್ಧಾಂತದಲ್ಲಿಯೂ ಸೂರ್ಯನಿಗೆ ಚಲನೆಯುಂಟು[1]. ಒಂದು ವೇಳೆ ಆತನಿಗೆ ಚಲನೆಯಿಲ್ಲದಿದ್ದರೂ ಚಲನೆಯಿರುವಂತೆ ನಮಗೆ ಕಾಣುವುದರಿಂದ ಲೋಕವ್ಯವಹಾರವು ನಡೆಯಲೇನೂ ಅಡ್ಡಿಯಿಲ್ಲ. ವಿಜ್ಞಾನಿಗಳೂ ವ್ಯವಹಾರಕ್ಕಾಗಿ ಸೂರ್ಯೋದಯ, ಸೂರ್ಯಾಸ್ತಗಳನ್ನೊಪ್ಪುತ್ತಾರಲ್ಲವೆ? ಸೂರ್ಯನ ಚಲನಕ್ರಿಯೆಯಲ್ಲಿ ಅನಂತಸ್ಪಂದಗಳು ನಡೆಯುತ್ತಲೇ ಇರುತ್ತವೆ. ದರ್ಶನಯೋಗ್ಯನಾದ ಸೂರ್ಯನ ಸ್ಪಂದಗಳಿಗೆ ಆಶ್ರಯವಾದ ಕಾಲ ಹಗಲು. ದರ್ಶನಯೋಗ್ಯನಾಗದಿರುವ ಸೂರ್ಯನ ಸ್ಪಂದಗಳಿಗೆ ಆಶ್ರಯವಾದ ಕಾಲ ರಾತ್ರಿ. ಹಗಲುರಾತ್ರಿಗಳ ಸಮುದಾಯ ಒಂದು ದಿನ. ಹೀಗೆಯೇ ದಿನಗಳ ಸಮುದಾಯವನ್ನು ವಾರ, ಪಕ್ಷ, ತಿಂಗಳು, ವರ್ಷಗಳೆಂದು ವಿಂಗಡಿಸಿಕೊಳ್ಳಬಹುದು. ದಿನದ ಅಂತರ್ವಿಭಾಗವನ್ನು ಪೂರ್ವಾಹ್ಣ, ಅಪರಾಹ್ಣ, ಘಂಟೆ, ನಿಮಿಷ, ಸೆಕೆಂಡ್ ಇತ್ಯಾದಿಯಾಗಿ ವಿಭಜಿಸಿಕೊಳ್ಳಬಹುದು. ಸಾರ್ವತ್ರಿಕವಾದ ಲೋಕವ್ಯವಹಾರಕ್ಕೆ ಸೂರ್ಯಸ್ಪಂದವು ಕಾಲೋಪಾಧಿಯಾಗುತ್ತದೆ. ವೈಯಕ್ತಿಕವಾದ ವ್ಯವಹಾರಕ್ಕೆ ನಮ್ಮನಮ್ಮ ಕ್ರಿಯೆಯೂ ಉಪಾಧಿಯಾಗಬಹುದು. 'ನಾನು ಬರೆಯುವಾಗ ಮಾತಾಡಿಸಬಾರದು' ಎಂಬಲ್ಲಿ ಬರೆಯುವ ಕ್ರಿಯೆಯೇ ಕಾಲೋಪಾಧಿಯಾಗಬಹುದು. ದೈಹಿಕವಾದ ಯಾವ ಚೇಷ್ಟೆಯನ್ನೂ ಮಾಡದೆ ಸುಮ್ಮನೆ ಕುಳಿತಿದ್ದಾಗ ಉಸಿರಾಟದ ಕ್ರಿಯೆಯಿಂದ ಅಥವಾ ಮಾನಸಕ್ರಿಯೆಯಿಂದ ಕಾಲವನ್ನು ಸಖಂಡವಾಗಿ ಮಾಡಿಕೊಳ್ಳುತ್ತೇವೆ. ಗಡಿಯಾರದ ಮುಳ್ಳಿನ ಚಲನೆಯೂ ಕಾಲಕ್ಕೆ ಉಪಾಧಿಯಾಗುತ್ತದೆ. ಸಾರಾಂಶವೇನೆಂದರೆ: ಕಾಲವು ಸಖಂಡವಾಗಿ ಅಳತೆಗೆ ಸಿಕ್ಕುವುದು ಕ್ರಿಯೆಯಿಂದ ಮಾತ್ರ. ಹೀಗೆ ಕ್ರಿಯೆಯಿಂದ ಪರಿಚ್ಛಿನ್ನವಾದ ಕಾಲವು ಇನ್ನೊಂದು ಕ್ರಿಯೆಗೆ ನೇರವಾಗಿ ಅನ್ವಯಿಸುತ್ತದೆ. ಆದ್ದರಿಂದ ಕಾಲವಾಚಕ ಶಬ್ದಗಳು ಕ್ರಿಯೆಗೆ ವಿಶೇಷಣವಾಗಿರುವುದು ಸಹಜ. ಕ್ರಿಯೆಯ ಮೂಲಕ ಇತರ ದ್ರವ್ಯಗಳಿಗೆ ವಿಶೇಷಣವಾಗಬಹುದು. ಉದಾಹರಣೆಗೆ, 'ರಾಮನು ಹಗಲು ಊಟ ಮಾಡುತ್ತಾನೆ'-ಎಂಬ ವಾಕ್ಯವನ್ನು ಪರಿಶೀಲಿಸಬಹುದು.

---

[1] It is found that the SUN is travelling, with reference to the stars in its neighbourhood, with a speed of approximately 12 miles per second nearly in the direction of the bright star VEGA

—The origin of the earth by W. M. Smart (Page 181)

ಸೂರ್ಯಕ್ರಿಯಾಪರಿಚ್ಛಿನ್ನವಾದ ಕಾಲ ಹಗಲು. ಇದು ಭೋಜನಕ್ರಿಯೆಗೆ ಆಧಾರವಾಗಿ ವಿಶೇಷಣವಾಗಿದೆ. ಭೋಜನಕ್ರಿಯೆಯು ಮೂಲಕ ರಾಮುಸಿಗೂ ಆಧಾರವಾಗಿದೆ. ಆದ್ದರಿಂದ ಕಾಲವನ್ನು ಸರ್ವಾಧಾರವೆಂದೂ ಸರ್ವಕ್ರಿಯೆಗಳಿಗೆ ನಿಮಿತ್ತ ಕಾರಣವೆಂದೂ ಹೇಳುತ್ತಾರೆ. ಕ್ರಿಯೆಯೊಡನೆ ಕಾಲಕ್ಕೆ ನಿಕಟವಾದ ಸಂಬಂಧ ಉಂಟು. ಕ್ರಿಯೆಯಿಂದ ಅಳತೆಗೊಳಪಟ್ಟು ಸಖಂಡವಾದ ಕಾಲವು ಕ್ರಿಯೆಗೂ ವಿಶೇಷಣವಾಗಿ ಭೇದಕವಾಗಬಲ್ಲುದು. ಭರ್ತೃಹರಿಯು ವಾಕ್ಯಪದೀಯದಲ್ಲಿ—

ಕ್ರಿಯಾಭೇದಾಯ ಕಾಲಸ್ತು ಸಂಖ್ಯಾ ಸರ್ವಸ್ಯ ಭೇದಿಕಾ ।

—ಕಾಲಸಮುದ್ದೇಶ-೨

ಎಂದು ಹೇಳಿದ್ದಾನೆ. ಕಾಲವು ಕ್ರಿಯೆಗೆ ವಿಶೇಷಣ. ಸಂಖ್ಯೆಯು ಸರ್ವ ಪದಾರ್ಥಗಳಿಗೂ ವಿಶೇಷಣ. ವಿಶೇಷಣವೆಂದರೆ ಭೇದಕ. ಒಂದನ್ನು ಇನ್ನೊಂದರಿಂದ ವ್ಯಾವೃತ್ತಿಗೊಳಿಸತಕ್ಕದ್ದು ಭೇದಕ. ಪಕ್ಷ, ಮಾಸ, ಸಂವತ್ಸರ-ಮೊದಲಾದ ಕಾಲವಾಚಕಗಳು ಸೂರ್ಯಕ್ರಿಯೆಗಳನ್ನು ಅಳತೆಮಾಡುವುದರಿಂದ ಭೇದಕಗಳಾಗುತ್ತವೆ. ಸಂಖ್ಯೆಯು ಕ್ರಿಯೆಗೂ ಸಹ ವಿಶೇಷಣವಾಗಿ ಭೇದಕವೆನಿಸಬಲ್ಲದು. ಎರಡು ಕ್ರಿಯೆ, ಮೂರು ಕ್ರಿಯೆ ಎಂದು ವ್ಯವಹಾರ ಉಂಟಷ್ಟೆ.

ಪ್ರತಿಯೊಂದು ಪದಾರ್ಥದಲ್ಲಿರುವ ಸ್ವಾಭಾವಿಕ ಶಕ್ತಿಯನ್ನು ಅರಳಿಸಿ, ಉಳಿಸಿ, ಅಳಿಸಿಹಾಕತಕ್ಕದ್ದು ಕಾಲ. ಚಿಗುರೆಲೆ ಹಸಿರುಬಣ್ಣಕ್ಕೆ ತಿರುಗುವುದು ಕಾಲದ ಮಹಿಮೆಯಿಂದ. ಕೆಲವು ಸಮಯ ಅದೇ ಹಸಿರನ್ನು ಉಳಿಸಿಕೊಳ್ಳುವುದು. ಅನಂತರ ಬಾಡಿ ಬಣ್ಣಗೆಟ್ಟು ಉದುರಿಹೋಗುವುದೂ ಕಾಲದ ಮಹಿಮೆಯಿಂದ. ಬೀಜಗಳಿಗೆ ಮಣ್ಣು, ನೀರು, ಗಾಳಿಗಳನ್ನು ಒದಗಿಸಿದರೂ ಕೂಡಲೇ ಮೊಳಕೆಯಾಗುವುದಿಲ್ಲ. ಅದಕ್ಕೆ ಗೊತ್ತಾದ ಕಾಲವು ಬಂದು ನೆರವು ನೀಡದ ಹೊರತು ಮೊಳೆಯುವುದಿಲ್ಲ. ಕಾಲದಲ್ಲಿ ಅಸಾಧಾರಣವಾದ ಸಾಮರ್ಥ್ಯ ಉಂಟು. ಕಾಲಕ್ಕೆ ಅನುಗ್ರಹ, ಪ್ರತಿಬಂಧ-ಎಂಬ ಎರಡು ಶಕ್ತಿಗಳಿವೆಯೆಂದೂ ಸಮಸ್ತವಿಶ್ವದ ಸೂತ್ರಧಾರನೇ ಕಾಲವೆಂದೂ ಭರ್ತೃಹರಿ ಹೇಳಿದ್ದಾನೆ—"ಕಾಲಯತಿ ಸಮಸ್ತಭೂತಾನೀತಿ ಕಾಲಃ" ಸಮಸ್ತ ಪದಾರ್ಥಗಳನ್ನೂ ಅನುಗ್ರಹ ಪ್ರತಿಬಂಧಗಳಿಂದ ನಿಯಮಿಸತಕ್ಕದ್ದು ಕಾಲವೆಂದು ಕಾಲಶಬ್ದಕ್ಕೆ ಇನ್ನೊಂದು ವ್ಯುತ್ಪತ್ತಿಯನ್ನು ಆತನು ಹೇಳಿದ್ದಾನೆ. ಮಾವಿನ ಮರವು ಚಿಗುರುವಂತೆ ವಸಂತಕಾಲವು ಅನುಗ್ರಹಿಸುತ್ತದೆ. ಹಲಸಿನ ಮರವು ಫಲವನ್ನು ನೀಡದಂತೆ ಚಳಿಗಾಲವು ಪ್ರತಿಬಂಧಿಸುತ್ತದೆ.

ಕಾಲವು ಈಶ್ವರನ ಒಂದು ಸ್ವಾತಂತ್ರ್ಯಶಕ್ತಿಯೆಂದು ಭರ್ತೃಹರಿಯ ಸಿದ್ಧಾಂತವಿದೆ. ಇದರ ವಿವರವನ್ನೂ ಇತರ ಪಕ್ಷಭೇದಗಳನ್ನು ವಾಕ್ಯಪದೀಯದ ಬ್ರಹ್ಮಕಾಂಡದಲ್ಲಿಯೂ ಪ್ರಕೀರ್ಣಕಾಂಡದ ಕಾಲಸಮುದ್ದೇಶದಲ್ಲಿಯೂ ನೋಡಬಹುದು.

ಕಾಲವು ಪರಬ್ರಹ್ಮದ ಅವಿದ್ಯಾಶಕ್ತಿಯೆಂದೂ ಮಾಯೆಯೆಂದೂ ವ್ಯಾಖ್ಯಾನಕಾರನಾದ ಹೇಲಾರಾಜನು ವಿವರಿಸಿದ್ದಾನೆ. (ನೋಡಿ: ಕಾಲಸಮುದ್ದೇಶ, ಶ್ಲೋಕ ೧೪–೪೬–೬೨). ಈ ಸಂದರ್ಭದಲ್ಲಿ ವಾಲ್ಮೀಕಿ ರಾಮಾಯಣದ ಈ ಶ್ಲೋಕವು ಗಮನಾರ್ಹವಾದದ್ದು. ಕಾಲಪುರುಷನು ಶ್ರೀರಾಮನಿಗೆ ಹೇಳುತ್ತಾನೆ—

ತವಾಹಂ ಪೂರ್ವಸದ್ಭಾವೇ ಪುತ್ರಃ ಪರಪುರಂಜಯ ।
ಮಾಯಾಸಂಭಾವಿತೋ ವೀರ ಕಾಲಃ ಸರ್ವಸಮಾಹರಃ ।

-ಉತ್ತರಕಾಂಡ, ೧೦೪–೨

"ಹೇ ವೀರಾಗ್ರಣಿ, ನಿನ್ನ ಪೂರ್ವಾವಸ್ಥೆಯಲ್ಲಿ–ನೀನು ಪರಬ್ರಹ್ಮವೆನಿಸಿ ಸತ್ತಾಮಾತ್ರ ಸ್ಥಿತಿಯಲ್ಲಿದ್ದಾಗ–ನಿನ್ನ ಮಾಯೆಯಿಂದ ಜನಿಸಿದ ನಿನ್ನ ಪುತ್ರನು ನಾನು! ಸರ್ವಕೃತ್ಯ ನಿರ್ವಾಹಕನಾದ ಕಾಲಪುರುಷನೇ ನಾನು!"

ಬೆಂಗಳೂರಿಗೆ ಮೈಸೂರು ಹತ್ತಿರ, ಡೆಲ್ಲಿ ದೂರ–ಎನ್ನುತ್ತೇವೆ. ಹತ್ತಿರ, ದೂರ ಎಂದರೇನು? ಅಲ್ಪಕ್ರಿಯಾಧಾರವಾದ ಕಾಲದಲ್ಲಿ ಸೇರಬಹುದಾದ ಸ್ಥಳ ಹತ್ತಿರ. ಬಹು ಕ್ರಿಯಾಧಾರವಾದ ಕಾಲದಲ್ಲಿ ಸೇರಬಹುದಾದ ಸ್ಥಳ ದೂರ. ಒಳ್ಳೆಯದು; ರೈಲು ಪ್ರಯಾಣಕ್ಕೆ ಡೆಲ್ಲಿ ದೂರ, ವಿಮಾನ ಪ್ರಯಾಣಕ್ಕೆ ಹತ್ತಿರ–ಇಲ್ಲಿ ಹೇಗೆ? ಇಲ್ಲಿಯೂ ಕ್ರಿಯಾಧಾರಕಾಲದಿಂದಲೇ ವ್ಯವಸ್ಥೆಯನ್ನು ಹೇಳಬೇಕು. ಗಡಿಯಾರದ ಮುಳ್ಳಿನ ಅಲ್ಪಕ್ರಿಯೆಗೆ ಆಧಾರವಾದ ಕಾಲದಲ್ಲಿ ಸೇರಬಹುದಾದ್ದರಿಂದ ವಿಮಾನ ಪ್ರಯಾಣಕ್ಕೆ ಡೆಲ್ಲಿ ಹತ್ತಿರ. ಅದರ ಬಹುಕ್ರಿಯೆಗೆ ಆಧಾರವಾದ ಕಾಲದಲ್ಲಿ ಸೇರಬೇಕಾದ್ದರಿಂದ ರೈಲು ಪ್ರಯಾಣಕ್ಕೆ ದೂರ. ಸೂರ್ಯಸ್ಪಂದನವನ್ನು ಇಲ್ಲಿ ಪರಿಚ್ಛೇದಕವಾಗಿ ಹೇಳಬಹುದು. ಇದೇ ರೀತಿಯಲ್ಲಿ ಬೇಗನೆ–ತಡವಾಗಿ, ಹಿಂದೆ–ಮುಂದೆ, ಬಾಲಕ–ಯುವಕ–ಮುದುಕ ಇತ್ಯಾದಿ ವ್ಯವಹಾರಗಳೆಲ್ಲವೂ ಕ್ರಿಯಾಧಾರವಾದ ಕಾಲದಿಂದಲೇ ನಡೆಯುತ್ತವೆಯೆಂದು ತಿಳಿಯಬಹುದು.

ಅಖಂಡವಾದ ಕಾಲದಿಂದ ವ್ಯವಹಾರ ನಡೆಯುವುದಿಲ್ಲ. ಅದು ಉಪಾಧಿಯಿಂದ ಸಖಂಡವಾದಾಗ ಮಾತ್ರ ವ್ಯವಹಾರ ನಡೆಯುತ್ತದೆ. ಕಾಲವನ್ನು ಸಖಂಡವಾಗಿ ಮಾಡತಕ್ಕ ಉಪಾಧಿ ಕ್ರಿಯೆಯೆಂದು ಸಿದ್ಧವಾಗುತ್ತದೆ. ಹಾಗಿದ್ದರೆ ಅವಶ್ಯವಾದ ಕ್ರಿಯೆಗಳಿಂದಲೇ ವ್ಯವಹಾರವನ್ನು ಸಾಗಿಸಬಹುದಲ್ಲವೆ? ಕಾಲವನ್ನೇಕೆ ಒಪ್ಪಬೇಕು? ಎಂಬ ಪ್ರಶ್ನೆಯೂ ಹುಟ್ಟುತ್ತದೆ. ಆದ್ದರಿಂದಲೇ ಕೆಲವು ದಾರ್ಶನಿಕರು ಕಾಲವೆಂಬ ಪದಾರ್ಥವನ್ನೊಪ್ಪುವುದಿಲ್ಲ. ಜಯಂತಭಟ್ಟನ ನ್ಯಾಯಮಂಜರಿ, ಕುಮಾರಭಟ್ಟರ ಶ್ಲೋಕವಾರ್ತಿಕ–ಮೊದಲಾದ ಗ್ರಂಥಗಳಲ್ಲಿ ಈ ವಿಷಯದಲ್ಲಿ ವಿಪುಲವಾದ ಚರ್ಚೆ ಇದೆ. ಒಟ್ಟು ಮಥಿತಾರ್ಥ ಇಷ್ಟು—

೧. ಪರಬ್ರಹ್ಮದ ಒಂದು ಸ್ವಾತಂತ್ರ್ಯಶಕ್ತಿಯೇ ಕಾಲ. ಇದನ್ನು ಅವಿದ್ಯೆ ಎನ್ನಬಹುದು. ಪ್ರಕೃತಿಪರಿಣಾಮವೂ ವಿಭುವೂ ಅವಿಚ್ಛಿನ್ನಕ್ಷಣಧಾರಾ ರೂಪವೂ ಆಗಿದೆ.

—ವೈಯಾಕರಣರು

೨. ವಿಭುವೂ ನಿತ್ಯವೂ ಏಕವೂ ಅಖಂಡವೂ ಆಗಿದ್ದು ಅತೀತಾದಿ ವ್ಯವಹಾರಕ್ಕೆ ಹೇತುವಾದ ದ್ರವ್ಯವೇ ಕಾಲ.

—ನೈಯಾಯಿಕರು

೩. ಶಬ್ದತನ್ಮಾತ್ರದ ಪರಿಣಾಮವೇ ಕಾಲ. ಇದು ಕ್ರಿಯೋಪಾಧಿಯುಳ್ಳ ಆಕಾಶವೇ ಹೊರತು ಬೇರೊಂದು ವಸ್ತುವಲ್ಲ ಅಥವಾ ಸೂರ್ಯಕ್ರಿಯೆಯೇ ಕಾಲ.

—ಸಾಂಖ್ಯರು

೪. ಕ್ರಿಯೋಪಾಧಿಯುಳ್ಳ ಆಕಾಶವೇ ಕಾಲ.

—ಮೀಮಾಂಸಕರು

೫. ಪ್ರತಿಯೊಂದು ವಸ್ತುವಿನ ಪರಿವರ್ತನೆಗೆ ಸಹಾಯಕವಾಗಿ ಅದರ ರೂಪಾಂತರಕ್ಕೆ ನೆರವಾಗತಕ್ಕದ್ದು ಕಾಲದ್ರವ್ಯ. ಇದು ಅನಾದಿ ಅನಂತ. ಇದು ಪ್ರದೇಶವನ್ನು ವ್ಯಾಪಿಸದೇ ಇರುವುದರಿಂದ ಅನಸ್ತಿಕಾಯವೂ ಅಮೂರ್ತವೂ ಆಗಿದೆ.

—ಜೈನಸಿದ್ಧಾಂತ

೬. ವ್ಯವಹಾರಕ್ಕಾಗಿ ಕಲ್ಪಿತವಾದ ಸಾಪೇಕ್ಷಜ್ಞಾನವೇ ಕಾಲ.

—ಬೌದ್ಧಸಿದ್ಧಾಂತ

ಸಮಸ್ತಪದಾರ್ಥಗಳಿಗೂ ಕಾಲವು ಆಧಾರವಾಗಿರುವುದು ಕಾಲಿಕಸಂಬಂಧದಿಂದ. ಅದು ಕ್ರಿಯೆಯಿಂದ ಅಳತೆಗೆ ಸಿಗುತ್ತದೆ. ಕ್ರಿಯಾಪರಿಚ್ಛಿನ್ನವಾಗುತ್ತದೆ. ಸ್ವತಃ ಕಾಲದಲ್ಲಿ ಯಾವ ಕ್ರಿಯೆಯೂ ಇಲ್ಲ. ವರ್ತಮಾನ, ಭೂತ, ಭವಿಷ್ಯತ್ತುಗಳು ಕ್ರಿಯಾ ಸಂಬಂಧದಿಂದ ಆಗತಕ್ಕವು. ಇವುಗಳಲ್ಲಿ ವರ್ತಮಾನಕಾಲವು ಪರಿಶೀಲನಾರ್ಹವಾದದ್ದು.

ವರ್ತಮಾನ ಕಾಲವೆಂದರೇನು? ಈಗ ನಡೆಯುತ್ತಿರುವ ಕಾಲ ವರ್ತಮಾನ ಕಾಲ ಎಂದು ಸಾಮಾನ್ಯವಾಗಿ ಹೇಳುವುದುಂಟು. ಬಾಲಕರಿಗೆ ಸ್ಥೂಲವಾದ ಪರಿಚಯವನ್ನು ಮಾಡಿಕೊಡುವುದಕ್ಕಾಗಿ ಹೇಳುವ ಮಾತೇ ಹೊರತು, ಇದು ಶಾಸ್ತ್ರೀಯವಾದ ಹೇಳಿಕೆಯಲ್ಲ. ಕಾಲವು ಕಣ್ಣಿಗೆ ಕಾಣದು. ಅದರಲ್ಲಿ ಯಾವ

ಕ್ರಿಯೆಯೂ ಇಲ್ಲ. ಈಗ ನಡೆಯುತ್ತಿರುವ ವಿವಕ್ಷಿತವಾದ ಯಾವ ಕ್ರಿಯೆಯುಂಟೋ ಅದಕ್ಕೆ ಆಧಾರವಾದ ಕಾಲವನ್ನು ವರ್ತಮಾನ ಕಾಲವೆನ್ನಬಹುದು. ಈಗ ಎಂದರೆ ಕ್ರಿಯಾಪದವನ್ನು ಒಬ್ಬನು ಪ್ರಯೋಗಿಸುವ ಕಾಲದಲ್ಲಿ ಎಂದರ್ಥ. ಏವಂ ಚ ಶಬ್ದ ಪ್ರಯೋಗಾಧಿಕರಣ ಕಾಲದಲ್ಲಿ ವಿವಕ್ಷಿತವಾದ ಕ್ರಿಯೆಗೆ ಅಧಿಕರಣವಾದ ಕಾಲ ವರ್ತಮಾನ ಕಾಲವೆನಿಸುತ್ತದೆ. ಉದಾ : ಹುಡುಗನು ಓದುತ್ತಾನೆ. ಈ ವಾಕ್ಯವನ್ನು ಪ್ರಯೋಗಿಸುವ ಕಾಲದಲ್ಲಿ ಹುಡುಗನ ಓದುವ ಕ್ರಿಯೆ ನಡೆಯುತ್ತಿದೆಯೆಂದು ಇದರಿಂದ ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ಕ್ರಿಯೆಯೆಂದರೆ ಯಾವುದೆಂದು ಪರಿಶೀಲಿಸಬೇಕಾಗಿದೆ. ಕ್ರಿಯೆಯನ್ನು ಬಿಟ್ಟು ಉಳಿದ ಸಮಸ್ತ ಪದಾರ್ಥಗಳೂ ಸಿದ್ಧಸ್ವರೂಪದಲ್ಲಿರುತ್ತವೆ. ಕ್ರಿಯೆಯು ಮಾತ್ರ ಸಾಧ್ಯಸ್ವರೂಪದಲ್ಲಿ ಪ್ರತೀತವಾಗುತ್ತದೆ. ಸಾಧ್ಯವೆಂದರೆ ಕ್ರಮಜನ್ಯವೆಂದರ್ಥ. ಹುಡುಗನು ಓದುತ್ತಾನೆ–ಎಂಬ ವಾಕ್ಯದಲ್ಲಿ ಹುಡುಗನು ಸಿದ್ಧಪದಾರ್ಥ. ಓದುವ ಕ್ರಿಯೆ ಮಾತ್ರ ಕ್ರಮವಾಗಿ ಜರುಗುತ್ತಿದೆ ಎಂದು ಪ್ರತೀತವಾಗುವುದರಿಂದ ಅದರ ಸ್ವಭಾವವು ಸಾಧ್ಯ. ಓದಿದನು ಎಂದು ಭೂತಕಾಲವನ್ನು ಪ್ರಯೋಗಿಸಿದಾಗಲೂ ಓದುವ ಕ್ರಿಯೆ ಕ್ರಮವಾಗಿ ಕೆಲವು ಕಾಲದ ವರೆಗೆ ಜರುಗಿತು ಎಂದೇ ಪ್ರತೀತವಾಗುತ್ತದೆ. ಇದಕ್ಕೆ ಕಾರಣವೇನೆಂದರೆ, ಕ್ರಿಯೆಯು ಘಟಪಟಗಳಂತೆ ಸಿದ್ಧವಸ್ತುವಲ್ಲ. ಹಲವಾರು ಕ್ರಿಯಾವಯವಗಳ ಸಂತಾನವನ್ನೇ ನಾವು ಒಂದು ಕ್ರಿಯೆಯೆಂದು ಕರೆಯುತ್ತಿದ್ದೇವೆ. ಘಟಪಟಗಳಲ್ಲಿಯೂ ಸೂಕ್ಷ್ಮಾವಯವಗಳಿದ್ದರೂ ಅವೆಲ್ಲವೂ ಘಟದಲ್ಲಿ ಸಿದ್ಧವಾಗಿ ಕುಳಿತಿರುತ್ತವೆ. ಕ್ರಿಯಾವಯವಗಳು ಹಾಗಲ್ಲ. ಒಂದೊಂದು ಅವಯವವೂ ಹುಟ್ಟಿ ನಾಶವಾಗಿಬಿಡುತ್ತದೆ. ಕ್ರಿಯಾವಯವಗಳ ಸಮುದಾಯ ಒಟ್ಟಿಗೆ ಇರುವುದೇ ಇಲ್ಲ.

ಮನೆಯಿಂದ ಪೇಟೆಗೆ ಹೋಗುತ್ತಾನೆ—ಎಂಬಲ್ಲಿ ಹೋಗುವುದೆಂದರೇನು ? ಮನೆಯ ಹೊರಗೆ ಮೊದಲನೆಯ ಹಜ್ಜೆಯಿಡುವುದನ್ನಾರಂಭಿಸಿ ಕಾಡನ್ನು ಮುಟ್ಟುವ ಕಡೆಯ ಹಜ್ಜೆಯನ್ನಿಡುವುದೇ ಹೋಗುವುದು. ಅಲ್ಲಿಯ ವರೆಗೆ ಸಾವಿರಾರು ಹೆಜ್ಜೆಗಳನ್ನಿಡುವುದು ಹೋಗುವ ಕ್ರಿಯೆಯ ಅವಯವಗಳು. ಒಂದು ಹಜ್ಜೆಯನ್ನಿಡುವುದರಲ್ಲಿ ಸಹ ಕಾಲನ್ನೆತ್ತುವುದೇ ಮೊದಲಾದ ಅವಾಂತರ ಕ್ರಿಯೆಗಳಿರುತ್ತವೆ. ಈ ಎಲ್ಲ ಕ್ರಿಯೆಗಳ ಸಮುದಾಯವೇ ಹೋಗುವ ಕ್ರಿಯೆ.

ಪಾಠವನ್ನು ಓದುತ್ತಾನೆ—ಎಂದಾಗ ಹಲವಾರು ಅಕ್ಷರಗಳ ಹಲವಾರು ಉಚ್ಚಾರಣ ಕ್ರಿಯೆಗಳ ಸಂತತಿ ಇರುತ್ತದೆ. ಈ ಕ್ರಿಯೆಗಳು ಕ್ರಮಜನ್ಯವಾದವು. ಯಾವ ಅಕ್ಷರದ ಉಚ್ಚಾರಣ ಕ್ರಿಯೆಯನ್ನು ಗಮನಿಸಿ ಓದುತ್ತಾನೆ ಎಂಬ ಶಬ್ದವನ್ನು ಪ್ರಯೋಗಿಸುತ್ತೇವೋ ಆ ಸಮಯದಲ್ಲಿ ಆ ಕ್ರಿಯೆಯು ಭೂತವಾಗಿರುತ್ತದೆ ! ಉಳಿದ ಕ್ರಿಯೆಗಳು ಭವಿಷ್ಯತ್ತಿಗೆ ಸೇರತಕ್ಕವು ! ವರ್ತಮಾನ ಕ್ರಿಯೆ ಯಾವುದು ?

ಈ ವಿಚಾರವನ್ನು ಕುರಿತು ಪತಂಜಲಿಯ ವ್ಯಾಕರಣ ಮಹಾಭಾಷ್ಯದಲ್ಲಿ ರೋಚಕವಾದ ವಿಚಾರವು ಪ್ರವೃತ್ತವಾಗಿದೆ. 'ವರ್ತಮಾನೇ ಲಟ್' ಎಂಬ ಪಾಣಿನಿಸೂತ್ರವನ್ನು ವ್ಯಾಖ್ಯಾನಿಸುವಾಗ ವರ್ತಮಾನ ಕಾಲವೇ ಇಲ್ಲವೆಂದು ಪೂರ್ವಪಕ್ಷಿ ಹೇಳುತ್ತಾನೆ—

> ಮೀಮಾಂಸಕಂ ಮನ್ಯಮಾನೋ ಯುವಾ ಮೇಧಾವಿಸಂಮತಃ ।
> ಕಾಕಂ ಸ್ಮೇಹಾನು ಪೃಚ್ಛತಿ ಕಿಂ ತೇ ಪತಿತ ಲಕ್ಷಣಮ್ ।
> ಅನಾಗತೇ ನ ಪತಸಿ ಅತಿಕ್ರಾಂತೇ ಚ ಕಾಕ ನ ।
> ಯದಿ ಸಂಪ್ರತಿ ಪತಸಿ ಸರ್ವೋ ಲೋಕಃ ಪತತ್ಯಯಮ್ ।
> ಹಿಮವಾನಪಿ ಗಚ್ಛತಿ ।

ತಾನು ವಿಚಾರಶೀಲನೆಂದು ತಿಳಿದುಕೊಂಡಿರತಕ್ಕವನೂ ವಿದ್ವನ್ಮಾನ್ಯನೂ ಆದ ಒಬ್ಬ ಯುವಕನು ಕಾಗೆಯನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನಂತೆ "ಎಲೈ ಕಾಗೆ, ನೀನು ಹಾರುತ್ತೀಯೆ—ಎನ್ನುತ್ತಾರಲ್ಲ, ಅದು ಹೇಗೆ? ಭವಿಷ್ಯತ್ಕಾಲದಲ್ಲಿ 'ಹಾರುತ್ತೀಯೆ' ಎನ್ನಲಾಗುವುದಿಲ್ಲ. ಭೂತಕಾಲದಲ್ಲಿಯೂ ಹಾಗೆ ಹೇಳಲಾಗುವುದಿಲ್ಲ. ಹೀಗಿದ್ದರೂ ನೀನು 'ಈಗ ಹಾರುತ್ತೀಯೆ' ಎಂದು ಹೇಳಬಹುದಾದರೆ, 'ಸಮಸ್ತ ಜನರೂ ಹಾರುತ್ತಿದ್ದಾರೆ' ಎಂದು ಹೇಳಬಹುದು. 'ಹಿಮಾಲಯ ಪರ್ವತವೂ ಹೋಗುತ್ತಿದೆ' ಎಂದು ಹೇಳಬಹುದು!

ವಿವರಣೆ ಈ ಶ್ಲೋಕದಲ್ಲಿ 'ಪತ' ಧಾತು ಹಾರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. 'ಪತಿತ'=ಹಾರುವಕ್ರಿಯೆ. 'ಕಾಗೆ ಹಾರುತ್ತದೆ'—ಎಂಬ ಪ್ರಯೋಗ ಉಂಟಷ್ಟೆ. ಈ ಹಾರುವ ಕ್ರಿಯೆ ಅಸಂಖ್ಯಾತ ಹಾರುವ ಕ್ರಿಯೆಗಳ ಸಮುದಾಯ. ಯಾವ ಕ್ರಿಯೆಯನ್ನು ವಕ್ತಾರನು ಗುರುತಿಸಿ ಶಬ್ದಪ್ರಯೋಗ ಮಾಡುತ್ತಾನೋ ಆ ಕ್ರಿಯೆಯು 'ಕಾಗೆ ಹಾರುತ್ತದೆ' ಎಂದು ಪ್ರಯೋಗ ಮಾಡುವಷ್ಟರಲ್ಲಿ ಗತಿಸಿ ಹೋಗಿರುತ್ತದೆ. ಆದ್ದರಿಂದ ಅದನ್ನು ಕುರಿತು ಹೇಳುವುದಾದರೆ 'ಹಾರಿತು' ಎಂದು ಭೂತಕಾಲವನ್ನು ಬಳಸಬೇಕು. ಮುಂದೆ ನಡೆಯುವ ಕ್ರಿಯೆಯನ್ನು ಗಮನಿಸಿ ಹೇಳುವುದಾದರೆ 'ಹಾರುವುದು' ಎಂದು ಭವಿಷ್ಯತ್ಕಾಲದಲ್ಲಿ ನಿರ್ದೇಶಿಸಬೇಕು. ಆದ್ದರಿಂದ 'ಹಾರುತ್ತದೆ' ಎಂಬ ವರ್ತಮಾನಕಾಲದ ಪ್ರಯೋಗಕ್ಕೆ ಅವಕಾಶವೇ ಇಲ್ಲ. ಹಾರುವ ಕ್ರಿಯೆ ವರ್ತಮಾನವಲ್ಲದಿದ್ದರೂ 'ಹಾರುತ್ತದೆ' ಎಂದು ಪ್ರಯೋಗಿಸಬಹುದಾದರೆ, 'ಸಮಸ್ತ ಜನರೂ ಹಾರುತ್ತಿದ್ದಾರೆ, ಹಿಮಾಲಯವು ನಡೆಯುತ್ತಿದೆ'—ಎಂದೂ ಪ್ರಯೋಗಿಸಬಹುದಷ್ಟೆ!—ಎಂದು ಆಕ್ಷೇಪ. ನಿಷ್ಪನ್ನವಾದದ್ದು ಭೂತಕಾಲಕ್ಕೆ ಸೇರುತ್ತದೆ. ಅನಿಷ್ಪನ್ನವಾದದ್ದು ಭವಿಷ್ಯತ್‌ಕಾಲಕ್ಕೆ ಸೇರುತ್ತದೆ. ನಿಷ್ಪನ್ನ—ಅನಿಷ್ಪನ್ನಗಳಿಗೆ ವ್ಯತಿರಿಕ್ತವಾದ ಕ್ರಿಯೆ ಇಲ್ಲ—ಎಂದು ಅಭಿಪ್ರಾಯ.

ಈ ಆಕ್ಷೇಪಕ್ಕೆ ಸಮಾಧಾನ ಹೀಗೆ:—'ಓದು' ಎಂಬ ಧಾತುವಿನಿಂದ

ವಾಚ್ಯವಾದ ಎಲ್ಲ ವರ್ಣೋಚ್ಚಾರಣಗಳ ಕ್ರಿಯೆಗಳ ಸಮುದಾಯವನ್ನು ಇಲ್ಲಿ ಓದುವ ಕ್ರಿಯೆಯೆಂದು ತಿಳಿಯಬೇಕು. ಈ ಕ್ರಿಯೆಗಳು ಕ್ರಮಜನ್ಯಗಳೂ ಶೀಘ್ರ ವಿನಾಶಿಗಳೂ ಆದ್ದರಿಂದ ಇವುಗಳ ಸಮುದಾಯವೇ ಇಲ್ಲವೆಂಬುದೇನೋ ದಿಟ. ಆದರೆ ಸಂಕಲನಾತ್ಮಕ ಬುದ್ಧಿಯಿಂದ ಈ ಕ್ರಿಯೆಗಳೆಲ್ಲವನ್ನೂ ಸೇರಿಸಿ ಸಮುದಾಯವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿದೆ. ಈ ಕಲ್ಪಿತ ಸಮುದಾಯವೇ 'ಓದು'ಧಾತುವಿನ ಅರ್ಥ. ಭರ್ತೃಹರಿ ಹೀಗೆ ವಿವರಿಸಿದ್ದಾನೆ—

ಗುಣಭೂತೈರವಯವೈಃ ಸಮೂಹಃ ಕ್ರಮಜನ್ಮನಾಂ ।
ಬುದ್ಧ್ಯಾ ಪ್ರಕಲ್ಪಿತಾಭೇದಃ ಕ್ರಿಯೇತಿ ವ್ಯಪದಿಶ್ಯತೇ ॥
—ವಾಕ್ಯಪದೀಯ, ಕ್ರಿಯಾಸಮುದ್ದೇಶ-೪

ಕ್ರಮಜನ್ಯವಾದ ವ್ಯಾಪಾರಗಳ ಸಮುದಾಯವೇ ಕ್ರಿಯೆಯೆನಿಸುತ್ತದೆ. ಸಮುದಾಯದಿಂದ ಉಂಟಾಗುವ ಫಲಕ್ಕೆ ಅದರ ಅವಯವ ಕ್ರಿಯೆಗಳು ನೆರವು ನೀಡುವುದರಿಂದ ಗುಣಭೂತಗಳೆನಿಸುತ್ತವೆ. ಗುಣಭೂತಗಳಾದ್ದರಿಂದ ಅವುಗಳಿಗೆ ಪ್ರಾಧಾನ್ಯವಿಲ್ಲ, ಸಮುದಾಯಕ್ಕೆ ಮಾತ್ರ ಪ್ರಾಧಾನ್ಯವಿರುತ್ತದೆ. ಸಮುದಾಯವು ಒಂದೆಂದು ಸಂಕಲನಾತ್ಮಕ ಬುದ್ಧಿಯಿಂದ ಕಲ್ಪಿತವಾಗಿರುತ್ತದೆ.

ಈ ಸಮೂಹದ ಅವಯವ ಕ್ರಿಯೆಗಳಲ್ಲಿ ಮೊದಲನೆಯದು ಆರಂಭವಾಗಿ, ಕಡೆಯದು ಮುಗಿಯದೆ ಇದ್ದಾಗ ವರ್ತಮಾನಕಾಲ—ಪ್ರಾರಬ್ಧ+ಅಪರಿಸಮಾಪ್ತತ್ವಂ ವರ್ತಮಾನತ್ವಮ್ ! ಈ ಅವಯವ ಕ್ರಿಯೆಗಳಲ್ಲಿ ಅಂತ್ಯವಾದ ಕ್ರಿಯೆಯು ಮುಗಿದಾಗ ಭೂತಕಾಲ. ಆದಿಕ್ರಿಯೆಯು ಆರಂಭವಾಗದಿದ್ದಾಗ ಭವಿಷ್ಯತ್ಕಾಲ ಎಲ್ಲ ಕ್ರಿಯಾಪದಗಳಲ್ಲಿಯೂ ಈ ಲಕ್ಷಣಗಳನ್ನು ಅನುಗತವಾಗಿ ಕಂಡುಕೊಳ್ಳಬಹುದು.

ಈ ಪ್ರಯೋಗಗಳನ್ನು ನೋಡಿ: "ದೇವರು ಹಿಂದೆ ಇದ್ದನು, ಮುಂದೆಯೂ ಇರುವನು, ಈಗಲೂ ಇದ್ದಾನೆ. ಹಿಮಾಲಯವು ಹಿಂದೆ ಇದ್ದಿತು, ಮುಂದೆಯೂ ಇರುವುದು, ಈಗಲೂ ಇದೆ. ಬೆಂಕಿಯಲ್ಲಿ ಸುಡುವ ಶಕ್ತಿ ಹಿಂದೆ ಇದ್ದಿತು, ಮುಂದೆಯೂ ಇರುವುದು, ಈಗಲೂ ಇದೆ." ಇಲ್ಲಿ ಇರುವ ಕ್ರಿಯೆ ನಿತ್ಯ ಪ್ರವೃತ್ತವಾದದ್ದು. ಇದಕ್ಕೆ ಪ್ರಾರಂಭವೂ ಇಲ್ಲ. ಪರಿಸಮಾಪ್ತಿಯೂ ಇಲ್ಲ. ಆದರೆ ಮೂರು ಕಾಲಗಳಲ್ಲಿಯೂ 'ಇರು' ಧಾತುವಿಗೆ ಪ್ರಯೋಗ ಬಂದಿದೆ. ಇರುವಿಕೆ ಎಂಬ ಕ್ರಿಯೆ ಪರಿಸಮಾಪ್ತವಾಗಿಲ್ಲವಾದ್ದರಿಂದ ಭೂತಕಾಲ ಹೇಗೆ? ಈ 'ಇರುವ' ಕ್ರಿಯೆ ಈಗಲೂ ನಡೆಯುತ್ತಿರುವಾಗ ಭವಿಷ್ಯತ್ಕಾಲ ಹೇಗೆ? ವರ್ತಮಾನ ಕಾಲವು ಭವಿಷ್ಯತ್ತುಗಳಿಗೆ ಪ್ರತಿದ್ವಂದ್ವಿಯಾದದ್ದು. ಯಾವುದಕ್ಕೆ ಭೂತಭವಿಷ್ಯತ್ತುಗಳಿಲ್ಲವೊ ಅದನ್ನು ವರ್ತಮಾನವೆನ್ನಲಾಗದ್ದು. ಏಕೆಂದರೆ, ಇದು ಸಾಪೇಕ್ಷವಾದದ್ದು. ದೊಡ್ಡದು ಇದ್ದಾಗ ಚಿಕ್ಕದು ಎಂಬ ಪ್ರಯೋಗ ಸಾಧ್ಯ. ದೊಡ್ಡದೇ ಇಲ್ಲದಾಗ

ಚಿಕ್ಕದು ಎಂಬುದು ಅರ್ಥಶೂನ್ಯವಾಗುತ್ತದೆ. ಅಲ್ಲದೆ ಅವಯುವ ಕ್ರಿಯೆಗಳಲ್ಲಿ ಮೊದಲನೆಯುದು ಪ್ರಾರಂಭವಾದಾಗ ವರ್ತಮಾನಕಾಲ ಎಂದು ಹೇಳಿದ್ದೇವೆ. ಮೇಲ್ಕಂಡ ಉದಾಹರಣೆಗಳಲ್ಲಿ ಇರುವ ಕ್ರಿಯೆ ನಿತ್ಯಪ್ರವೃತ್ತವಾದ್ದರಿಂದ ಅವಯುವ ಕ್ರಿಯೆಯು ಪ್ರಾರಂಭವೇ ಇಲ್ಲ. ಆದಕಾರಣ ವರ್ತಮಾನಕಾಲದ ಪ್ರಯೋಗವೂ ಸಾಧುವಾಗಲಾರದು.

ಈ ಆಕ್ಷೇಪಗಳಿಗೆ ಸಮಾಧಾನ ಹೀಗೆ: ಸಮಸ್ತ ಭಾವಪದಾರ್ಥಗಳು ಅನ್ಯೋಪಾಧಿಯಿಂದ ಭೇದವನ್ನು ತಳೆಯುತ್ತವೆ. ಸ್ವತಃ ಅವುಗಳಲ್ಲಿ ಯಾವ ಭೇದವೂ ಗೋಚರಿಸಲಾರದು. ನಮ್ಮ ವ್ಯವಹಾರವೆಲ್ಲವೂ ಸಾಪೇಕ್ಷವಾಗಿಯೇ ಪ್ರವೃತ್ತವಾಗಿರುತ್ತವೆ. ಹೇಗೆಂದರೆ, 'ಚಿನ್ನವು ಬೆಲೆಬಾಳುವ ಲೋಹ' ಈ ವಾಕ್ಯದಲ್ಲಿ ಇತರ ಲೋಹಗಳಿರುವುದರಿಂದ ಚಿನ್ನದ ಪೃಥಕ್ಕರಣ ಸಾಧ್ಯವಾಗಿದೆ. ಕಡಮೆ ಬೆಲೆಯು ಲೋಹವಿರುವುದರಿಂದಲೇ 'ಬೆಲೆಬಾಳುವ' ಎಂಬ ವಿಶೇಷಣವು ಸಾರ್ಥಕವಾಗುತ್ತದೆ. ಲೋಹೇತರ ವಸ್ತುವಿರುವುದರಿಂದಲೇ ಚಿನ್ನವನ್ನು ಲೋಹವೆಂದು ಹೇಳಬೇಕಾಗಿದೆ. ಅವನು ಓದುತ್ತಿದ್ದಾನೆ—ಎಂಬ ವಾಕ್ಯದಲ್ಲಿ ಓದಿಗಿಂತ ಇತರ ಕ್ರಿಯೆ ಸಾಧ್ಯವಾದ್ದರಿಂದಲೇ ಆ ಕ್ರಿಯೆಯಲ್ಲದ ಓದುವ ಕ್ರಿಯೆ ನಡೆಯುತ್ತಿದೆ—ಎಂದು ಹೇಳಲು ಸಾಧ್ಯ. ಹಿಂದೆ ಈ ವಿಚಾರವನ್ನು ಪ್ರಸ್ತಾವಿಸಿದ್ದಾಗಿದೆ. ಭರ್ತೃಹರಿ ಹೇಳುತ್ತಾನೆ—

> ಪರತೋ ಭಿದ್ಯತೇ ಸರ್ವಮಾತ್ಮಾ ತು ನ ವಿಕಲ್ಪ್ಯತೇ ।
> ಪರ್ವತಾದಿಸ್ಥಿತಿಸ್ತಸ್ಮಾತ್ ಪರರೂಪೇಣ ಭಿದ್ಯತೇ ॥
>
> —ವಾಕ್ಯ, ಕಾಲಸಮುದ್ದೇಶ-೮೦

'ಸಮಸ್ತ ಭಾವಪದಾರ್ಥವೂ ಅನ್ಯನಿಮಿತ್ತದಿಂದ ನಾನಾಭೇದವನ್ನು ಪಡೆಯುತ್ತದೆ. ಸ್ವಯಂ ತಾನಾದರೋ (ಅನ್ಯೋಪಾಧಿ ಇಲ್ಲದಿದ್ದಾಗ) ಯಾವ ಭೇದ ವಿಕಲ್ಪವನ್ನು ಪಡೆಯುವುದಿಲ್ಲ. ಆದ್ದರಿಂದ ಪರ್ವತಾದಿನಿತ್ಯವಸ್ತುಗಳ ಸತ್ತೆಯೂ ಅನ್ಯಸತ್ತಾರೂಪನಿಮಿತ್ತದಿಂದ ಭೇದವನ್ನು ಪಡೆಯುತ್ತದೆ.'

ಪ್ರಕೃತ, ನಿತ್ಯವಸ್ತುಗಳಾದ ದೇವರು, ಹಿಮಾಲಯ—ಮೊದಲಾದವುಗಳ ಇರುವಿಕೆಯೇ ಸತ್ತಾ. ಈ ಸತ್ತೆಗೆ ಸ್ವತಃ ಕಾಲಭೇದವಿಲ್ಲವಾದರೂ ಸಹಚರಿತವಾದ ಇತರ ವಸ್ತುಗಳಾದ ಅನಿತ್ಯಸತ್ತಾನಿಮಿತ್ತದಿಂದ ಕಾಲಭೇದವು ಬರುತ್ತದೆ. ದೇವರು ಹಿಂದೆಯೂ ಇದ್ದನು—ಎಂಬ ವಾಕ್ಯವನ್ನು ತೆಗೆದುಕೊಳ್ಳೋಣ. ಈ ವಾಕ್ಯದಲ್ಲಿ 'ಹಿಂದೆಯೂ' ಎಂದರೆ ಯಾವಾಗ? 'ಲಕ್ಷವರ್ಷಗಳ ಹಿಂದೆ' ಎನ್ನಬಹುದು. ಲಕ್ಷವರ್ಷಗಳ ಹಿಂದೆ ಎಂಬುದನ್ನು ಅನ್ಯೋಪಾಧಿಯಿಂದಲೇ ಹೇಳಬೇಕಾಗುತ್ತದೆಯೆಂದು ಪೂರ್ವದಲ್ಲಿಯೇ ತೋರಿಸಿಕೊಟ್ಟಿದ್ದೇವೆ. ಲಕ್ಷವರ್ಷಗಳ ಹಿಂದೆ ಇದ್ದ ಮಾನವನ ಸತ್ತಾಕಾಲದಲ್ಲಿ ಅಥವಾ ಲಕ್ಷವರ್ಷಗಳ ಹಿಂದೆ ಸೂರ್ಯನು ಸಂಚರಿಸುತ್ತಿದ್ದ ಕಾಲದಲ್ಲಿ—ಎಂದೇ ಹಿಂದೆಯೂ ಎಂಬುದರ ಅರ್ಥವನ್ನು ವಿವರಿಸಬೇಕು. ಇಲ್ಲಿ ಆ

ಮಾನವನ ಸತ್ತೆ, ಸೂರ್ಯನ ಆ ಸಂಚಾರಭೂತವಾಗಿದೆ. ಈ ಬಗೆಯ ಭೂತತ್ವ ವಿಶಿಷ್ಟ ಕಾಲದಲ್ಲಿ ದೇವರು ಇದ್ದನು—ಎಂದು ಹಿಂದೆ ಹೇಳಿದ ವಾಕ್ಯದ ಅರ್ಥ. ಈ ಭೂತತ್ವವು ದೇವರ ಸತ್ತೆಗೆ ಉಪಾಧಿ ವಿಶೇಷಣ. ವಿಶೇಷಣಗತವಾದ ಭೂತತ್ವ ವನ್ನು ದೇವರ ಸತ್ತೆಯಲ್ಲಿ ಆರೋಪಿಸಿ 'ದೇವರು ಹಿಂದೆಯೂ ಇದ್ದನು' ಎಂದು ಭೂತಕಾಲದ ನಿರ್ದೇಶನ ಬಂದಿದೆ. ಚೀನ ಯಾತ್ರಿಕನು ಭಾರತ ದೇಶಕ್ಕೆ ಬರುವಾಗ ಹಿಮಾಲಯ ಪರ್ವತವು ನಡುವೆ ಇದ್ದಿತು. ಇಲ್ಲಿ ಚೀನ ಯಾತ್ರಿಕನ ಆಗಮನವು ಭೂತವಾದದ್ದು. ಈ ಭೂತತ್ವವನ್ನು ಹಿಮಾಲಯದ ಸತ್ತೆಯಲ್ಲಿಯೂ ಆರೋಪಿಸಿ ದ್ದೇವೆ. ಲೋಕವ್ಯವಹಾರವಿರುವುದೆಲ್ಲವೂ ಹೀಗೆಯೇ. ಶ್ರೀರಾಮನಿದ್ದಾಗ ರಾಜ ನಾದ ವಿಶ್ವಾಮಿತ್ರನಿರಲಿಲ್ಲ—ಎಂದು ಹೇಳಬಹುದಷ್ಟೆ? ವಿಶ್ವಾಮಿತ್ರ ಮುನಿಯಿದ್ದಾಗ ಈ ಮಾತು ಹೇಗೆ ಯುಕ್ತವಾಗುತ್ತದೆ? ರಾಜತ್ವವಿಶಿಷ್ಟನಾದ ವಿಶ್ವಾಮಿತ್ರನಿರಲಿಲ್ಲ. ಎಂದರೆ ವಿಶ್ವಾಮಿತ್ರನಲ್ಲಿ ಆಗ ರಾಜತ್ವ ಇರಲಿಲ್ಲ. ರಾಜತ್ವದ ಅಭಾವವನ್ನು ವಿಶ್ವಾಮಿತ್ರ ಮುನಿಯ ಸತ್ತೆಯಲ್ಲಿ ಆರೋಪಿಸಿ 'ವಿಶ್ವಾಮಿತ್ರನಿರಲಿಲ್ಲ' ಎಂದು ಪ್ರಯೋಗಿಸಿದ್ದೇವೆ. ವಿಶೇಷಣಾಭಾವ ಪ್ರಯುಕ್ತವಾಗಿ ವಿಶಿಷ್ಟಾಭಾವವನ್ನು ಹೇಳ ಬಹುದೆಂದು ಶಾಸ್ತ್ರೀಯ ಸಿದ್ಧಾಂತವಿದೆ. ನಮ್ಮ ಬಳಿ ಹತ್ತಿಯ ಬಟ್ಟೆಯೊಂದೇ ಇದ್ದಾಗ ರೇಶ್ಮೆಯ ಬಟ್ಟೆ ಇಲ್ಲ ಎನ್ನಬಹುದಷ್ಟೆ? ಮರ್ಫಿ ರೇಡಿಯೋ ಇದ್ದಾಗ ಫಿಲಿಪ್ಸ್ ರೇಡಿಯೋ ಇಲ್ಲ—ಎನ್ನಬಹುದಷ್ಟೆ? ನಮ್ಮ ಬಳಿ ಬಟ್ಟೆಯೂ ಇದೆ, ರೇಡಿಯೋ ಕೂಡ ಇದೆ. ವಿಶೇಷಣಾಭಾವಪ್ರಯುಕ್ತ ವಿಶಿಷ್ಟಾಭಾವ—ಎನ್ನುವುದಕ್ಕೆ ಇದು ಉದಾಹರಣೆ. ಇದೇ ರೀತಿಯಲ್ಲಿ ನಿತ್ಯಪ್ರವೃತ್ತಕ್ರಿಯಾಸ್ಥಳದಲ್ಲಿ ಭವಿಷ್ಯತ್ಕಾಲ ವನ್ನೂ ವರ್ತಮಾನಕಾಲವನ್ನೂ ಊಹಿಸಿಕೊಳ್ಳಬಹುದು.

### ಕನ್ನಡದಲ್ಲಿ ವರ್ತಮಾನಕಾಲ

ವ್ಯವಹಾರದಲ್ಲಿ ಈ ಮೂರು ಕಾಲಗಳನ್ನು ಸೂಚಿಸುವ ಆವಶ್ಯಕತೆ ಇರುವುದ ರಿಂದ ಕ್ರಿಯಾಪದಗಳಲ್ಲಿ ಮೂರು ಬಗೆಯ ರೂಪಗಳಿರುವುದು ಸಹಜವಾಗಿದೆ. ಇದು ಎಲ್ಲ ಭಾಷೆಗಳಿಗೂ ಅನ್ವಯಿಸುತ್ತದೆಯಾದ್ದರಿಂದ ಕನ್ನಡದಲ್ಲಿಯೂ ಕಾಲತ್ರಯದ ರೂಪಗಳುಂಟು.

ಕೇಶಿರಾಜನು—

ದ ದಪ ವಕಾರಂಗಳ್ ತ-
ಪ್ಪದೆ ಕಾಲತ್ರಯವಿಭಕ್ತಿಮೂಲದೊಳಕ್ಕುಂ ||

—ಶಬ್ದ ೨೩೨

ಎಂದು ಸೂತ್ರಿಸಿದ್ದಾನೆ. ಉದಾಹರಣೆಯಾಗಿ,

ಭೂತಕಾಲಕ್ಕೆ – ಪಡೆದಂ, ಇಡಿದಂ, ಗೆಲ ೦

ವರ್ತಮಾನಕಾಲಕ್ಕೆ – ಎತ್ತಿದಪಂ, ಒತ್ತಿದಪಂ, ಮಾಡಿದಪಂ

ಭವಿಷ್ಯತ್ಕಾಲಕ್ಕೆ – ಕುಡುವಂ, ಉಡುವಂ, ಮಾಡುವಂ

ಎಂದು ವಿಭಿನ್ನರೂಪಗಳನ್ನು ವೃತ್ತಿಯಲ್ಲಿ ತೋರಿಸಲಾಗಿದೆ. ಹೀಗೆಯೇ ನಾಗವರ್ಮನೂ ಭಟ್ಟಾಕಳಂಕನೂ ಕಾಲತ್ರಯವನ್ನೂ ವಿಭಿನ್ನಕ್ರಿಯಾರೂಪಗಳನ್ನೂ ಒಪ್ಪಿದ್ದಾರೆ. ಆಧುನಿಕ ಭಾಷಾವಿಜ್ಞಾನಿಗಳು ಮಾತ್ರ ಕನ್ನಡದಲ್ಲಿ ವರ್ತಮಾನಕಾಲವಿಲ್ಲ—ಎಂದು ಹೇಳಿದ್ದಾರೆ. ವರ್ತಮಾನಕಾಲ ಮತ್ತು ಭವಿಷ್ಯತ್ಕಾಲದ ಕ್ರಿಯಾರೂಪಗಳು ಒಂದೇ ಬಗೆಯವಾದ್ದರಿಂದ ಭೂತ–ಅಭೂತ ಎಂದು ಕಾಲದ್ವಯವನ್ನು ಮಾತ್ರ ಒಪ್ಪಬೇಕೆಂದು ಅವರ ಅಭಿಪ್ರಾಯವಿರುತ್ತದೆ. ಆದರೆ ಕೇಶಿರಾಜನೇ ಮೊದಲಾದ ಸುಪ್ರಸಿದ್ಧ ವೈಯಾಕರಣರ ನಿರೂಪಣೆಯನ್ನು ಒಪ್ಪದಿರಲು ಸಾಕಷ್ಟು ಆಧಾರಗಳಿವೆಯೆ? ಈ ವೈಯಾಕರಣರು ವಿಪುಲವಾಗಿ ಪ್ರಾಚೀನ ಕಾವ್ಯಗಳನ್ನು ಅಭ್ಯಾಸಮಾಡಿದವರು ತಮ್ಮ ಕಾಲದಲ್ಲಿದ್ದ ಶಿಷ್ಟಪ್ರಯೋಗಗಳನ್ನು ಸೂಕ್ಷ್ಮವಾಗಿ ಗಮನಿಸಿದವರು. ಅರೆಬರೆಯ ಭಾಷಾಜ್ಞಾನವಿದ್ದವರು ವ್ಯಾಕರಣ ಶಾಸ್ತ್ರವನ್ನು ರಚಿಸಲು ಎಂದಿಗೂ ಕೈಹಾಕಲಾರರು. ವರ್ತಮಾನಕಾಲ–ಭವಿಷ್ಯತ್ಕಾಲಗಳ ರೂಪಗಳನ್ನು ಸ್ಪಷ್ಟವಾಗಿ ತೋರಿಸಿರುವಾಗ, ಸಾರಾಸಗಟಾಗಿ ಅದೆಲ್ಲವನ್ನು ತಳ್ಳಿಹಾಕುವುದು ಸಾಹಸಕಾರ್ಯವೇ ಸರಿ. ಆ ವೈಯಾಕರಣರ ಕಾಲದಲ್ಲಿ ಆ ರೂಪಗಳಿಗೆ ಸಾಂಕರ್ಯವಿಲ್ಲದೆ ಪೃಥಕ್ ಪ್ರಯೋಗವಿದ್ದೇ ಇರಬೇಕು.

ಹೊಸಗನ್ನಡದಲ್ಲಿ 'ಹೋಗುತ್ತಾನೆ, ಬರುತ್ತಾಳೆ' ಮೊದಲಾದವು ವರ್ತಮಾನಕಾಲವನ್ನೂ 'ಹೋಗುವನು, ಬರುವನು' ಮೊದಲಾದವು ಭವಿಷ್ಯತ್ಕಾಲವನ್ನೂ ಸೂಚಿಸುತ್ತವೆಯೆಂದು ಹೊಸಗನ್ನಡ ವ್ಯಾಕರಣದಲ್ಲಿ ಹೇಳಿದ್ದುಂಟು. 'ಹೋಗುವನು, ಬರುವಳು' ಮುಂತಾದ ಪ್ರಯೋಗಗಳು ಈಗ ಆಡುಮಾತಿನಲ್ಲಿ ಲುಪ್ತವಾಗಿದ್ದರೂ ಬರೆವಣಿಗೆಯ ಭಾಷೆಯಲ್ಲಿ ವಿಪುಲವಾಗಿಯೇ ಕಂಡುಬರುತ್ತವೆ. ಆದರೆ ವರ್ತಮಾನಕಾಲದ 'ಹೋಗುತ್ತಾನೆ, ಬರುತ್ತಾಳೆ' ಮೊದಲಾದವನ್ನು ಭವಿಷ್ಯತ್ಕಾಲದಲ್ಲಿಯೂ ಪ್ರಯೋಗಿಸುತ್ತಿದ್ದೇವೆ. ಈ ಬಗೆಯ ಕ್ರಿಯಾಪದಗಳನ್ನು ಉಭಯ ಕಾಲಗಳಲ್ಲಿಯೂ ಪ್ರಯೋಗಿಸುತ್ತಿರುವುದೇ ಭಾಷಾವಿಜ್ಞಾನಿಗಳ ಮೇಲ್ಕಂಡ ಹೇಳಿಕೆಗೆ ಕಾರಣವಾಗಿರಬಹುದು. ಆದರೆ 'ಹೋಗುತ್ತಿದ್ದಾನೆ, ಹೇಳುತ್ತಿದ್ದಾಳೆ' ಎಂಬ ಕ್ರಿಯಾಪದಗಳಲ್ಲಿಯೂ ಇದ್ದಾನೆ, ಇದ್ದಾಳೆ, ಇದೆ. ಎಂಬ ಕ್ರಿಯಾಪದಗಳಲ್ಲಿಯೂ ಭವಿಷ್ಯತ್ಕಾಲದ ಸೂಚನೆ ಲೇಶವೂ ಇಲ್ಲ. ಈ ವಿಷಯವನ್ನು ಡಾ॥ ಸಿ. ಓಂಕಾರಪ್ಪನವರು 'ಕನ್ನಡದಲ್ಲಿ ವರ್ತಮಾನಕಾಲ ಇದೆ'—ಎಂಬ ಲೇಖನದಲ್ಲಿ ದೀರ್ಘವಾಗಿ ವಿವರಿಸಿ, ಕನ್ನಡದಲ್ಲಿ ವರ್ತಮಾನಕಾಲವೂ ಇದೆಯೆಂಬುದನ್ನು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ (ನೋಡಿ: ಲೋಚನ, ಸಂಪುಟ ೨–ಜೂನ್ ೧೯೮೮–ಸಂಚಿಕೆ ೨). 'ಇರು' ಎಂಬ ಧಾತುವಿನ ಮೇಲ್ಕಂಡ ಪ್ರಯೋಗಗಳ

ಆಧಾರದಿಂದ ಭಾಷಾವಿಜ್ಞಾನಿಗಳ ಅಭಿಪ್ರಾಯವನ್ನು ವಿವರವಾಗಿ ಆ ಲೇಖನದಲ್ಲಿ ನಿರಾಕರಿಸಿರುವುದರಿಂದ ಇಲ್ಲಿ ಮತ್ತೆ ಅದನ್ನು ಬರೆಯಬೇಕಿದ್ದಿಲ್ಲ. ಅವರ ನಿರೂಪಣೆಗೆ ಪೋಷಕವಾಗಿ ಮಾತ್ರ ಈ ಇನ್ನೊಂದು ಅಂಶವನ್ನು ಸೇರಿಸಿಕೊಳ್ಳಬಹುದು. ಏನೆಂದರೆ: ಉಂಟು, ಬಲ್ಲನು—ಎಂಬ ಕ್ರಿಯಾಪದಗಳೂ ವರ್ತಮಾನ ಕಾಲವನ್ನೇ ಬೋಧಿಸುತ್ತವೆ. ಮತ್ತು ಈಗ, ಇಂದು—ಎಂಬ ಕ್ರಿಯಾವಿಶೇಷಣಗಳೂ ಸಹ ವರ್ತಮಾನಕಾಲವನ್ನು ಮಾತ್ರ ಬೋಧಿಸುತ್ತವೆ. ಆದ್ದರಿಂದ ಭೂತ–ಅಭೂತ ಎಂದು ಕಾಲವನ್ನು ವಿಂಗಡಿಸುವುದು ಶಾಸ್ತ್ರೀಯವಾಗುವುದಿಲ್ಲ.

ಇಂದು ವರ್ತಮಾನಕಾಲದ ಕ್ರಿಯಾಪದಗಳನ್ನು ಭವಿಷ್ಯತ್ಕಾಲದಲ್ಲಿಯೂ ಪ್ರಯೋಗಿಸುತ್ತಿರುವುದು ದಿಟ. ಭವಿಷ್ಯತ್ಕಾಲದ ಕ್ರಿಯಾರೂಪಗಳು ಆಡುಮಾತಿನಲ್ಲಿ ಲುಪ್ತವಾಗಿರುವುದೂ ದಿಟ. ಇದು ಪ್ರಯೋಗಸಾಂಕರ್ಯ. ಈ ಬಗೆಯ ಸಾಂಕರ್ಯ ಎಲ್ಲ ಭಾಷೆಗಳಲ್ಲಿಯೂ ಕಂಡುಬರುತ್ತದೆ. ವ್ಯವಸ್ಥಿತವಾದ ಸಂಸ್ಕೃತ ಭಾಷೆಯಲ್ಲಿಯೂ ಉಂಟು. ಪಾಣಿನಿಯೇ ಇದನ್ನು ಮನಗಂಡು "ವರ್ತಮಾನ ಸಾಮೀಪ್ಯೇ ವರ್ತಮಾನವದ್ವಾ" (ಅಷ್ಟಾ. ೩–೩–೧೩೧) ಎಂಬ ಸೂತ್ರವನ್ನು ರಚಿಸಿ, ಸಮೀಪದ ಭವಿಷ್ಯತ್ತಿನಲ್ಲಿ ವರ್ತಮಾನಕಾಲದ ಪ್ರತ್ಯಯಗಳನ್ನು ವಿಧಿಸಿದ್ದಾನೆ. ಹೀಗಿರುವಾಗ ಜನಸಾಮಾನ್ಯರೂ ಬಳಸತಕ್ಕ ಕನ್ನಡದಲ್ಲಿ ಪ್ರಯೋಗ ಸಾಂಕರ್ಯ ಉಂಟಾಗುವುದರಲ್ಲಿ ಆಶ್ಚರ್ಯವಿಲ್ಲ. ಇದಕ್ಕೆ ಪ್ರಾಚೀನ ವೈಯಾಕರಣರು ಹೊಣೆಯಲ್ಲ. ಯಾವ ಕ್ರಿಯಾಪದಗಳು ವರ್ತಮಾನಕಾಲವನ್ನು ಮಾತ್ರ ಬೋಧಿಸುತ್ತವೆಯೆಂದೂ ಭವಿಷ್ಯತ್ಕಾಲದ ಸೂಚನೆಯ ಲೇಶವೂ ಅವುಗಳಲ್ಲಿಲ್ಲವೆಂದೂ ತಿಳಿದಿದ್ದೆವೋ ಅವನ್ನು ಸಹ ಭವಿಷ್ಯತ್ಕಾಲದಲ್ಲಿ ಪ್ರಯೋಗಿಸಲಾಗುತ್ತಿದೆ! ಈ ಪ್ರಯೋಗಗಳನ್ನು ನೋಡಿ—"ಈ ಛತ್ರದಲ್ಲಿ ನಾಳೆ ಮದುವೆ ಉಂಟು, ಮುಂದಿನ ತಿಂಗಳು ರಥೋತ್ಸವ ಇದೆ, (ಬೆಂಗಳೂರಿಗೆ ಬರುವವನು ಹೇಳುತ್ತಾನೆ) ಮುಂದಿನ ವಾರ ನಾನು ಬೆಂಗಳೂರಲ್ಲಿದ್ದೇನೆ!"

ಈ ಉದಾಹರಣೆಗಳನ್ನು ನೋಡಿ :

೧. ಭವಿಷ್ಯತ್ಕಾಲದಲ್ಲಿ ಭೂತಕಾಲದ ರೂಪ ಬರುತ್ತದೆ.

ನಾನು ಎದ್ದು ಬಂದೆನೆಂದರೆ ನೀನು ಸತ್ತೆ! ನೀವು ಹೋಗಿ, ನಾನೀಗ ಬಂದೆ. ಮುಂದಿನ ಮಳೆಗಾಲ ಚೆನ್ನಾಗಿ ನಡೆದರೆ ಒಳ್ಳೆಯ ಬೆಳೆ ಬರುತ್ತಿತ್ತು.

೨. ಭೂತಕಾಲದಲ್ಲಿ ವರ್ತಮಾನಕಾಲದ ರೂಪ ಬರುತ್ತದೆ.

ಭೀಮನು ಅರ್ಜುನನಿಗೆ ಹೇಳುತ್ತಾನೆ—"ದುರ್ಯೋಧನನು ಶಾಂತಿಗೆ ಒಪ್ಪುವುದಿಲ್ಲ". "ದಮನಕನು ಪಿಂಗಳಕನ ಬಳಿಗೆ ಹೋಗುತ್ತಾನೆ". "ಅದಕ್ಕೆ ಗಾಂಧೀಜಿ ಉತ್ತರ ಕೊಡುತ್ತಾರೆ".

ಇವುಗಳಿಗೆಲ್ಲ ಉಪಪತ್ತಿಯುಂಟು. ಶಾಸ್ತ್ರದ ನೆರಳಲ್ಲಿ ಉಪಪತ್ತಿ ಮಾರ್ಗವನ್ನು ಚಿಂತಿಸಬೇಕೇ ಹೊರತು, ಜನಸಾಮಾನ್ಯರ ಪ್ರಯೋಗವನ್ನು ಕಂಡು ಶಾಸ್ತ್ರದ ತಾತ್ತ್ವಿಕ ಸಿದ್ಧಾಂತವನ್ನೇ ಅಲ್ಲಗಳೆಯುವುದು ಯುಕ್ತವಲ್ಲ.

— ೦ —

# ತುಳು ಭಾಗವತದಲ್ಲಿ ತ್ರಿಮೂರ್ತಿಗಣಬದ್ಧ ಷಟ್ಪದಿಗಳು

— ಪಾದೇಕಲ್ಲು ವಿಷ್ಣುಭಟ್ಟ

ನಾಗವರ್ಮ ಜಯಕೀರ್ತಿಗಳಿಂದ ನಿರೂಪಿತವಾದ ತ್ರಿಮೂರ್ತಿಗಣಬದ್ಧ ಷಟ್ಪದೀ ಬಂಧವು ಕನ್ನಡದಲ್ಲಿ ಬಹಳ ಕಡಮೆ ಪ್ರಮಾಣದಲ್ಲಿ ಬಳಕೆಯಾದ ಪದ್ಯ ಪ್ರಕಾರವಾಗಿದೆ. ಇದುವರೆಗೆ ಕನ್ನಡದಲ್ಲಿ ಗುರುತಿಸಲಾದ ತ್ರಿಮೂರ್ತಿಗಣಬದ್ಧ ಷಟ್ಪದಿಗಳು ಕೇವಲ ಹನ್ನೆರಡು—ನಾಗವರ್ಮನ (ಕ್ರಿ.ಶ. 990) ಲಕ್ಷಣಲಕ್ಷ್ಯ ಸಮನ್ವಿತ ಪದ್ಯವೊಂದು. ಚಂದ್ರರಾಜನ (ಕ್ರಿ.ಶ. 1030) ಮದನ ತಿಲಕದಲ್ಲಿ ಸ್ವತಂತ್ರವಾಗಿ ಒಂದು ಮತ್ತು ಬೇರೊಂದು ಪದ್ಯದಿಂದ ಹೊರಡಿಸಲಾಗುವವೆರಡು—ಹೀಗೆ ಮೂರು, ಚಿತ್ರದುರ್ಗದ ಶಾಸನದಲ್ಲಿ (ಕ್ರಿ.ಶ. 1067) ಒಂದು, ಬಿಜಾಪುರದ ಇಂಡಿ ತಾಲೂಕಿನ ಚಡಚಣದ ಶಾಸನದಲ್ಲಿ (ಕ್ರಿ.ಶ.1067) ಮೂರು, ಶಾಂತಿನಾಥನ (ಕ್ರಿ.ಶ. 1067) ಸುಕುಮಾರ ಚರಿತೆಯಲ್ಲಿ ಒಂದು, ಅಮ್ಮಿನಭಾವಿ ಶಾಸನದಲ್ಲಿ (ಕ್ರಿ.ಶ 1071) ಒಂದು (ಇದರಲ್ಲಿ ಒಂದು ಸಾಲು ಖಿಲವಾಗಿದೆ), ಮುಮ್ಮಡಿ ಸೋಮೇಶ್ವರನ (ಕ್ರಿ.ಶ. 1129) ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ ಒಂದು, ಆಂಧ್ರದ ಮೆಹಬೂಬ್‌ನಗರ ಜಿಲ್ಲೆಯ ಗಂಗಾಪುರ ಶಾಸನದಲ್ಲಿ (ಸು. ಕ್ರಿ.ಶ. 11–12ನೇ ಶತಮಾನ) ಒಂದು—ಇಷ್ಟು ಮಾತ್ರ[1] ಸಾಹಿತ್ಯ ಗ್ರಂಥಗಳಲ್ಲಿ ಸ್ವತಂತ್ರವಾದ ಉದಾಹರಣೆಗಳು ಎರಡೇ—ಚಂದ್ರರಾಜನ ಮದನತಿಲಕದಲ್ಲೊಂದು; ಶಾಂತಿನಾಥನ ಸುಕುಮಾರ ಚರಿತೆಯಲ್ಲೊಂದು. ನಾಗವರ್ಮನದು ಲಕ್ಷಣ ನಿರೂಪಣೆ ಮಾಡಿದ ಲಕ್ಷ್ಯಸಮನ್ವಿತ ಪದ್ಯ. ಮಾನಸೋಲ್ಲಾಸದ ಷಟ್ಪದಿ ಮಾತ್ರ ಸಂಸ್ಕೃತ ಗ್ರಂಥವೊಂದರಲ್ಲಿ ಬಂದ ಕನ್ನಡ ಉದಾಹರಣ ಪದ್ಯ. ಶಾಸನಗಳಲ್ಲಿ ದೊರಕಿದವು ಆರು. ಇವುಗಳಲ್ಲಿ ಹೆಚ್ಚಿನವು ಹನ್ನೊಂದನೇ ಶತಮಾನಕ್ಕೆ ಸೇರಿದವು. ಇವಲ್ಲದೆ ಜಯಕೀರ್ತಿಯ ಛಂದೋನುಶಾಸನದಲ್ಲಿ ಲಕ್ಷಣಲಕ್ಷ್ಯ ಸಮನ್ವಿತವಾಗಿ ಒಂದು ಷಟ್ಪದೀ ಪದ್ಯ ಸಂಸ್ಕೃತ ಭಾಷೆಯಲ್ಲೇ ಇರುವುದು ಪ್ರಸಿದ್ಧವಾಗಿದೆ. ತೆಲುಗು ಸಾಹಿತ್ಯದಲ್ಲಿ ಷಟ್ಪದಿ ಅಪರಿಚಿತ ಛಂದಸ್ಸೆಂದೂ ಹಾಗಿದ್ದರೂ ಛಂದಃ ಶಾಸ್ತ್ರ ಗ್ರಂಥಗಳಲ್ಲಿ ಈ ಬಂಧದ ಲಕ್ಷಣನಿರೂಪಣೆ ಮಾಡಲಾಗಿದೆಯೆಂದೂ ಆ ಎಲ್ಲ ಲಕ್ಷಣ ನಿರೂಪಣೆಗಳಲ್ಲಿ ಏಕಾಭಿಪ್ರಾಯವಿರುವುದೆಂದೂ ಕನ್ನಡದ ಲಕ್ಷಣನಿರೂಪಣೆಗೆ ಇದು ಸರಿಯಾಗಿ ಹೊಂದಿಕೊಳ್ಳುತ್ತದೆಂದೂ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು ತಿಳಿಸುತ್ತಾರೆ.[2] ತೆಲುಗು ಶಾಸ್ತ್ರಗ್ರಂಥಗಳಲ್ಲಿ ಲಕ್ಷಣಲಕ್ಷ್ಯ ಸಮನ್ವಿತವಾಗಿ ಲಕ್ಷಣ

---

1 ಹೆಚ್ಚಿನ ವಿವರಗಳಿಗೆ ನೋಡಿ: ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ, 'ಕನ್ನಡ ಛಂದಃಸ್ವರೂಪ' 1978, ಪುಟ: 488-502.

2 ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ, ಪೂರ್ವೋಕ್ತ, ಪು. 492.

ನಿರೂಪಿಸಿರುವುದನ್ನೂ ಅವರು ಉಲ್ಲೇಖಿಸಿರುತ್ತಾರೆ. ಒಟ್ಟಿನಲ್ಲಿ ದ್ರಾವಿಡ ಭಾಷೆಗಳಿಗೆ ಸಹಜವಾದ ತ್ರಿಮೂರ್ತಿಗಣ ಬಂಧವಾದರೂ ಷಟ್ಪದಿಯು ಅಪೂರ್ವವಾಗಿ ಪ್ರಯುಕ್ತವಾದ ಬಂಧವೇ ಸರಿ. ಕನ್ನಡದಲ್ಲಿ 11–12ನೆಯ ಶತಮಾನಗಳಿಂದ ಇತ್ತಲಾಗಿನ ಪ್ರಯೋಗಗಳಂತೂ ಇದುವರೆಗೆ ದೊರಕಿಲ್ಲ.

ದ್ರಾವಿಡ ಭಾಷೆಗಳಲ್ಲೊಂದಾದ ತುಳುವಿಗೆ ಲಿಖಿತ ಪ್ರಾಚೀನ ಸಾಹಿತ್ಯವಿಲ್ಲವೆಂದು ಇತ್ತೀಚಿನ ವರೆಗೆ ನಂಬಲಾಗಿತ್ತು. ಆದರೆ ಇತ್ತೀಚೆ ವಿಷ್ಣುತುಂಗ ಕವಿಯ "ಶ್ರೀಭಾಗವತೊ"[3] ಎಂಬ ಕಾವ್ಯವೂ ಅಜ್ಞಾತ ಕವಿಯ "ಕಾವೇರಿ"[4] ಎಂಬ ಕಾವ್ಯವೂ ಪ್ರಕಟವಾದ ಮೇಲೆ ಈ ಅಭಿಪ್ರಾಯ ಬದಲಾಗಿದೆ. ವಿಷ್ಣುತುಂಗನು ಬರೆದ ಭಾಗವತದ ಮೂರು ಸ್ಕಂಧಗಳು ಮಾತ್ರ ದೊರಕಿದ್ದು ಸುಮಾರು 2,000 ಪದ್ಯಗಳು ಉಪಲಬ್ಧವಿವೆ. ಇವನ ಕೃತಿಯು ಛಂದಸ್ಸಿನ ದೃಷ್ಟಿಯಿಂದ ಬಹಳ ಕುತೂಹಲವನ್ನು ಮೂಡಿಸುವಂತಹದಾಗಿದೆ. ಸಂಪಾದಕರು ಪ್ರಸ್ತಾವನೆಯಲ್ಲಿ ಹೇಳಿರುವಂತೆ ಈತ ಪ್ರಯೋಗಶೀಲನಾದ ಒಬ್ಬ ಕವಿ. ಕುತೂಹಲದ ಒಂದು ವಿಷಯವೆಂದರೆ: ಕನ್ನಡದಲ್ಲಿ ಪ್ರಯೋಗಗೊಂಡಿರುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ತ್ರಿಮೂರ್ತಿಗಣಬದ್ಧವಾದ ಷಟ್ಪದಿಗಳು ತುಳು ಭಾಗವತದಲ್ಲಿ ಪ್ರಯೋಗಗೊಂಡಿರುವುದು.

ತುಳು ಭಾಗವತದ ಸಂಪಾದಕರಾದ ಶ್ರೀ ವೆಂಕಟರಾಜ ಪುಣಿಂಚತ್ತಾಯರು ಈ ಕೃತಿಯಲ್ಲಿ ಬಳಕೆಗೊಂಡ ಛಂದೋಬಂಧಗಳ ಬಗೆಗೆ ಸಾಕಷ್ಟು ವಿವೇಚನೆ ಮಾಡಿದ್ದಾರೆ. ವಿಷ್ಣುತುಂಗನು ಸಂಸ್ಕೃತ ವೃತ್ತಗಳನ್ನೇ ತನ್ನ ಕಾವ್ಯನಿರೂಪಣೆಗೆ ಬಳಸಿಕೊಂಡುದನ್ನು ಉಲ್ಲೇಖಿಸುತ್ತಾ "ಅವನು ಬಳಸಿಕೊಂಡಿರುವ ವೃತ್ತಗಳಲ್ಲಿ ಮಲ್ಲಿಕಾಮಾಲೆ, ತರಳ, ತೋಟಕ, ವನಮಯೂರ, ಚಿತ್ರಪದ—ಎಂಬಿವುಗಳನ್ನು ಬಿಟ್ಟರೆ ಉಳಿದವೆಲ್ಲ ಅವನೇ ಹೊಸತಾಗಿ ರೂಪಿಸಿಕೊಂಡ ಕೆಲವು ವೃತ್ತಗಳಾಗಿವೆ. ಮಲ್ಲಿಕಾಮಾಲಾವೃತ್ತ, ತರಳವೃತ್ತ ಹಾಗೂ ತೋಟಕವೃತ್ತಜನ್ಯವೆಂದು ಹೇಳಬಹುದಾದ ಇನ್ನೆರಡು ಹೊಸ ವೃತ್ತಗಳು ಅವನಿಗೆ ಅತ್ಯಂತ ಪ್ರಿಯವಾಗಿರುವಂತೆ ಕಾಣುತ್ತದೆ. ಈ ನಾಲ್ಕು ವೃತ್ತಗಳ ಮೂಲಕವೇ ಇಲ್ಲಿನ ಸಮಗ್ರ ಕಾವ್ಯಕಥೆ ಮುಂದುವರಿಯುತ್ತದೆ" ಎಂದಿದ್ದಾರೆ.[5] ಮುಂದೆ "ಹೀಗೆ ರೂಢಿಯಲ್ಲಿರುವ ಮಲ್ಲಿಕಾಮಾಲೆ, ತರಳ,

---

[3] ವೆಂಕಟರಾಜ ಪುಣಿಂಚತ್ತಾಯ, ಸಂ: ಪ್ರಕಾಶನ—ಮಂಗಳೂರು ವಿಶ್ವವಿದ್ಯಾನಿಲಯ 1984. ಈ ಕೃತಿಯನ್ನು 'ತುಳು ಭಾಗವತ' ಎಂದು ಹೇಳುವ ರೂಢಿ ಈಗ ಬಂದಿದೆ.

[4] ವೆಂಕಟರಾಜ ಪುಣಿಂಚತ್ತಾಯ, ಸಂ. ಪ್ರಕಾಶನ—ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ–1987. ಈ ಕಾವ್ಯದ ಆದಿಯ, ಮಧ್ಯದ ಮತ್ತು ಅಂತ್ಯದ ಭಾಗಗಳು ಖಿಲವಾಗಿರುವುದರಿಂದ ಕವಿ ಈ ಕಾವ್ಯಕ್ಕೆ ಕೊಟ್ಟ ಹೆಸರೇನೆಂಬುದು ತಿಳಿಯದು. 'ಕಾವೇರಿ' ಎಂಬ ಹೆಸರು ಸಂಪಾದಕರಿಂದಲೇ ಕೊಡಲ್ಪಟ್ಟುದು.

[5] 'ಶ್ರೀ ಭಾಗವತೊ'—ಪ್ರಸ್ತಾವನೆ, ಪು. 32.

ತೋಟಕ, ವನಮಯೂರ, ಚಿತ್ರಪದ ವೃತ್ತಗಳನ್ನೂ ಜೊತೆಗೆ ಅವುಗಳ ಲಯ ಸ್ವಭಾವಗಳನ್ನು ಹಾಗೆಯೇ ಉಳಿಸಿಕೊಂಡು ಕೆಲವು ನಿರ್ದಿಷ್ಟ ಸ್ಥಾನಗಳಲ್ಲಿ ಮಾತ್ರ ಗುರುಲಘುಗಳನ್ನು ಅತ್ತಿತ್ತ ಪಲ್ಲಟಮಾಡಿ ರೂಪಿಸಿಕೊಂಡ ಹೊಸ ವೃತ್ತಗಳನ್ನೂ ದ್ರುತವಿಲಂಬಿತ ತೋಟಕ ವೃತ್ತಗಳ ಧಾಟಿಗೆ ಹೊಸ ತಿರುವನ್ನು ಕೊಟ್ಟು, ರಚಿಸಿದ ನವೀನ ವೃತ್ತಗಳನ್ನೂ ಅಂಶಗಣದ ಇತರ ವೃತ್ತಗಳನ್ನೂ ವಿಷ್ಣುತುಂಗನ ಕಾವ್ಯದಲ್ಲಿ ಕಾಣುತ್ತೇವೆ. ಅಂಶಗಣದ ಆಧಾರದಲ್ಲಿ ಈತ ರಚಿಸಿದ ವೃತ್ತಗಳು ಹೆಚ್ಚು ಯಶಸ್ವಿಯಾದಂತೆ ಕಂಡುಬರುವುದಿಲ್ಲ. ಬಹುಶಃ ಕವಿಗೂ ಇದು ಹೆಚ್ಚು ಇಷ್ಟವಾದಂತೆ ಅನಿಸುವುದಿಲ್ಲ. ಆದ್ದರಿಂದ "ಈ ರೀತಿಯ ವೃತ್ತಗಳು ಇಡೀ ಕಾವ್ಯದಲ್ಲಿ ಒಟ್ಟು ಹದಿಮೂರು ಮಾತ್ರ ಇವೆ" ಎಂದು ಹೇಳಿರುತ್ತಾರೆ.[6]

ಪ್ರಸ್ತಾವನೆಯಲ್ಲಿ ತ್ರಿಮೂರ್ತಿಗಣ ಘಟಿತ ಪದ್ಯಗಳನ್ನು ವಿವರಿಸುತ್ತಾ ಪುಣಿಂಚತ್ತಾಯರು ಈ ಪದ್ಯಗಳನ್ನು "ಅಂಶಗಣದ ಭ್ರಾಂತಿಯನ್ನು ಹುಟ್ಟಿಸುವ ಕೆಲವು ಅಪೂರ್ವ (ವಿಷಮ) ವೃತ್ತಗಳು"[7] ಎನ್ನುತ್ತಾರೆ. ಅಂತಹ 'ವೃತ್ತ'ಗಳಿಗೆ ಉದಾಹರಣೆಗಳೆಂದು ಐದು ಪದ್ಯಗಳನ್ನು ಗಣವಿಂಗಡಿಸಿ ತೋರಿಸಿದ್ದಾರೆ. ಇವುಗಳಲ್ಲಿ ಐದನೆಯದು[8] ಮಾತ್ರ ಅವರು ಗುರುತಿಸಿರುವಂತೆ ತ್ರಿಮೂರ್ತಿಗಣಬದ್ಧವಾದುದಲ್ಲ. ಅದರ ಮೊದಲ ಚರಣದಲ್ಲಿರುವ ಪಾಠದೋಷದಿಂದಾಗಿ ಅದರ ಗಣವಿಂಗಡಣೆಯ ಸಂದರ್ಭದಲ್ಲಿ ಗೊಂದಲವುಂಟಾಗಿದೆ. ಅದರ ಉಳಿದ ಮೂರೂ ಪಾದಗಳು ಅಕ್ಷರ ಗಣಗಳಿಗೆ ಸರಿಯಾಗಿ ಅಳವಡುತ್ತವೆ ಮತ್ತು ಆ ಮೂರೂ ಸಾಲುಗಳಲ್ಲಿ ತಜಜಜಜಯ ಗಣವಿನ್ಯಾಸವಿದೆ ಮತ್ತು ಈ ಗಣವಿನ್ಯಾಸದ ಹಲವು ವೃತ್ತಗಳು ಈ ಕೃತಿಯಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.[9] ಪ್ರಸ್ತಾವನೆಯಲ್ಲಿ ಅವರು ಎತ್ತಿಹೇಳಿದ ನಾಲ್ಕೂ ಪದ್ಯಗಳು ತ್ರಿಮೂರ್ತಿ ಗಣಘಟಿತಗಳೇ ಆಗಿವೆ. ಆದರೆ ಆ ಪದ್ಯಗಳ ವಿಚಾರದಲ್ಲಿ, ಪ್ರಸ್ತಾವನೆ ಬರೆಯುವ ಸಂದರ್ಭದಲ್ಲಿ ಅವರಲ್ಲಿ ಖಚಿತತೆಯಿಲ್ಲದುದರಿಂದ ಅವರು ಅವುಗಳನ್ನು ವಿಂಗಡಿಸಿದ ವಿಧಾನ ಸರಿಯಾಗಲಿಲ್ಲ. ಒಂದು ಉದಾಹರಣೆಯನ್ನು ಗಮನಿಸೋಣ :—

---

[6] ಅದೇ ಪು. 37.

[7] ಅದೇ ಪು. 36.

[8] ಅದೇ ಪು. 37 ಮತ್ತು ಶ್ರೀ ಭಾಗವತೊ 1–12–26 ಪು. 120.

[9] ಉದಾ :—ಶ್ರೀ ಭಾಗವತೊ-1–1–15 ; 1–1–20 ಇತ್ಯಾದಿ. ಈ ವೃತ್ತದ 12ನೆಯ ಮತ್ತು 13ನೆಯ ಸ್ಥಾನಗಳಲ್ಲಿರುವ ಎರಡು ಲಘುಗಳ ಬದಲಿಗೆ ಒಂದು ಗುರು ವಿನ್ಯಸಿಸಿದ 'ತಜಜಯ ಭಗಗ' ವಿನ್ಯಾಸದ ವೃತ್ತಗಳೂ ಹಲವು ಇವೆ. ಉದಾ :— 1–11–4 ; 1–10–15 ಇತ್ಯಾದಿ. ತುಳು ಭಾಗವತದಲ್ಲಿ ಪ್ರಯೋಗಗೊಂಡ ವೃತ್ತಗಳ ಬಗೆಗೆ ಕೆಲವಂಶಗಳನ್ನು ಗುರುತಿಸಿ ಪ್ರಸ್ತಾವನೆಯಲ್ಲಿ ಶ್ರೀ ಪುಣಿಂಚತ್ತಾಯರು ಹೇಳಿದ್ದಾರೆ.

ವಾರಿ . ಜಾಸನ . ಭಾಯೇರ್ . ನಾರೆ . ಸ್ವೀ ಹೃದ . ಯಂಟ್ .
ಮೂರಾ . ರೀತನ . ಯಽ ಕಂ . ಚಿರಗ್ . ಸ್ವೊಂಡ್ .
ಘೋರೊ . ಮಾಯಿನ . ಸೈನ್ಯ . ವಾರು . ಧೀಟಸು . ರಾರಿ .
ದ್ವಾರ . ಕೀ ಪೊಗಿ . ಸ್ತ್ರೀ . ಕಥೆರೆಽ . ಚಿಪ್ಪೆ .

— ಉಳಿದ ಮೂರು ಪದ್ಯಗಳನ್ನು ಹೀಗೆಯೇ ಗಣವಿಂಗಡಣೆ ಮಾಡಿ ಇವು ಯಾವ ರೀತಿಯ ಪದ್ಯಗಳೆಂಬುದನ್ನು ಖಚಿತವಾಗಿ ನಿರ್ಣಯಿಸಲಾರದವರಾಗಿದ್ದಾರೆ. ಆದರೆ ಅದೇ ಪುಟದ ಟಿಪ್ಪಣಿಯಲ್ಲಿ ಈ ಪದ್ಯಗಳು ಈ ಕವಿ 'ಸಾಂಗತ್ಯದ ಮಾದರಿಯಲ್ಲಿ ಮಾಡಿದ ಹೊಸ ಪ್ರಯೋಗವಿರಲೂಬಹುದು' ಎಂದು ಊಹಿಸಿ ಮೇಲೆ ಉದ್ಧರಿಸಿದ ಪದ್ಯವನ್ನೇ ಈ ಕೆಳಗಿನಂತೆ ವಿಂಗಡಿಸಿ ಕೊಟ್ಟಿದ್ದಾರೆ.[10]

ವಾರೀಜಾ . ಸನಭಾಯೇರ್ . ನಾರೆಽಸ್ವೀ . ಹೃದಯಂಟ್ .
ಮೂರಾರೀ . ತನಯಾಕಂ . ಚಿರಗ್ಽಸ್ವೊಂಡ್ .
ಘೋರೋಮಾ . ಯಿನ ಸೈನ್ಯಽ . ವಾರುಽಧೀ . ಟಸುರಾರಿ .
ದ್ವಾರಽಕೀ . ಪೊಗಿಸ್ತ್ರೀ . ಕಥೆ ರೆಽಚಿಪ್ಪೆ .

ಇದು ಸಾಂಗತ್ಯದ ಮಾದರಿಯಲ್ಲಿ ಮಾಡಿದ ಪ್ರಯೋಗವಿರಲೂಬಹುದೆಂಬ ಒಂದು ಸಂದೇಹದೊಡನೆ ಪ್ರಸ್ತಾವನೆಯಲ್ಲಿ ಮೇಲೆ ತೋರಿಸಿದಂತೆ ತಾವು ಮಾಡಿದ ಗಣ ವಿಂಗಡಣೆ ಸರಿಯಲ್ಲವೆಂಬ ಸಂದೇಹವೂ ಅವರಲ್ಲಿತ್ತೆಂದು ತಿಳಿಯಬೇಕಾಗುತ್ತದೆ. ಈ ಸಂದೇಹವನ್ನೂ ಊಹೆಯನ್ನೂ ಸ್ವಲ್ಪ ಮುಂದುವರಿಸಿ ಆದಿ ಪ್ರಾಸವನ್ನು ಗಮನಿಸಿ ಕೊಂಡು ಈ ಪದ್ಯವನ್ನು ಆರು ಸಾಲುಗಳಲ್ಲಿ ಅವರು ಬರೆಯುತ್ತಿದ್ದರೆ ತ್ರಿಮೂರ್ತಿ ಗಣಬದ್ಧವಾದ ಷಟ್ಪದಿಯೇ ಇದೆಂಬ ನಿರ್ಣಯಕ್ಕೆ ಅವರು ಬರುತ್ತಿದ್ದರೆಂಬುದರಲ್ಲಿ ಸಂದೇಹವೇನೂ ಇಲ್ಲ. ಆ ಪದ್ಯವನ್ನೇ ಆರು ಸಾಲುಗಳಲ್ಲಿ ಬರೆದಾಗ ಹೀಗಾಗುತ್ತದೆ:

ವಾರೀಜಾ . ಸನಭಾಯೇರ್ . ವಿ. ವಿ .
ನಾರೆಽಸ್ವೀ . ಹೃದಯಂಟ್ . ವಿ . ವಿ .
ಮೂರಾರೀ . ತನಯಾಕಂ . ಚಿರಗ್ಸ್ವೊಂಡ್ . ವಿ . ವಿ . ರು .
ಘೋರೋಮಾ . ಯಿನಸ್ಸೈನ್ಯ . ವಿ . ವಿ .
ವಾರುಽಧೀ . ಟಸುರಾರಿ . ವಿ . ವಿ .
ದ್ವಾರಽ ಕೀ . ಪೊಗಿಸ್ತ್ರೀ . ಕಥೆರೆಽಚಿಪ್ಪೆ . ವಿ . ವಿ . ರು .

—ಇದೀಗ ಒಂದನೆಯ, ಎರಡನೆಯ, ನಾಲ್ಕನೆಯ ಮತ್ತು ಐದನೆಯ ಪಾದಗಳಲ್ಲಿ ಎರಡೆರಡು ವಿಷ್ಣುಗಣಗಳನ್ನೂ ಮೂರನೆಯ ಮತ್ತು ಆರನೆಯ ಪಾದಗಳಲ್ಲಿ ಎರಡು ವಿಷ್ಣು ಮತ್ತು ಒಂದು ರುದ್ರಗಣಗಳನ್ನೂ ಉಳ್ಳ ಶುದ್ಧ ತ್ರಿಮೂರ್ತಿಗಣ ಷಟ್ಪದಿಯಾಗಿದೆ.

---

[10] ಶ್ರೀ ಭಾಗವತೊ, ಪ್ರಸ್ತಾವನೆ ಪು. 36.

ತ್ರಿಮೂರ್ತಿಗಣಗಳ ಆಧಾರದಲ್ಲಿ ಈತ ರಚಿಸಿದ ಪದ್ಯಗಳು ಕೇವಲ ಹದಿಮೂರು ಮಾತ್ರ ಈ ಕಾವ್ಯದಲ್ಲಿರುವುದೆಂದೂ ಪುಣಿಂಚತ್ತಾಯರು ಸೂಚಿಸಿದ್ದಾರೆ. ಆದರೆ ನನ್ನ ಪರಿಶೀಲನೆಯಲ್ಲಿ ಒಟ್ಟು ಹದಿನಾರು ತ್ರಿಮೂರ್ತಿಗಣಬದ್ಧ ಷಟ್ಪದಿಗಳು ಕಂಡುಬಂದಿವೆ. ಈ ಹದಿನಾರು ಪದ್ಯಗಳೂ (ಕೆಲವು ಚಿಕ್ಕಪುಟ್ಟ ಪಾಠದೋಷಗಳನ್ನು ಹೊರತಾಗಿ) ಲಕ್ಷಣ ಶುದ್ಧ ಷಟ್ಪದೀಬಂಧಗಳಾಗಿವೆ. ಈ ಪದ್ಯಗಳನ್ನು ವೃತ್ತಗಳೆಂಬ ಗ್ರಹಿಕೆಯಿಂದ ನಾಲ್ಕುನಾಲ್ಕು ಸಾಲುಗಳಲ್ಲಿ ಮುದ್ರಿಸಲಾಗಿದ್ದು ಷಟ್ಪದೀ ರೂಪದಲ್ಲಿ ಮುಂದೆ ಕೊಡಲಾಗಿದೆ. (ತ್ರಿಮೂರ್ತಿಗಣಗಳನ್ನು ಗುರುತಿಸಲು ಅನುಕೂಲವಾಗುವಂತೆ ದೀರ್ಘೀಕರಿಸಿ ಹೇಳಬಹುದಾದ ಲಘುಸ್ಥಾನಗಳಲ್ಲಿ ಲಘುಗಳ ಮುಂದೊಂದು ಗುರುತನ್ನು ಹಾಕಿ ಹಸ್ತಪ್ರತಿಯಲ್ಲೇ ತೋರಿಸಲಾಗಿದೆಯೆಂದು ಪುಣಿಂಚತ್ತಾಯರು ತಿಳಿಸಿರುತ್ತಾರೆ. ಅದನ್ನೇ ಮುದ್ರಿತ ಪ್ರತಿಯಲ್ಲೂ ಅನುಸರಿಸಿ ಹಸ್ತಪ್ರತಿಯಲ್ಲಿ ಅಂತಹ ಗುರುತಿರುವೆಡೆಗಳಲ್ಲೆಲ್ಲ ಒಂದು ಪುಟ್ಟಗೆರೆಯನ್ನಿರಿಸಲಾಗಿದೆ. ಅಂತಹ ಗುರುತುಗಳಿರುವ ಸ್ಥಾನಗಳನ್ನೆಲ್ಲ ಅವಗ್ರಹ ಚಿಹ್ನೆ "ऽ" ಯಿಂದ ಈ ಮುಂದೆ ಗಣವಿಂಗಡಿಸಿ ತೋರಿಸಿದ ಪದ್ಯಗಳಲ್ಲಿ ಗುರುತಿಸಲಾಗಿದೆ. ಈ ಪದ್ಯಗಳ ಸಂಖ್ಯೆಗಳನ್ನು ಆಯಾ ಪದ್ಯಗಳ ಮುಂದೆಯೇ ಬರೆಯಲಾಗಿದೆ.)

1. ವಾರಿಽಜಾ . ಸನ ಭಾರ್ಯೇಽ .
   ನಾರೆಸ್ಟ್ . ಹೃದಯಂಟ್ .
   ಮಾರಾರೀ . ತನಯಽಕಂ . ಚೆರಗ್‌ಸ್ವೊಂಡ್ .
   ಘೋರೋಽಮಾ . ಯಿನ ಸೈನ್ಯಽ .
   ವಾರುಧಿ . ಟಸುರಾರಿ .
   ದ್ವಾರಽಕೀ . ಪೊಗಿಸ್ಟ್ತೀ . ಕಥೆ ರೆಚಿಪ್ಪೆ ।[11] (1-10-1)
2. ಮುನಿಮುಖ್ಯೇ . ರ್ಕಳೆ ಮುನ್ನಾ .
   ಮಿನತೇ ಮೆಂ . ಚಲಸೂತೆ .
   ವನರುಽಹೋ . ದಯೊ [ಅ] ನ . ರ್ತಸುರಾಷ್ಟೊಂಟ್ .
   ಘನಸೌಖ್ಯೊಂ . ಟ್‌ಶಯೊತಂ .
   ಚನ ರಾಗೊಂ . ಟ್‌ಪನಿಲ್ವಾ .
   ಇನ ರಶ್ಮಿ . ಯುದಿತ್ ಚೋ . ಜತೊ ಮಾಡ್ಯೆತ್ತ್ । (1-10-2)

---

[11] 'ಸ್ಟ್' ಎಂಬುದು ಪ್ರಾಚೀನ ತುಳುವಿನ ಒಂದು ವಿಶಿಷ್ಟ ಧ್ವನಿ. ಇದನ್ನು ಶಿಥಿಲದ್ವಿತ್ವವೆಂದು ಪರಿಗಣಿಸಬೇಕಾಗುತ್ತದೆ. ಇದರಲ್ಲಿರುವ ಸ್ವರವು 'ಕಿರಿಯ ಉಕಾರ' (ಅಸಂವೃತ ಉಕಾರ). ಹಾಗೆಯೇ ಇಲ್ಲಿಯ ತುಳು ಉದ್ಧರಣೆಗಳಲ್ಲಿ ಬಂದ ವ್ಯಂಜನ ರೂಪದಂತೆ ಬರೆಯಲಾದ ಎಲ್ಲ ಅಕ್ಷರಗಳೂ ಅಸಂವೃತ ಉಕಾರ ಅಥವಾ ಕಿರಿಯ ಉಕಾರದಿಂದ ಸೇರಿದ ಅಕ್ಷರಗಳಾಗಿವೆ. ತಮಿಳಿನ 'ಕುಟ್ರಿಯಲ್' ಉಕಾರದಂತೆ ಇದರ ಉಚ್ಚಾರ. ತುಳುವಿನಲ್ಲಿ ಈ ಉಕಾರ ಧಾರಾಳವಾಗಿ ಬಳಕೆಯಲ್ಲಿದೆ. ಕನ್ನಡದಲ್ಲಿ ಈ ಉಕಾರವಿಲ್ಲವಾದುದರಿಂದ ಈ ಪದ್ಯಗಳನ್ನು ವಿಸ್ತಾರ ಮಾಡುವ ಸಂದರ್ಭದಲ್ಲಿ ಈ ವಿಷಯವನ್ನು ಅಗತ್ಯ ಗಮನಿಸಬೇಕಾಗುತ್ತದೆ.

(ಈ ಪದ್ಯದ ಮೂರನೆಯ ಸಾಲಿನ ಚೌಕಕಂಸದಲ್ಲಿರುವ [ಅ] ಎಂಬುದು ಮುದ್ರಿತ ಭಾಗದಲ್ಲಿಲ್ಲ. ಅರ್ಥಕ್ಕೂ ಛಂದಸ್ಸಿಗೂ ಸರಿಹೊಂದುವಂತೆ ಇಲ್ಲಿ ಸೇರಿಸಿ ಕೊಳ್ಳಲಾಗಿದೆ. ಹಸ್ತಪ್ರತಿಯಲ್ಲಿ ಬಹುಶಃ ಈ ಅಕ್ಷರ ಬಿಟ್ಟು ಹೋಗಿರಬೇಕು.)

3. ಔಲ್ಕ ಕೊಂ . ಕ್ ಮುಕುಂದ .
ಜ್ವಾಲಾ ಮಾ . ಲೆತ ಚಕ್ರೋ .
ಸಾಲ್ಕ ಸಾ . ಗರೊಂತ್ೀ ವ . ರ್ತಣತೆನ್ನಂದೊ .
ಮೂಲ್ಕ ದಿ . ಗ್ವನಿತೇನ್ಕ .
ಓಲ್ಕೆಯೋ . ರೆವಿರಥಾ .
ಘೌಲಿಯೋ . ದ್ಯುಮಣೀ ಮಂ . ಡಲೊಮೋ ತಾನ್ । (1–10–3)

(ಈ ಪದ್ಯದ ಕೊನೆಯ ಸಾಲಿನ 'ಘೌಲಿಯೋ' ಎಂಬುದರ ಶುದ್ಧರೂಪ 'ಗಾಲಿಯೋ' ಎಂದಿದ್ದಿರಬಹುದು.)

4. ಉದಯ್ಕ ಪ . ರ್ವತ ಶೃಂಗಂ .
ಟುದಿತ್ೀ ಭಾ . ಸ್ಕರೆ ಚೋಜಾ .
ಬೆದಿಯೊ ತಾ . ರಕೆರೆಯ್ಕೋ . ಡ್ಸ್ವರೋಳಿಂತ್ .
ವದನ್ಕ ಪಾ . ಯಪ ಚಂದ್ರೆ .
ಮುದೆಯೋ ಕ . ರ್ಥಲೆ ಭೃಂಗೇ .
ರ್ದತೋ ವಾ . ರಿಜದ್ವಾರೋ . ಮುಹಲೋಕೊಂಟ್ । (1–10–4)

5. ಅಂಗ್ಕಜಾಂ . ತಕ ಪುತ್ರ .
ಕಿಂಗ್ಸ್ . ನಮಿತೊಂಡ್ .
ಅಂಗ್ಕನೇ . ಚರಣೋ ಸೇ . ವಿಪುಕೇ ಬ್ರಹ್ಮನ್ .
ಅಂಗ್ಕಘಾ . ತಕೊ ಪಿಂದ್ೀ .
ಗೆಂಗೆ ತ . ಕರೆಟಾಸ್ .
ಸಂಘೋಶ್ರೀ . ಮುನಿಚೂಸ್ಟೀ . ಕಥೆರೆಚೀಪ್ಪೆ । (1–19–1)

(ಈ ಪದ್ಯದ ಮೂರನೆಯ ಚರಣದ ಮೂರನೆಯ ಗಣದಲ್ಲಿ 'ನ್' ಎಂಬ ಅಕ್ಷರ ಹೆಚ್ಚಾಗಿದೆ. ಇದನ್ನು ವ್ಯಂಜನವೆಂದು ಪರಿಗಣಿಸಿಕೊಂಡಲ್ಲಿ ರುದ್ರಗಣಕ್ಕೆ ಸರಿ ಹೋಗುತ್ತದೆ.)

6. ಪಂಚ್ಕ ಭೂ . ತೊಮತ್ಯೆನ್ೀ .
ಪಂಚೇಂದ್ರ್ಯಂ . ಕುಳವ್ಯೆನ್ೀ .
ಪಂಚ್ಕ ಪ್ರಾ . ಣಮಯೋಮ್ಯೆ . ನೌ ಬೀತೀತೆ .
ಪಂಚ್ಕ ವ . ರ್ತ ಕೊಮ್ಯೆನ್ೀ .
ಪಂಚಾಲ್ಕಾ . ತ್ಕಕೊ ಸಾಲ್ಕ .
[ಲಿಂಚ್ಕಸೂ . ಕ್ಷ್ಮಪ] ತತ್ವಂ . ಕುಳು ಕೂಡಾಸ್ಕೊ । (3–18–24)

(ಈ ಪದ್ಯದ ಕೊನೆಯ ಸಾಲಿನಲ್ಲಿ ಖಿಲವಾದ ಭಾಗವನ್ನು ಸಂಪಾದಕರು ಸೇರಿಸಿ ಚೌಕಕಂಸದಲ್ಲಿ ಸಂಪಾದಕರ ಪಾಠವಾಗಿ [ಲಿಂಚ ವಿಚಾರಿಪ] ಎಂಬುದನ್ನು ಕೊಟ್ಟಿದ್ದಾರೆ. ಸಂಪಾದಕರ ಪಾಠವನ್ನಿಟ್ಟುಕೊಂಡರೆ ಆರನೆಯ ಸಾಲಿನ ಮೊದಲ ಗಣವೂ ರುದ್ರವಾಗುತ್ತದೆ. ಆದುದರಿಂದ ಛಂದಸ್ಸಿಗೂ ಅರ್ಥಕ್ಕೂ ತುಳು ಭಾಗವತದ ಭಾಷೆಗೂ ಸರಿಹೊಂದುವಂತೆ ಬೇರೆ ಒಂದು ಊಹಾಪಾಠವನ್ನು ಕೊಟ್ಟಿರುತ್ತೇನೆ.)

7. ಈ ತತ್ವಂ . ಕುಳೆ ಕರ್ಮ .
ನ್ಯಾತೋನಾ . ಣಲ ಕೇಳ್ .
ಭೂತs ಪಂ . ಚಕಮಾಯಾ ತನುತಾಕಾರೋ .
[ಬೇತೇತೇ] . ತೆರಿತೋಂಪೇ .
ಮಾತೇ ಪಂ . ಡಪೆ ಕೇ [ಳ್]
[ಶಾಸ್ತ್ರೋತ] . ಧರ್ಮಮಿನೋಂಪೇ . ವಿರಚೀವುಪ್ಪೆ ! (3–18–25)

(ಈ ಪದ್ಯದ ನಾಲ್ಕನೆಯ ಸಾಲಿನ ಮೊದಲ ಗಣದ ಭಾಗದಲ್ಲಿ ಮುದ್ರಿತ ಪುಸ್ತಕದಲ್ಲಿ "ಬೇತೇ ಬೇತೇ" ಎಂಬುದಿದೆ. ಬಹುಶಃ ಹಸ್ತಪ್ರತಿಕಾರನಿಗೆ ಎರಡನೆಯ "ಬೇ" ಎಂಬುದು ಸಾದೃಶ್ಯದಿಂದ ಬರೆದು ಹೋದುದಿರಬೇಕು. ಈ ಸ್ಥಾನದಲ್ಲಿ "ಬೇತೇತೇ" ಎಂಬುದೇ ಇದ್ದಿರಬೇಕು. ಅದು ಛಂದಸ್ಸಿಗೆ ಸರಿಹೋಗುವುದು ಮಾತ್ರವಲ್ಲ, ಹಿಂದಿನ ಪದ್ಯದಲ್ಲೂ ಈ ರೂಪವಿದೆಯೆಂಬುದನ್ನು ಗಮನಿಸಬೇಕು. ಆದುದರಿಂದ [ಬೇತೇತೇ] ಎಂಬ ಊಹಾಪಾಠಕ್ಕೆ ಅಂತಸ್ಸಂಭಾವ್ಯತೆಯಿದೆ. ಐದನೆಯ ಸಾಲಿನಲ್ಲಿ [ಳ್] ಎಂಬ ಊಹಾಪಾಠವಿರುವಲ್ಲಿ [ಳೈನೀ] ಎಂದು ಮುದ್ರಿತ ಪುಸ್ತಕದಲ್ಲಿ ಸಂಪಾದಕರ ಪಾಠವಿದೆ. ಅಲ್ಲಿ "ಳ್" ಎಂಬಷ್ಟೇ ಇದ್ದರೆ ಅರ್ಥಕ್ಕೆ ಬಾಧೆಯಿಲ್ಲದ ಛಂದಸ್ಸಿಗೆ ಸರಿಹೋಗುತ್ತದೆ. ಆರನೆಯ ಸಾಲಿನ [ಶಾಸ್ತ್ರೋತ] ಎಂಬ ಭಾಗದಲ್ಲಿ ಮುದ್ರಿತ ಪುಸ್ತಕದಲ್ಲಿ "ಶಾಸ್ತ್ರ" ಎಂಬಷ್ಟು ಮಾತ್ರವಿದ್ದು ಆ ಗಣವು ಬ್ರಹ್ಮವಾಗುತ್ತದೆ. ಅದಕ್ಕಾಗಿ "ಶಾಸ್ತ್ರೋತ" ಎಂಬ ಊಹಾಪಾಠವನ್ನಿಟ್ಟಿದೆ ಅರ್ಥದ ದೃಷ್ಟಿಯಿಂದ ಎರಡೂ ಪಾಠಗಳು ಸರಿಯೇ. ತ್ರಿಮೂರ್ತಿಗಣಬಂಧಗಳಲ್ಲಿ ಕೆಲವು ಬಾರಿ ವಿಷ್ಣುಗಣ ಸ್ಥಾನದಲ್ಲಿ ಬ್ರಹ್ಮಗಣ ಬರುವುದೂ ಇರುವುದರಿಂದ ಇದು ಮಾಡಲೇಬೇಕಾದ ಪರಿಷ್ಕರಣವೆಂದು ಹೇಳಬೇಕಾದ ಅಗತ್ಯವಿಲ್ಲ.

8. ಚಿತ್ರsಜಾ . ರಿಕುಮಾರಾ .
ಮತ್ತsವಾ . ರಣವಕ್ತ್ರ .
ಆ್ತ್ರೊsಡೂ . ಪರೊಮೆಸ್ಯೆ . ರಘಯೊಮಾವಾ .
ಮುಕ್ತ್ರsಕಾ . ತ್ರಯೊಮಾಸ್ಥೇ .
ಭಕ್ತ್ರsಯೋ . ಗನಿಧಾನೋ .
ಮುಕ್ತ್ರs ಧ್ಯಾ . ನೊಮಿನಾರೆ . ಸ್ವ [ಣ] ಕೇಣಾಲೂ ! (3–20–1)

(ಆರನೆಯ ಸಾಲಿನ [ಣ] ಎಂಬಲ್ಲಿ ಮುದ್ರಿತ ಪುಸ್ತಕದಲ್ಲಿ "ಣಾ" ಎಂಬ ದೀರ್ಘ ರೂಪವಿದ್ದು ಅದನ್ನುಳಿಸಿಕೊಂಡರೆ ಆ ಗಣವು ತ್ರಿಮೂರ್ತಿಗಣನಿಯಮಕ್ಕೆ ಬಾಹಿರವಾದ ಪ್ರಥಮ ಲಘ್ವಾನಂತರ ಗುರು ರೂಪವನ್ನು ಪಡೆಯುವುದರಿಂದ ಈ ರೀತಿಯಲ್ಲಿ ಪರಿಷ್ಕರಿಸಲಾಗಿದೆ.

9. ತನಪುತ್ರಽ . ವಚನಂತಽ .
ವಿನಯುಽ ಸಾ . ರೊಮಿ ಕೇಂಡ್ .
ಮನಿತೇರಾ . ರೆಕ್ ಕಯ್ಯಂ . ಜಲಿನೀ ಪತ್ತ್ .
ವನರುಽ ಹೋ . ದರ ಭಕ್ತಿಽ .
ತನುಭಽ ಮಾ . ಗೊರ್ಮಿ ನಂಕ್ .
ಪಿನಿಯೇ ರಾ . ಕಿಪ್ರಕಾರೋ . ಕರುಣಿಪೋಡು ॥ (3-20-2)

10. ಅಪ್ಪಾ ಕೇ . ಳಿಲೆ ಭಕ್ತಿಽ .
ಟ್ಪ್ಪೋಡೆ . ನ್ನಿ ಮನುಷ್ಯೇ .
ತಪ್ಪೋವೋ . ಡುಂಬುಳುಳ್ಳಾ . ವಿಷಯೋ ಮಾಂತಾ .
ಸತ್ಪುತ್ರಾ . ದಿ ಕಳತ್ರೊಂ .
ತಲ್ಪಾ ಶೇ . ಲೆಯಿಪೋಸ್ಟ್ .
ನಿಲ್ಪೋವೋ . ಡೆನಪಾದೊಂ . ಟ್ಪವಿಜ್ಞಾನೋ ॥ (3-20-3)

11. ಕಲಹೋ ಕಂ . ಟಕೊಮಾಯಿೊ .
ಮಲಿನ್ಯಽಬು . ದ್ಧಿ ಹರೀತ್ .
ಫಲೊಮೆಣ್ಣಂ . ತೆಸಮಸ್ತ . ಕ್ರಿಯೆ ನೀ ವೆಂದ್ .
ಫಲವಾಶೀ . ತಭಿಮಾನೋ .
ಜಲಧೀಪಾ . ಯನೆ ಚಿತ್ತೊಂ .
ಟಲಸಂತೇ . ಸ್ಮರಿಪೀತಾ . ನಸ್ಟುವೇ ಭಕ್ತಿ ॥ (3-20-4)

12. ಎನನಾಮ . ಸ್ತುತಿ ಕೇಂಡಂ .
ಚೆನಕೀರ್ತಿ ಪುಗೞ್ಸ್ಟ್ .
ಎನನೀ ಧ್ಯಾ . ನಿತ್ಭಕ್ತೀ . ತ ವಶಿಯಾಸ್ಟ್ .
ಎನಭಕ್ತೇ . ರ್ಕುಳೆಟೊಡ್ .
ಎನಸಂಗೋ . ಪ್ರಿಟ್ಸಿತ್ತೊ .
ಮನಸಾವಾ . ಸ್ಮರಿಯೊಪೂ . ಟವುವೇ ಭಕ್ತಿ ॥ (3-20-5)

13. ಎನಭಕ್ತೀ . ದೃಢಿಯಾತ್ .
ಎನಪಾದಾ . ರ್ಚನೆ ವೆಂದ್ .
ಎನನೀಸಾ . ರಾಧಿತ್ . ಸರ್ವೊಂಟ್ಲ . ಚೂವಾಲೂ .
ತನತಂದೆ . ಸುತೆ ತನ್ನೇ .
ತನಬಂಧು . ಪ್ರಿಯೆರೆಯ್ಯಾ- .
ಲೆನ ಸಾಮ . ಥೊರ್ಕ್ಯಮತೆಂದೆ . ಣ್ಗ ಸರ್ವತ್ರೋ ॥ (3-20-6)

(ಈ ಪದ್ಯದ ಮೂರನೆಯು ಪಾದದಲ್ಲಿ ಕೊನೆಗೊಂದು ವಿಷ್ಣುಗಣವು "ವರಣ"ದ ರೀತಿಯಲ್ಲಿ ಬರುವುದೊಂದು ವಿಶೇಷತೆ. ಈ ಮುಂದಿನ 16ನೆಯು ಸಂಖ್ಯೆಯು ಷಟ್ಪದಿಯಲ್ಲಿಯೂ ಗಣವೊಂದು "ವರಣ"ದಂತೆ ಬಂದಿರುವುದು ತೋರುತ್ತದೆ.)

14. ಎನ ಭಕ್ತೀ . ಕುರ್ಗಳಿಟೂಡ್ಕ .
ಸ್ವಿನ ನಾಮೋ . ಸ್ತುತಿವೆಂದ್ .
ಎನ್ಕಾವ . ಓರ್ಗವೆಂದೀ . ಕ್ರಿಯೆನೀ ಮಾಂತಾ .
ಎನ ಮೂರ್ತೀ . ದೃಢೊಮಾಂತ್ .
ಎನ ಪಾ ರಾ . ಕ್ರವೊಕೇಂಡ್ .
ಮನಭಕ್ತೀ . ಪುಳಕೊಂಟ್ . ನನೆಯೋಡೆಂದೆರ್ । (3–20–7)

(ಈ ಪದ್ಯದಲ್ಲಿ ಹಿಂದಿನ 5ನೆಯು ಸಂಖ್ಯೆಯು ಪದ್ಯದಂತೆಯೇ ಕೊನೆಯು ರುದ್ರ ಗಣದ ಅಂತ್ಯದಲ್ಲಿರುವ "ನ್" ಎಂಬ ಅಕ್ಷರವನ್ನು ಬರಿಯು ವ್ಯಂಜನವಾಗಿ ಪರಿಗಣಿಸ ಬೇಕಾಗುತ್ತದೆ.)

15. ನಿಜಭಕ್ತಿ . ವೈರಾಗ್ಯೋ .
ಪ್ರಜೆಕಾನಂ . ದ ಪದಂಟ್
ವಿಜಯೋವಾ . ತಿಪ್ರಕಾರೋ . ಕರುಣೀಪೋಡು .
ಮಜೊಸ್ವತ್ತ್ . ಪೆ [ನ] ಚಿತ್ತೋ .
ಸುಜನಾವಂ . ದ್ಯಪದಾಬ್ಜಂ– .
ಕಜಪಂತೆ . ಶ್ರೀಪಿನ್ಪ್ಪೇ . ಕುಶಲೆಂಬಾಂದೆರ್ । (3–22–3)

(ಈ ಪದ್ಯದಲ್ಲಿ ಚೌಕಕಂಸದಲ್ಲಿ ಕೊಟ್ಟ [ನ] ಎಂಬುದರ ಸ್ಥಾನದಲ್ಲಿ ಮುದ್ರಿತ ಪುಸ್ತಕದಲ್ಲಿ "ನಾ" ಎಂಬ ಪಾಠವಿದೆ. ಆ ಪಾಠವನ್ನಿಟ್ಟುಕೊಂಡರೆ ಆ ಗಣವು ತ್ರಿಮೂರ್ತಿಗಣನಿಯಮಕ್ಕೆ ಹೊಂದಿಕೊಳ್ಳುವುದಿಲ್ಲ. ಪದ್ಯದ ಕೊನೆಯು ಗಣವು 14ನೇ ಪದ್ಯದ ಕೊನೆಯು ಗಣದಂತೆ.)

16. ದೇವೀ ಭಾ . ರತಿ ಗಂಗಾ .
ದೇವೀ ರು . ಗ್ಮಿಣಿ ಲಕ್ಷ್ಮೀ .
ದೇವೀ ಗೌರಿ [ೀ] ಶಚೀ . ಯಪ್ಸರಸಾ . ನಾರಿಕುಳೀನ್ .
ಭಾವೊಂಟಿ . ಶ್ರಸ್ಸ್ ವೆಂದೀ .
ಕಾಪಿಶ್ಯಾ . ತ್ರಟ ತತ್ವೋ .
ದೇವಾ ಹೂ . ತಿನ ಮೋಕ್ಷೋ . ರಚನೇ ಪಕ್ಷ । (3–24–1)

(ಪದ್ಯದ ಮೂರನೇ ಸಾಲಿನ "ಗೌರಿ" ಎಂಬ ಮುದ್ರಿತ ಪಾಠವನ್ನು "ಗೌರೀ" ಎಂದು ಪರಿಷ್ಕರಿಸಿಕೊಳ್ಳಲಾಗಿದೆ. ಈ ಪದ್ಯದಲ್ಲಿಯೂ ಒಂದು ಗಣವು ಮೂರನೆಯು ಪಾದದ ಕೊನೆಯಲ್ಲಿ ವರಣದ ರೂಪದಲ್ಲಿ ಬಂದಿರುತ್ತದೆ. ಇದು ರುದ್ರಗಣವಾಗಿದ್ದು ಇದರ ಅಂತ್ಯದಲ್ಲಿರುವ "ನ್" ಎಂಬ ಅಕ್ಷರವನ್ನು ವ್ಯಂಜನಮಾತ್ರವೆಂಬುದಾಗಿ

ಪರಿಗಣಿಸಬೇಕಾಗುತ್ತದೆ. ಕೊನೆಯ ಸಾಲಿನಲ್ಲಿ "ದೇವಾ ಹೂತಿನ ಮೋಕ್ಷೋ" ಎಂಬುದರ ಮುಂದೆ [ಲೆಭಿತೀ] ಎಂಬ ಸಂಪಾದಕರ ಪಾಠವು ಮುದ್ರಣಗೊಂಡಿದೆ. ಆದರೆ ಬ್ರಹ್ಮಗಣ ರೂಪದಲ್ಲಿರುವ ಈ ಸಂಪಾದಕೀಯ ಪಾಠವು ಛಂದಸ್ಸಿನ ದೃಷ್ಟಿಯಿಂದ ಅನಗತ್ಯವೇ ಆಗಿದೆ; ಅರ್ಥದ ದೃಷ್ಟಿಯಿಂದ ಸಂಪಾದಕರ ಆ ಅಧಿಕ ಪಾಠವಿಲ್ಲದೆಯೂ ಏನೂ ಭಂಗವಿಲ್ಲ. ಆದುದರಿಂದ ಆ ಸಂಪಾದಕರ ಅಧಿಕ ಪಾಠವನ್ನು ಇಲ್ಲಿ ಕೈಬಿಡಲಾಗಿದೆ.)

ಈ ಹದಿನಾರು ಪದ್ಯಗಳಲ್ಲಿ ಅಷ್ಟಿಷ್ಟು ಪಾಠದೋಷಗಳು ಇವೆಯಷ್ಟೇ ಹೊರತು ಇವೆಲ್ಲವೂ ಶುದ್ಧವಾದ ತ್ರಿಮೂರ್ತಿಗಣಬದ್ಧ ಷಟ್ಪದಿಗಳೇ ಆಗಿವೆ. ಎರಡು ಪದ್ಯಗಳಲ್ಲಿ "ವರಣ" ಬಂದಿರುವುದು ಬೇರೆಡೆಗಳಲ್ಲಿರದ ಒಂದು ವಿಶೇಷತೆಯೆಂದೂ ಗುರುತಿಸಬಹುದಾಗಿದೆ.

ಕನ್ನಡಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ತುಳುವಿನಲ್ಲಿ ಷಟ್ಪದಿಗಳಿರುವುದನ್ನು ಗಮನಿಸುವಂತೆಯೇ ತುಳುವಿನ ಈ ರಚನೆಗಳಿಗೂ ಕನ್ನಡ ರಚನೆಗಳಿಗೂ ಕಾಲಮಾನದಲ್ಲಿರುವ ಅಂತರವೂ ಗಮನಿಸತಕ್ಕುದಾಗಿದೆ. ತುಳು ಭಾಗವತದಲ್ಲಿ ವಿಷ್ಣುತುಂಗನು ಗ್ರಹಸ್ಥಿತಿಗಳ ವಿವರವಿರುವ ಒಂದು ಪದ್ಯವನ್ನು ಬರೆದಿದ್ದಾನೆ. ಇದು ವಿಷ್ಣುತುಂಗನ ಜಾತಕವೆಂದು ಕಾವ್ಯದ ಸಂಪಾದಕರಾದ ಶ್ರೀ ವೆಂಕಟರಾಜಪುಣಿಂಚತ್ತಾಯರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕವಿ ಕಾವ್ಯವನ್ನು ಬರೆಯಲು ತೊಡಗಿದ ಕಾಲವಿದೆಂದು ಅರ್ಥಮಾಡಿಕೊಳ್ಳಲು ಆ ಪದ್ಯದಲ್ಲಿ ಹೆಚ್ಚಿನ ಅವಕಾಶವಿದೆ. ಈ ಗ್ರಹಸ್ಥಿತಿ ಕ್ರಿ. ಶ. 1636ಕ್ಕೆ ಸರಿಹೋಗುವುದೆಂದು ಅವರು ತಿಳಿಸಿರುತ್ತಾರೆ.[12] ಷಟ್ಪದೀ ಛಂದಸ್ಸಿನ ಬಳಕೆಯ ಆಧಾರದಿಂದ ತುಳು ಭಾಗವತವು 17ನೆಯ ಶತಮಾನಕ್ಕಿಂತ ಹಿಂದಿನದಾಗಿರಬಹುದೆಂಬ ಊಹೆಯನ್ನು ಮಾಡಲು ಸಾಧ್ಯವೇ ಎಂಬ ಬಗ್ಗೆ ಯೋಚಿಸಬೇಕಾಗಿದೆ. ಭಾಗವತದಲ್ಲಿ ಹೇಳಲಾದ ಗ್ರಹಸ್ಥಿತಿಯು 266ರ ಗುಣಕಗಳಲ್ಲಿ 1636ಕ್ಕಿಂತ ಹಿಂದೆಯೂ ಬಂದಿರಲು ಸಾಧ್ಯವೆಂದು ಪುಣಿಂಚತ್ತಾಯರು ತಿಳಿಸಿರುತ್ತಾರೆ.[13] ತುಳು ಭಾಗವತದ ಪ್ರಸ್ತಾವನೆಯಲ್ಲಿ ಅವರು 1636 ಕವಿಯ ಜನ್ಮವರ್ಷವೆಂದು ಹೇಳಿದ್ದರೂ ಅದಕ್ಕಿಂತ 266 ವರ್ಷಗಳಷ್ಟಾದರೂ ಹಿಂದೆಯೇ ಅವನ ಕಾಲ ಆಗಿರಲು ಸಾಧ್ಯವೆಂಬ ಅಭಿಪ್ರಾಯವನ್ನು ಅವರು ಸಾಂದರ್ಭಿಕವಾಗಿ ಮಾತಾಡುತ್ತಾ ನನ್ನಲ್ಲಿ ಹೇಳಿದ್ದಿದೆ. ಆದುದರಿಂದಲೇ "ಕಾವೇರಿ"ಯ ಪೀಠಿಕೆಯಲ್ಲಿ "ವಿಷ್ಣುತುಂಗನ ಕಾಲವು ಕ್ರಿ. ಶ. 1636 ಎಂದು ನಿರ್ಧರಿಸುವುದಾದರೆ...." ಎಂಬ

---

[12] ಶ್ರೀ ಭಾಗವತೊ, ಪ್ರಸ್ತಾವನೆ. ಪು. 7–9.

[13] ಶ್ರೀ ಭಾಗವತೊ, ಪ್ರಸ್ತಾವನೆ. ಪು. 9.

ಸಂಶಯಾತ್ಮಕವಾದ ಮಾತುಗಳನ್ನು ಬರೆದಿದ್ದಾರೆ.[14] ಕುಮಾರವ್ಯಾಸನ ಹೆಸರನ್ನು ವಿಷ್ಣುತುಂಗ ಹೇಳಿದ್ದು, ಆತನ ಕಾಲ ಹಿಂದಕ್ಕೆ ಹೋಗುವುದಾದರೆ (ಹದಿನೈದನೆಯ ಶತಮಾನಕ್ಕಿಂತ ಹಿಂದೆ ಹೋಗುವುದಾದರೆ) ವಿಷ್ಣುತುಂಗನ ಕಾಲವೂ ಹಿಂದಕ್ಕೆ ಸರಿಯುವ ಸಾಧ್ಯತೆಗಳಿವೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಯು ಅಗತ್ಯವಿದೆ.

ಒಟ್ಟಿನಲ್ಲಿ ತುಳು ಭಾಗವತದಲ್ಲಿ ಕಂಡುಬರುವ ತ್ರಿಮೂರ್ತಿಗಣಬದ್ಧ ಷಟ್ಪದಿಗಳು ಕನ್ನಡ–ತುಳು ಎರಡೂ ಭಾಷೆಗಳ ವಿದ್ವಾಂಸರು ಗಮನಿಸಬೇಕಾದ ವಿಷಯವಾಗಿದೆ. ಕನ್ನಡಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ತುಳುವಿನಲ್ಲಿ ಷಟ್ಪದಿಗಳು ದೊರೆತಿರುವುದು ಕುತೂಹಲಜನಕ ವಿಚಾರವಾಗಿದ್ದು ಕನ್ನಡಿಗರು ಪ್ರಯೋಗಿಸಿದ ಷಟ್ಪದಿ ಛಂದಸ್ಸಿನ ಚರಿತ್ರೆಗೆ ಇದು ಸೇರತಕ್ಕ ವಿಚಾರವಾಗಿದೆ. (ವಿಷ್ಣುತುಂಗ ಕವಿ ಕನ್ನಡಿಗ. "ತುಂಗ" ಎಂಬ ಉಪನಾಮದ ಬ್ರಾಹ್ಮಣರು ಕನ್ನಡ ಮಾತೃಭಾಷೆಯಾಗುಳ್ಳವರು.) ಎರಡು ಷಟ್ಪದಿಗಳಲ್ಲಿ ಅವುಗಳ ಮೂರನೆಯ ಪಾದದ ಕೊನೆಗೆ ಒಂದು ಗಣವನ್ನು ಹೆಚ್ಚಾಗಿ "ವರಣ"ದ ರೂಪದಲ್ಲಿ ತಂದುದು ಈತನ ಸ್ವತಂತ್ರ ಪ್ರಯೋಗವಾಗಿದೆಯೆಂದು ಹೇಳಬಹುದು. (ಯಕ್ಷಗಾನದ "ಪದ"ಗಳಲ್ಲಿರುವ ವರಣಗಳು ಅವನಿಗೆ ಇದಕ್ಕೆ ಪ್ರೇರಣೆಯನ್ನು ಕೊಟ್ಟಿರಲೂ ಬಹುದು.) ಈ ಛಂದೋಬಂಧದ ಆಧಾರದಿಂದ ಭಾಗವತದ ಕಾಲದ ಬಗೆಗೆ ಏನಾದರೂ ಹೊಸವಿಚಾರ ಹೇಳಬಹುದೇ ಎಂಬ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ.[15]

---

[14] ಕಾವೇರಿ, ಪ್ರಸ್ತಾವನೆ, ಪು. 4. ಇದನ್ನು ಅವರು ಬರೆಯುವಾಗ ನಾನು ಅವರೊಂದಿಗೆ ಇದ್ದೆ. ತನ್ನ ಈ ಅಭಿಪ್ರಾಯವನ್ನು ಹೆಚ್ಚಿನ ಆಧಾರಗಳಿಲ್ಲದೆ ಖಚಿತವಾಗಿ ಹೇಳಲು ಕಷ್ಟವಾಗಿದೆಯೆಂದೂ ಅವರು ಹೇಳಿದ್ದರು. ಈ ಸಂದರ್ಭದಲ್ಲಿ ಕನ್ನಡ ತುಳು ವಿದ್ವಾಂಸರಾದ ಶ್ರೀ ಅಮೃತ ಸೋಮೇಶ್ವರರು ವ್ಯಕ್ತಪಡಿಸಿದ ಅಭಿಪ್ರಾಯವೊಂದನ್ನು ಇಲ್ಲಿ ಉದ್ಧರಿಸುವುದು ಅನುಚಿತವಾಗಲಾರದೆಂದುಕೊಂಡಿದ್ದೇನೆ. 'ಪ್ರಾಚೀನ ತುಳು ಸಾಹಿತ್ಯದ ಮಹತ್ವ' ಎಂಬ ನನ್ನದೊಂದು ಲೇಖನವನ್ನೋದಿ ಅವರು "ಪುಣಿಂಚತ್ತಾಯರು ಊಹಿಸದಂತೆ ವಿಷ್ಣುತುಂಗನ ಕಾಲ 266 ವರ್ಷ ಹಿಂದೆಯೇ ಆಗಿರಬೇಕೆಂದು ನನಗೆ ತೋರುತ್ತದೆ. 17ನೆಯ ಶತಮಾನದ ಭಾಷೆಯ ಸ್ಥಿತಿ ಹೀಗಿರಲಾರದೆಂದೇ (ಅದೊಂದು ವಿಶಿಷ್ಟ ಪ್ರಯೋಗಶೀಲ ಕೃತಿಯೆಂದಾದರೂ ಕೂಡಾ) ಕಾಣಿಸುತ್ತದೆ. ಇದರಲ್ಲಿನ ದ್ರಾವಿಡ ಪ್ರಾಗ್‌ರೂಪಗಳು ಇದನ್ನು ಪುಷ್ಟೀಕರಿಸುತ್ತವೆ."— ಎಂದು ನನಗೆ ಬರೆದ ತಾ. 25-9-1989ರ ಪತ್ರದಲ್ಲಿ ತಿಳಿಸಿರುತ್ತಾರೆ. ತುಳು ಭಾಗವತದ ಕಾಲದಲ್ಲಿ ಬೇರೆ ಯಾರೂ ಹೆಚ್ಚಿನ ಗಮನಹರಿಸಿದಂತೆ ತೋರುವುದಿಲ್ಲ.

[15] ಈ ಲೇಖನದ ಮುಖ್ಯಭಾಗವನ್ನು ನಾನು ಖ್ಯಾತ ವಿದ್ವಾಂಸರೂ ಛಂದಃಶಾಸ್ತ್ರಜ್ಞರೂ ಆದ ಶ್ರೀ ಸೇಡಿಯಾಪು ಕೃಷ್ಣಭಟ್ಟರಿಗೆ ಓದಿ ಹೇಳಿದಾಗ ಈ ಷಟ್ಪದಿಗಳು ಲಕ್ಷಣಶುದ್ಧವಾದ ಷಟ್ಪದಿಗಳೆಂದೂ, ವಿಷ್ಣುತುಂಗ ವಿವಿಧ ಛಂದೋಬಂಧಗಳನ್ನು ಪ್ರಯೋಗಿಸುವ ಕುತೂಹಲವುಳ್ಳವನೆಂಬುದರಲ್ಲಿ ಸಂದೇಹವಿಲ್ಲವೆಂದೂ ಕನ್ನಡದಲ್ಲೇ ಅತ್ಯಲ್ಪ ಪ್ರಮಾಣದಲ್ಲಿ ಬಳಕೆಯಲ್ಲಿರುವ ಷಟ್ಪದಿಯನ್ನು ಇವನು ತುಳುವಿನಲ್ಲಿ ಪ್ರಯೋಗಿಸಿದ್ದು ವಿಶೇಷವಾಗಿದೆಯೆಂದೂ ಅಭಿಪ್ರಾಯಪಟ್ಟಿದ್ದಾರೆ.

# ಜೋಡಿಪುರದ ಶಾಸನ ಮತ್ತು ಸುಗಟೂರು ವಂಶದ ಮೂಲಪುರುಷ

—ಪಿ. ವಿ. ಕೃಷ್ಣಮೂರ್ತಿ

ವಿಜಯನಗರ ಸಾಮ್ರಾಜ್ಯದ ಪ್ರಾರಂಭ ಕಾಲದಿಂದಲೂ ಅದರ ಸಾಮಂತರು ಅಮರನಾಯಕರು[1] ಮತ್ತು ಪಾಳೆಯಗಾರರೇ ಮುಂತಾದವರು ಪ್ರಬಲರಾಗತೊಡಗಿದ್ದರು. ಅದರಲ್ಲೂ ಆ ಸಾಮ್ರಾಜ್ಯದ ಉತ್ತರಾರ್ಧದ ಅವಧಿಯಲ್ಲಿ ಅವರು ಹೆಚ್ಚು ಹೆಚ್ಚು ಪ್ರಬಲರಾಗುತ್ತಾ ಬಂದುದಲ್ಲದೆ ಸಂದರ್ಭ ಸಿಕ್ಕಾಗಲೆಲ್ಲ, ಸಾಮ್ರಾಟರ ಉಲ್ಲೇಖವಿಲ್ಲದೆಯೂ ಶಾಸನಗಳೇ ಮುಂತಾದ ಹಕ್ಕುಪತ್ರಗಳನ್ನು ಜಾರಿಮಾಡುತ್ತಿದ್ದುದು ಸರ್ವಸಾಧಾರಣ ವಿಷಯವಾಗಿತ್ತು. ಇಂತಹವರಲ್ಲಿ ಇಂದಿನ ಕೋಲಾರ ಜಿಲ್ಲೆಯ ಪೂರ್ವಭಾಗ ಮತ್ತು ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪುಂಗಸೂರು ಪ್ರದೇಶಗಳನ್ನು ಆಳುತ್ತಿದ್ದ ಸುಗಟೂರು ಗೌಡ ವಂಶೀಯರು ಕೂಡ ಗಮನಾರ್ಹರು.

ಈ ಪಾಳೆಯಗಾರ ವಂಶದ ಸ್ಥಾಪಕನು ಇಂದಿನ ಕೋಲಾರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನ ಜಂಗಮಕೋಟೆ ಸಮೀಪದ ಸುಗಟೂರು ಸ್ಥಳದವನು. ಈತನು ಪ್ರಾಯಶಃ ತನ್ನ ಆಡಳಿತವನ್ನು ಈ ಊರಿನಿಂದ ಪ್ರಾರಂಭಿಸಿದ್ದಿರಬಹುದಾದ ಕಾರಣ ಇವರ ಎಲ್ಲ ಶಾಸನಗಳಲ್ಲೂ ತಮ್ಮ ಹೆಸರಿನೊಂದಿಗೆ ಈ ಊರಿನ ಉಲ್ಲೇಖ ತಪ್ಪದೆ ಬಂದಿರುತ್ತದೆ. ವಾಸ್ತವವಾಗಿ ಇವರು ತಮ್ಮ ಆಡಳಿತವನ್ನು ಯಾವ ಸ್ಥಳದಿಂದ ನಡೆಯಿಸಿದರು ಎಂಬ ವಿಷಯ ಅವರ ಯಾವೊಂದು ಶಾಸನದಲ್ಲೂ ಉಕ್ತವಾಗಿರುವುದಿಲ್ಲ. ಕೋಲಾರ, ಬಿಲಗೊಂಡನಹಳ್ಳಿ, ಬೇಟರಾಯನಗುಡಿ, ಜಂಗಮಕೋಟೆ, ಪುಂಗನೂರು ಮತ್ತು ಹೊಸಕೋಟೆ ಮೊದಲಾದವು ಅವರ ಕಾಲದ ಪ್ರಸಿದ್ಧ ದುರ್ಗಗಳಾಗಿದ್ದವು ಎಂಬುದಕ್ಕೆ ಆಧಾರಗಳಿವೆ.[2] ಇವುಗಳಲ್ಲಿ ಹೊಸಕೋಟೆಯು ಕ್ರಿ. ಶ.

---

[1] ವಿಜಯನಗರ ಕಾಲದಿಂದೀಚೆಗೆ ಕಂಡುಬರುವ 'ಅಮರನಾಯಕ' ಎಂಬ ಈ ಅಧಿಕಾರ ಸೂಚಕ ಪದದ ಅರ್ಥವನ್ನು "ಅಮರವಾಗಿ ಕೊಟ್ಟ ಗ್ರಾಮ ಅಥವಾ ಭೂಪ್ರದೇಶಗಳಿಗೆ ಒಡೆಯನಾಗಿರುವಿಕೆ" ಎಂದು ಮುಂತಾಗಿ ಕ.ಸಾ.ಪ. ನಿಘಂಟು ಅರ್ಥ ನೀಡುತ್ತದೆಯಾದರೂ,ಇದು ಮೂಲತಃ 'ಅಮಿರ್ರಾನ್ ಸದ್' ಎಂಬ ಪರ್ಷಿಯನ್ ಪದದ ತದ್ಭವ ರೂಪವಾಗಿದೆ. ನೂರು ಅಥವಾ ಅದಕ್ಕೂ ಹೆಚ್ಚಿನ ಸೈನ್ಯವನ್ನು ಹೊಂದಿದ್ದವನು ಈ ಅಧಿಕಾರವನ್ನು ಪಡೆದಿರುತ್ತಿದ್ದ ಎಂಬ ಈ ಅಂಶವನ್ನು ಮಾನ್ಯ ಶ್ರೀ ಸೀತಾರಾಮ ಜಾಗೀರದಾರರು ನನ್ನ ಗಮನಕ್ಕೆ ತಂದಿರುತ್ತಾರೆ.

[2] ಕರ್ಲಮಂಗಲಂ ಶ್ರೀಕಂಠಯ್ಯ — ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ ಭಾಗ ೧, ಪದ ೪, ಪುಟ-೭.

1494ರ ವೇಳೆಗಾಗಲೇ ಅವರಿಂದ ಹೊಸದಾಗಿ ನಿರ್ಮಿತವಾಗಿತ್ತು[3] ಕೋಲಾರ ಇವರ ಮೊದಲ ಮತ್ತು ಹಳೆಯ ಕೋಟೆಯಾಗಿದ್ದಿರಬಹುದು. ಕೋಲಾರದಿಂದ ಪಶ್ಚಿಮಕ್ಕೆ ಸುಮಾರು 40ಕಿ.ಮೀ. ಮತ್ತು ಬೆಂಗಳೂರಿನಿಂದ ಪೂರ್ವಕ್ಕೆ ಸುಮಾರು 26 ಕಿ. ಮೀ. ಅಂತರದಲ್ಲಿರುವ ಹೊಸಕೋಟೆ ಸ್ಥಳವು, ಇಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕೊಂದರ ಕೇಂದ್ರಸ್ಥಳವಾಗಿದೆ.

ಸುಗಟೂರು ವಂಶೀಯರಿಗೆ ಸೇರಿದ ಪ್ರಾರಂಭ ಕಾಲದ ಬಹಳಷ್ಟು ಶಾಸನಗಳು ಹೊಸಕೋಟೆಯ ಸುತ್ತಮುತ್ತಲ ಪ್ರದೇಶಕ್ಕೆ ಸೇರಿದವು ಆಗಿವೆ: ಆದ್ದರಿಂದ ಇವರು ಬಹುಮಟ್ಟಿಗೆ ಹೊಸಕೋಟೆಯನ್ನೇ ಪ್ರಧಾನ ಕೇಂದ್ರವಾಗಿಟ್ಟುಕೊಂಡು ಆಳಿದರೆಂದು ಹೇಳಬಹುದು.

ಈವರೆಗೂ ಈ ವಂಶೀಯರಿಗೆ ಸೇರಿದ ಸುಮಾರು 90 ಶಾಸನಗಳು ಎಪಿಗ್ರಾಫಿಯ ಕರ್ನಾಟಕದ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಸಂಪುಟಗಳಲ್ಲೂ ಅವುಗಳ ಪುರವಣಿ ಸಂಪುಟಗಳಲ್ಲೂ ಪ್ರಕಟವಾಗಿವೆ. ಅಲ್ಲದೆ, ಹಲವು ಶಾಸನಗಳು ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳಲ್ಲೂ ಭಾರತೀಯ ಪುರಾತತ್ವ ಇಲಾಖೆಯ ಶಾಸನಶಾಸ್ತ್ರ ಶಾಖೆಯ ವಾರ್ಷಿಕ ವರದಿಗಳಲ್ಲೂ ಸ್ಥಾನ ಪಡೆದಿವೆ.

ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಲಕ್ಕೂರು ಹೋಬಳಿಗೆ ಸೇರಿದ ಜೋಡಿಪುರ ಗ್ರಾಮದ ಶಾಸನವೊಂದನ್ನು ಪ್ರಸ್ತುತ ಪರಿಶೀಲಿಸಬೇಕಿದ್ದು, ಎಪಿಗ್ರಾಫಿಯ ಕರ್ನಾಟಕ ಸಂಪುಟ XVIIರಲ್ಲಿ ಪ್ರಕಟವಾಗಿರುವಂತೆ ಶಾಸನದ ಪಾಠ ಈ ರೀತಿ ಇದೆ :[4]

1 ಸ್ವಸ್ತಿ ಶ್ರೀ ವಿಜಯಾ . ದಯ ಸಲಿವ
2 ಹನ ಸಕ ವರುಷ ೧೩ಳಳ.....
3 . ಯ ಪರಿ ...... ೧೦ ಲು ಶ್ರೀಮನ್.
4 ಮ.ಡಳೇ ............ ಯಿ .... ಕ್ಷ
5 ಪಸತ ಸಿವರಾಯ ಮಹಾರಾಯರೂ ಪ್ರಿಶ್ವೀರಾಜ್ಯ ....
6 ರಲು ಸ ಗಟೂರ ತಂ ಮಪ್ಪ ಅಯ್ಯನವರು ತಂಮ
7 ತಂದೆ ದೇವಪ್ಪ ಗ . ಡ .... ವಾದ ........
8 . ಮವ ....................
9 ದಪ್ಪವೊಡೆಯರ ....................

[3] ಮೈಸೂರು ಪುರಾತತ್ವ ವಾರ್ಷಿಕ ವರದಿ–1919, ಪುಟ–39.

[4] ಎಪಿಗ್ರಾಫಿಯ ಕರ್ನಾಟಕ ಸಂ ೧೭ (ಕೋಲಾರ ಜಿಲ್ಲೆಯ ಪುರವಣಿ ಸಂಪುಟ) ಮಾಲೂರು, ೧೮೮, ಪುಟ 59, (ಸಂ. ಡಾ॥ ಎಂ ಶೇಷಾದ್ರಿ, 1965).

10 ದ ಒಡೆಯು ರಾದ ......................
11 ನಯು . ವನಸ ...... ................ .
12 .. ಯುವ ........................
13 ವರು ನಡೆಸಿ ಬರುವರು ............
14 ಪ ............ .......... ............
15 .... ಕೊಟ್ಟ ...........................
16 . ದ ದವರ್ಷ ............................

ಹೀಗೆ ಸಾಕಷ್ಟು ತ್ರುಟಿತ ರೂಪದಲ್ಲಿರುವ ಈ ಶಾಸನದ ಬಗ್ಗೆ ಕ್ರಿ.ಶ. 1914ರ ಮೈಸೂರು ಪುರಾತತ್ವ ಇಲಾಖೆಯ ವರದಿಯ ಪುಟ 49ರಲ್ಲಿ *"During the rule of Sadashivaraya, Thammappa Ayyanavaru, of Sugatur, made a grant to some Odeyar for the spiritual merit of his father, Devappa Gowda. The date of the record may be about 1560 AD"* ಎಂಬ ಸಾರಾಂಶ ರೂಪದ ವಿವರಣೆ ಪ್ರಕಟವಾಗಿದೆ.

ಇದೇ ವಾಕ್ಯಗಳನ್ನು ಕ್ರಿ. ಶ. 1965ರಲ್ಲಿ ಪ್ರಕಟವಾದ ಎಪಿಗ್ರಾಫಿಯ ಕರ್ನಾಟಕದ XVIIನೇ ಸಂಪುಟ, ಅಂದರೆ ಕೋಲಾರ ಜಿಲ್ಲೆಯ ಪುರವಣಿ ಸಂಪುಟ ದಲ್ಲಿ *"Brief summary of the contents of the Inscription in English"* ಎಂಬ ಶೀರ್ಷಿಕೆಯಡಿಯಲ್ಲೂ ಪುನರುದ್ಧರಣ ಮಾಡಲಾಗಿದೆ.[5]

ಪ್ರಸ್ತುತ ಶಾಸನದ ಈ ಕೆಲವು ಅಂಶಗಳು ಇಲ್ಲಿ ಗಮನಾರ್ಹವಾಗಿವೆ:

1. ಉಕ್ತವಾಗಿರುವ ಕಾಲ ಸ್ಪಷ್ಟವಾಗಿ ಶಕವರ್ಷ 1344ನೆಯ ಪರಿ (ಧಾವಿ) ಸಂವತ್ಸರ ಎಂಬುದು.
2. ರಾಜನ ಹೆಸರನ್ನು 'ಸಸತ ಸಿವ ರಾಯ' ಎಂದು ಉಲ್ಲೇಖಿಸಿರುವುದು.
3. ತಮ್ಮಪ್ಪ ಅಯ್ಯನವರ ತಂದೆಯವರ ಹೆಸರು ದೇವಪ್ಪಗೌಡನೆಂಬ ಸ್ಪಷ್ಟ ಉಲ್ಲೇಖ.

ಈ ಮೂರೂ ಅಂಶಗಳ ಹಿನ್ನೆಲೆಯಲ್ಲಿ, ಮೊದಲಿಗೆ ಶಾಸನದ ಕಾಲವನ್ನು ಪರಿಶೀಲಿಸಿದರೆ, ಅದು ಕ್ರಿ. ಶ. 1422ಕ್ಕೆ ಸರಿಹೊಂದುವ ಪರಿಧಾವಿ ಸಂವತ್ಸರಕ್ಕೆ ಹೊಂದಾಣಿಕೆಯಾಗುತ್ತದೆ. ಈ ಅಂಶವನ್ನು ಸ್ವಾಮಿ ಕಣ್ಣು ಪಿಳ್ಳೆಯವರ ಪಂಚಾಂಗವು ಕೂಡ ಅನುಮೋದಿಸುತ್ತದೆ.

ಎರಡನೆಯದಾಗಿ ಇಲ್ಲಿ ಉಕ್ತವಾಗಿರುವ ವಿಜಯನಗರದ ಅರಸನ ಹೆಸರು.

[5] ಅದೇ ಪುಟ-117.

ಶಾಸನವು ಸಾಕಷ್ಟು ತ್ರುಟಿತವಾಗಿರುವ ಕಾರಣದಿಂದಲೋ ಅಸಮರ್ಪಕ ಓದುವಿಕೆಯಿಂದಲೋ ಏನೋ, ರಾಜನ ಹೆಸರನ್ನು 'ಪಸತ ಸಿವರಾಯು' ಎಂದು ಓದಲಾಗಿದೆ. "ಸತ" ಎಂಬುದನ್ನು ಸದಾ ಎಂದೂ, "ಸಿವ" ಎಂಬುದನ್ನು ಶಿವ ಎಂಬುದಾಗಿಯೂ ಮನಗಂಡ ಈ ಶಾಸನದ ಸಂಪಾದಕರು, ಇದು ವಿಜಯನಗರದ ಸದಾಶಿವರಾಯನ ಕಾಲದ್ದೆಂದು ಗ್ರಹಿಸಿದ್ದರ ಕಾರಣ, ಶಾಸನದಲ್ಲಿ ಸ್ಪಷ್ಟವಾದ ಕಾಲದ ಉಲ್ಲೇಖವಿದ್ದರೂ, ಅದರ ಬಗ್ಗೆ ಸಂದೇಹಪಟ್ಟು, ಶಾಸನದ ಕಾಲವನ್ನು ಸುಮಾರು ಕ್ರಿ. ಶ. 1560 ಎಂದು ಊಹಿಸಿ ಕೊಟ್ಟಿರುತ್ತಾರೆ. ವಿಜಯನಗರದ ಅರಸರ ವಂಶವೃಕ್ಷದ ಹಿನ್ನೆಲೆಯಲ್ಲಿ ಈ ಅಂಶವನ್ನು ಪರಿಶೀಲಿಸಿದರೆ, ಶಾಸನದ ಈ ಭಾಗದ ಮೂಲಪಾಠ 'ಶ್ರೀಮತ್ ದೇವರಾಯ ಮಹಾರಾಯರು' ಎಂದು ಇದ್ದಿರ ಬೇಕೆಂಬುದು ದೃಢಪಡುತ್ತದೆ.

ಇನ್ನು ತಮ್ಮಪ್ಪಗೌಡನ ತಂದೆಯ ಹೆಸರು ದೇವಪ್ಪಗೌಡನೆಂಬುದು ಸ್ಪಷ್ಟ ವಾಗಿಯೇ ಇದೆ. ಆದರೆ ಈ ವಂಶೀಯರ ಬಗ್ಗೆ ಇದುವರೆಗೂ ಪ್ರಕಟವಾಗಿರುವ ಮಾಹಿತಿಗಳನ್ನು ಗಮನಿಸಿದರೆ, ಅವೆಲ್ಲವೂ ಈ ವಂಶೀಯರ ಪ್ರಾರಂಭವೂ ತಮ್ಮೇ ಗೌಡನೆಂಬುವನಿಂದ ಪ್ರಾರಂಭವಾಯಿತೆಂದು ತಿಳಿಸುತ್ತವೆಯಲ್ಲದೆ, ಆತನು ಆವತಿ ನಾಡ ಪ್ರಭು ರಣಭೈರೇಗೌಡನ ಸೋದರರಲ್ಲೊಬ್ಬನೆಂದು ವರ್ಣಿಸುತ್ತವೆ.[6] ವಾಸ್ತವ ವಾಗಿ ಈ ಅಂಶವನ್ನು ದೃಢಪಡಿಸುವ ಯಾವುದೇ ನಂಬಲರ್ಹವಾದ ದಾಖಲೆಯೂ ಲಭ್ಯವಿರುವುದಿಲ್ಲ. ಆದರೆ ಈ ಸುಗಟೂರು ವಂಶದ ಪ್ರಾರಂಭದ ದೊರೆ, ದೇವಯ್ಯ ಗೌಡನೆಂಬುದು ಮಾತ್ರ ಇದೇ ವಂಶೀಯರಲ್ಲಿ ಪ್ರಸಿದ್ಧನಾಗಿದ್ದ ಮುಮ್ಮಡಿ ತಮ್ಮೇ ಗೌಡನಿಂದ ಬರೆಯಲ್ಪಟ್ಟಿರುವ 'ಶಂಕರ ಸಂಹಿತೆ' ಎಂಬ ಕನ್ನಡ ಸಾಹಿತ್ಯ ಕೃತಿ ಯಿಂದ ದೃಢಪಡುತ್ತದೆ.[7]

"ಶಂಕರ ಸಂಹಿತೆ"ಯ ಪ್ರಕಾರ ಅವರ ವಂಶಾವಳಿ ಈ ರೀತಿ ಇದೆ :

ದೇವಯ್ಯ

ತಮ್ಮಪ್ಪ

---

6 (ಅ) ಕೆ. ನರಸಿಂಹಯ್ಯ — ಮಾಗಡಿ ಕೆಂಪೇಗೌಡ, ಪುಟ–72, (ದ್ವಿ.ಮು. 1924)
(ಆ) *Kolar District Gazetteer, Page. 59 (Ed. Abhishankar) 1968.*

7 ಆರ್. ನರಸಿಂಹಾಚಾರ್ಯ — ಕರ್ಣಾಟಕ ಕವಿ ಚರಿತೆ ಸಂಪುಟ–೨ ಪುಟ 417–19. 'ಶಂಕರ ಸಂಹಿತೆ' ಇನ್ನೂ ಅಪ್ರಕಟಿತವಿದ್ದು ಇದರ ಹಸ್ತಪ್ರತಿಗಳು ಮೈಸೂರು ವಿ.ವಿ.ಯ ಕನ್ನಡ ಅಧ್ಯಯನ ಸಂಸ್ಥೆ ಮತ್ತು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಹಸ್ತಪ್ರತಿ ಭಂಡಾರಗಳಲ್ಲಿವೆ ಎಂದೂ ಈ ಕೃತಿಯಲ್ಲಿ ಒಟ್ಟು ೯೭೦ ವಾರ್ಧಕ ಷಟ್ಪದಿ ಗಳಿವೆಯೆಂದು ತಿಳಿದುಬಂದಿದೆ.

ಚಿಕ್ಕರಾಯ ಚಿಕ್ಕತಮ್ಮೇಂದ್ರ[8]

ಇಮ್ಮಡಿ ತಮ್ಮ ಭೂಪಾಲ[9]

ಮುಮ್ಮಡಿ ತಮ್ಮ[10]

ಪ್ರಸ್ತುತ ಇಲ್ಲಿ ವಿವೇಚನೆಗೊಳಪಟ್ಟಿರುವ ಶಾಸನವು ಹಿರಿಯ ತಮ್ಮೇಗೌಡನಿಗೆ ಸೇರಿದ್ದು, ಈತನು ಕ್ರಿ. ಶ. 1422ರಿಂದ 1494ರ ವರೆಗೂ ಆಳಿದ ಬಗ್ಗೆ ಶಾಸನಗಳು ದಾಖಲೆ ಒದಗಿಸುತ್ತವೆ. ಈ ಶಾಸನದಲ್ಲಿ ತಮ್ಮೇಗೌಡನು ತನ್ನ ತಂದೆಯಾದ ದೇವಯ್ಯಗೌಡನಿಗೆ ಪುಣ್ಯವಾಗಲೆಂದು ದತ್ತಿ ಬಿಟ್ಟಿರುವ ಉಲ್ಲೇಖವಾಗಿದ್ದಿರಬಹುದಾದ್ದರಿಂದ ಈ ಶಾಸನದ ಕಾಲಕ್ಕಾಗಲೇ ದೇವಯ್ಯಗೌಡನು ಗತಿಸಿರಬೇಕು. ಅಂದರೆ ದೇವಯ್ಯಗೌಡನ ಕಾಲವನ್ನು ಸುಮಾರು ಕ್ರಿ. ಶ. 1400 ರಿಂದ 1421 ಎಂದು ಇಟ್ಟುಕೊಳ್ಳಬಹುದು. ಈ ಅವಧಿ, ವಿಜಯನಗರ ಸಾಮ್ರಾಟ ಇಮ್ಮಡಿ ಹರಿಹರನ (1377–1404) ಕೊನೆ ಕೊನೆಯ ವರ್ಷಗಳಿಂದ ಹಿಡಿದು ಇಮ್ಮಡಿ ಬುಕ್ಕ (1404–1406) ಮತ್ತು ಇಮ್ಮಡಿ ವಿರೂಪಾಕ್ಷ (1404–1406) ಮೊದಲನೆಯ ದೇವರಾಯ (1406–1422) ನ ಕಾಲದವರೆಗೂ ಒಳಗೊಂಡಿರುತ್ತದೆ.

---

[8] ಈತನ ಕಾಲದಲ್ಲಿ (ಕ್ರಿ. ಶ. 1496–1542) ಇವರ ಆಡಳಿತ ನಾಲ್ಕೂ ದಿಕ್ಕುಗಳಿಗೆ ವಿಸ್ತರಿಸಿತು. ವಿಜಯನಗರದ ಕರ್ನಾಟಕಾಧೀಶರನ್ನು ಮೆಚ್ಚಿಸಿ, ಗಂಡ ಪೆಂಡೇರವನ್ನು ಪಡೆದದ್ದಲ್ಲದೆ ಅವರಿಂದ "ಚಿಕ್ಕರಾಯ" ಎಂಬ ಬಿರುದನ್ನು ಪಡೆದಿದ್ದ.

[9] ಕ್ರಿ. ಶ. 1542ರಿಂದ 1605ರ ವರೆಗೆ ಆಳಿದ ಈತನು ಬಹಳ ಪರಾಕ್ರಮಿ. ಈತನಿಗೆ ತಿಮ್ಮಯ್ಯ, ಕೆಂಪಯ್ಯ ಆಯಮಗೌಡ ಮುಂತಾದ ಸೋದರ ಸಂಬಂಧಿಗಳಿದ್ದಂತೆ ತೋರುತ್ತದೆ.

[10] 'ಶಂಕರಸಂಹಿತೆ'ಯ ಕರ್ತೃವಾದ ಮುಮ್ಮಡಿ ತಮ್ಮೇಗೌಡನು (ಕ್ರಿ. ಶ. 1605–1669) ಕನ್ನಡದಲ್ಲಿ ಮಾತ್ರವಲ್ಲದೆ ತೆಲುಗಿನಲ್ಲಿ ರಾಜೇಂದ್ರಚೋಳ ಚರಿತ್ರೆ, ಕುಮಾರಾರ್ಜುನೀಯ ಎಂಬ ಕೃತಿಗಳನ್ನೂ ಸಂಸ್ಕೃತದಲ್ಲಿ ಕೌಮುದೀ ವ್ಯಾಖ್ಯಾನ, ರಸಿಕ ಮನೋರಂಜಿನಿ ಎಂಬ ಕೃತಿಗಳನ್ನು ರಚಿಸಿದ್ದನೆಂದು ತಿಳಿದುಬರುತ್ತದೆ. ಈತನ ಆಶ್ರಯದಲ್ಲೇ ಕನ್ನಡ ಕವಿ ಸಜ್ಜೆಯ ಸಿದ್ದಲಿಂಗದೇವನು ಮಳೆಯರಾಜ ಚರಿತ್ರೆಯನ್ನು ಬರೆದನು. ಹಾಗೇ ತೆಲುಗು ಕವಿ ಬದ್ದೆವೀಟಿ ದತ್ತಯನೆಂಬವನು 'ಗಣಿತ ದೀಪಿಕಾ' ಎಂಬ ಕೃತಿಯನ್ನು ರಚಿಸಿರುತ್ತಾನೆ.

ಈತನು ತನ್ನ ಆಡಳಿತದ ತರುಣದಲ್ಲೇ (ಕ್ರಿ. ಶ. 1608ರಿಂದ 1612ರ ವರೆಗೆ) ಆಯಮ ಗೌಡನೆಂಬುವನಿಂದ ಪದಚ್ಯುತನಾಗಿದ್ದನು. ಆಗ ಬೆಂಗಳೂರು ಇಮ್ಮಡಿ ಕೆಂಪೇಗೌಡನು ಇವನಿಗೆ ಪುನಃ ಸಂಸ್ಥಾನವನ್ನುಂಟುಮಾಡುವಲ್ಲಿ ನೆರವಾಗಿರುತ್ತಾನೆ (ಕೆಂಪೇಗೌಡ ಜಯ ಪ್ರಶಸ್ತಿ).

ಒಟ್ಟಾರೆ ಪ್ರಸ್ತುತ ಶಾಸನ ಮತ್ತು ಸಾಹಿತ್ಯ ಮೂಲಗಳ ಹಿನ್ನೆಲೆಯಲ್ಲಿ ಈ ವಂಶೀಯರಿಗೆ ಸಂಬಂಧಿಸಿದಂತೆ ಈ ಕೆಳಕಂಡ ತೀರ್ಮಾನಗಳನ್ನು ಪಟ್ಟಿ ಮಾಡ ಬಹುದು :

1. ಸುಗಟೂರು ವಂಶವನ್ನು ಪ್ರಾರಂಭಿಸಿದವನು ಪ್ರಸ್ತುತ ಶಾಸನ ಮತ್ತು ಸಾಹಿತ್ಯಕೃತಿಯಲ್ಲಿ ಉಕ್ತವಾಗಿರುವಂತೆ ದೇವಯ್ಯಗೌಡನೇ ಆಗಿರು ತ್ತಾನೆ.

2. ಸುಗಟೂರು ವಂಶಿಃಕರು ತಮ್ಮ ಆಡಳಿತವನ್ನು ಕ್ರಿ. ಶ. ಸುಮಾರು 15ನೇ ಶತಮಾನದ ಆದಿಭಾಗದಿಂದಲೇ ಆರಂಭಿಸಿಕೊಂಡಿದ್ದರು.

3. ಪ್ರಸ್ತುತ ವಿಶ್ಲೇಷಣೆಗೊಳಪಟ್ಟ ಶಾಸನದ ಕಾಲ ನಿರ್ವಿವಾದವಾಗಿ ಶಾಸನದಲ್ಲಿ ಉಕ್ತವಾಗಿರುವಂತೆಯೇ ಶಕ ವರ್ಷ 1344 ಆಗಿರುತ್ತದೆ. ಅಂದರೆ ಕ್ರಿ. ಶ. 1422. ಆದ್ದರಿಂದ ಈ ಶಾಸನದ ಸಂಪಾದಕರು ನೀಡಿರುವ ಕ್ರಿ. ಶ. ಸುಮಾರು 1560 ಎಂಬ ಕಾಲವು ತಪ್ಪುಗ್ರಹಿಕೆ ಯಿಂದ ಮೂಡಿಬಂದ ತೀರ್ಮಾನವಾಗಿರುತ್ತದೆ.

—o—

# ರಾಮಪಾಣಿವಾದ ಮತ್ತು ಅವನ ಪ್ರಾಕೃತಕಾವ್ಯಗಳು*

—ಡಾ|| ಆರ್. ಎಸ್. ಶಿವಗಣೇಶಮೂರ್ತಿ

ಪಾಣಿನಿಕಾಲದಿಂದ ಇಂದಿನವರೆಗೂ ಸಂಸ್ಕೃತ ಸಾಹಿತ್ಯದಲ್ಲಿ ಕೃಷಿ ನಡೆಯುತ್ತ ಬಂದಿದೆ. ನಾನಾ ಶಾಸ್ತ್ರಗ್ರಂಥಗಳು, ಕಾವ್ಯಕೃತಿಗಳು ರಚಿತವಾಗಿವೆ. ಸಂಸ್ಕೃತ ದೊಡನೆ ಪ್ರಾಕೃತವನ್ನು ರೂಢಿಸಿಕೊಂಡು ಬರಲಾಗಿದೆ. ಪ್ರಾಕೃತವನ್ನು ಬಾಹ್ಯ ವೆಂದು ಭಾವಿಸಿಲ್ಲ. ಸಂಸ್ಕೃತ ನಾಟಕಗಳನ್ನು ನೋಡಿದರೆ ಇದು ಮನವರಿಕೆಯಾಗು ತ್ತದೆ. ಈ ಎರಡು ಭಾಷೆಗಳು ಅಂದಿನಿಂದ ದಿನದಿನಕ್ಕೆ ಜನಸಾಮಾನ್ಯರ ನಿತ್ಯದ ಬಳಕೆಯ ಭಾಷೆಯಾಗುವುದು ಕಡಮೆಯಾಗಿ ಕೇವಲ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಉಳಿದು ಬಂದುವು. ಈ ಕಾರಣದಿಂದ ಈ ದಿನ ಈ ಭಾಷೆಯಲ್ಲಿ ಮಾತನಾಡಿದರೆ ಬಹುತೇಕ ಅದು ಗ್ರಂಥಭಾಷೆಯ ರೂಪದಲ್ಲಿರುತ್ತದೆ. ಸಂಸ್ಕೃತ ಭಾಷೆಯ ಕ್ಷೇತ್ರ ವಿಸ್ತಾರವಾಗಿರುವುದರಿಂದ ಹೆಚ್ಚಿನ ಕೃಷಿ ಆಗಿದೆಯಾಗಿ ಇದರಲ್ಲಿ ಇಂದೂ ಅಷ್ಟೊಂದು ಕೃತಕತೆ ಕಾಣುವುದಿಲ್ಲ. ಪ್ರಾಕೃತಭಾಷೆಯ ಕ್ಷೇತ್ರ ಬಹಳ ಸೀಮಿತವಾಗಿರುವುದ ರಿಂದ ಅದರಲ್ಲಿ ಈಗ ರಚಿಸಿದ ಕೃತಿಯಲ್ಲಿಯೂ ಕೃತಕತೆ ಕಾಣುತ್ತದೆ. ಇತಿಹಾಸ ದುದ್ದಕ್ಕೂ ಈ ಭಾಷೆಗಳಲ್ಲಿನ ಕೃಷಿಯು ಪ್ರಾದೇಶಿಕ ಭಾಷೆಗಳಿಗೆ ಯಾವ ರೀತಿ ಯಲ್ಲಿಯೂ ಅಡ್ಡಿ ಬರಲಿಲ್ಲ. ಅನೇಕ ಕವಿಗಳು ಇವೆರಡೂ ಸ್ರೋತಗಳಲ್ಲಿ ಯಾನ ಮಾಡಬಲ್ಲ ಉಭಯಭಾಷಾ ವಿಶಾರದರಾಗಿದ್ದರು. ಈಚಿನ ಅಂಥ ಉಭಯಭಾಷಾ ಕವಿಗಳಲ್ಲಿ ರಾಮಪಾಣಿವಾದನೂ ಒಬ್ಬ.

ರಾಮಪಾಣಿವಾದ ಈಚಿನ ಅಂದರೆ 18ನೇ ಶತಮಾನದ ಕೇರಳೀಯ ಕವಿ. ಈತ 1707ರಲ್ಲಿ ಕೊಚ್ಚಿನ್ ಬಳಿಯಿರುವ ಕಿಲ್ಲಿಕುರಿಶಿಮಂಗಳಂನಲ್ಲಿ ಜನ್ಮತಾಳಿದನು. "ರಾಮ" ಅವನ ಹೆಸರು. ಪಾಣಿವಾದ ಅಥವಾ ಪಾಣಿಘ ಅವನ ಮನೆತನದ ಹೆಸರು. ಕೇರಳದ ಚಾಕ್ಯಾರ್‌ಗಳು ಸಂಸ್ಕೃತ ನಾಟಕಗಳನ್ನು ವಂಶಪಾರಂಪರ್ಯವಾಗಿ ಪ್ರದರ್ಶಿಸುವವರು. ಅಂಬಲವಾಸಿ ಜನತೆಯ ಒಂದು ಶಾಖೆಯಾದ ನಂಬಿಯಾರ್ ಗಳು ಈ ಪ್ರದರ್ಶನಗಳಲ್ಲಿ ನಾನಾರೀತಿಯ ಸಹಕಾರ ನೀಡುತ್ತಾರೆ. ಅವರ ಹೆಂಗಸರು ಹೆಣ್ಣು ಪಾತ್ರಗಳನ್ನು ವಹಿಸುತ್ತಾರೆ. ಕೆಲವರು ಮೃದಂಗ ಅಥವಾ ಮುರಜ ನುಡಿಸುತ್ತಿದ್ದರು. ಇವರು ಮಿಳ್ವವುಗಳು ಅಥವಾ ಸಂಸ್ಕೃತದಲ್ಲಿ ಪಾಣಿವಾದ್ಯ, ಪಾಣಿವಾದ ಎನಿಸಿಕೊಂಡರು.

---

* ಮೈಸೂರು ವಿಶ್ವವಿದ್ಯಾನಿಲಯದ ಜೈನಾಲಜಿ ಮತ್ತು ಪ್ರಾಕೃತ ಅಧ್ಯಯನ ವಿಭಾಗವು ದಿನಾಂಕ 16-3-1988ರಲ್ಲಿ ಏರ್ಪಡಿಸಿದ್ದ "ಪಾಕೃತಕಾವ್ಯಗಳು" ಎಂಬ ಶ್ರೀ ಹೊಂಬುಜ ಜೈನಮಠದತ್ತಿ ವಿಚಾರ-ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

ರಾಮುನ ತಂದೆ ತಾಯಿಯುವರ ಹೆಸರು ತಿಳಿದಿಲ್ಲ. ಆದರೆ ಅವನ ತಂದೆ ಕವನೂರನಲ್ಲೂರಿನ ನಂಬೂದಿರಿ ಬ್ರಾಹ್ಮಣ. ಕಿಲ್ಲಿಕುರಿಶಿಮಂಗಳಂನಲ್ಲಿದ್ದ ಪ್ರಸಿದ್ಧ ಶಿವಾಲಯದಲ್ಲಿ ಅರ್ಚಕನಾಗಿದ್ದ ಎಂದಷ್ಟು ಹೇಳಬಹುದು. ಅವನ ಸೋದರ ಮಾವನ ಹೆಸರು ರಾಘವ ಎಂದು ತಿಳಿದುಬರುತ್ತದೆ. (ಅಸ್ಮ ಮಂಗಲ-ಗ್ರಾಮ - ವಾಸ್ತವ್ಯಸ ರಾಘವ-ಪಾಣಿಘಸ್ಯ ಭಾಗಿನೇಯೋ ರಾಮೋನಾಮ ಪಾಣಿವಾದಃ", ('ಲೀಲಾವತೀ ವೀಥೀ' ಪ್ರ.) ತಂದೆಯ ಬಳಿ ಪ್ರಾರಂಭಿಕ ವಿದ್ಯಾಭ್ಯಾಸದ ಅನಂತರ ನಾರಾಯಣಭಟ್ಟಪಾದರಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ತೊಡಗಿದ ನೆನ್ನಬಹುದು. ನಾರಾಯಣಭಟ್ಟ ರಾಮನ ಹುಟ್ಟೂರಿನಿಂದ ಸುಮಾರು 10 ಕಿಲೋಮೀಟರ್ ದೂರದಲ್ಲಿರುವ ತ್ರಿಕ್ಕರಿಮುನ್ ಇಲ್ಲಂನಲ್ಲಿದ್ದನು. ಮತ್ತೆ ಕಿಲ್ಲಿಕುರಿಶಿಮಂಗಳಂ ಶಿವಾಲಯದಲ್ಲಿ ತಂತ್ರಿಯೂ ಆಗಿದ್ದನೆಂದು ಗ್ರಹಿಸಬಹುದು. ಈತ ದೊಡ್ಡ ವಿದ್ವಾಂಸನಾಗಿದ್ದಿರಬೇಕು. "ಧಾತುಕಾವ್ಯ"ವೆಂಬೊಂದು ಇವನ ಕೃತಿಯು ಉಪಲಬ್ಧವಾಗಿದೆ. ಇದು ಮೂರು ಸರ್ಗಗಳ ಕಾವ್ಯ, ವ್ಯಾಕರಣಶಾಸ್ತ್ರವನ್ನು ತಿಳಿಯಹೇಳುತ್ತದೆ ಇದರಲ್ಲಿ ಕಂಸವಧೆಯ ಕಥೆಯನ್ನು ವರ್ಣಿಸಲಾಗಿದೆ. ರಾಮ ತನ್ನ ಗುರುವಿನ ಬಗ್ಗೆ ಭಕ್ತಿಪೂರ್ವಕವಾದ ಹೊಗಳಿಕೆ ಮಾತುಗಳನ್ನು ಆಡಿದ್ದಾನೆ:

"ಶ್ರೀ ನಾರಾಯಣಭಟ್ಟಪಾದ-ಕರುಣಾಪೀಯೂಷ-ಗಂಡೂಷಣಾತ್
ಇಷ್ಟಾಂ ಪುಷ್ಟಿಮುಪೈತಿ ಯಸ್ಯ....ಕಲ್ಪದ್ರು ಬೀಜಾಂಕುರಂ।"

('ಸೀತಾರಾಘವ ಪ್ರಹಸನ', ಪ್ರ.)

"ಕರೋತು ನಾರಾಯಣಭಟ್ಟದೇಶಿಕ ಪ್ರಸಾದ-ನಿರ್ದೋಷತುಷಾರ ದೀಧಿತಿಃ।
ಮದಂತರಿಂದೂಪಲ-ಮುಕ್ತ ಮಾಧುರೀ-ಝರೀ-ಪರಿಷ್ಯಂದಿ ತಯಾತಿ
ಸುಂದರಮ್ ॥"

('ವಿಷ್ಣುವಿಲಾಸ ಕಾವ್ಯ')

"ಶ್ರೀ ನಾರಾಯಣಭಟ್ಟಪಾದ-ಗುರುಪಾದಾನಾಂ ಪ್ರಸಾದೋದಯಾ
ದಾ ನಂದಾಯ ಸತಾಂ ಮುಕುಂದಶತಕಂ ರಾಮೇಣ ಯನ್ನಿರ್ಮಿತಂ।"

('ಮುಕುಂದ ಶತಕ')

"ಇಹಖಲು ಸಕಲ-ವಿದ್ವಜ್ಜನ-ಮೌಲಿ-ಮಾಣಿಕ್ಯಭೂತ-ಶ್ರೀನಾರಾಯಣ-ಭಟ್ಟಪಾದ-ಪಾದಾರವಿಂದಯುಗಲ-ಪಾಂಸು-ಪಟಲೀ - ಪರಿಮೃಜ್ಯಮಾನ-ಮತಿಮಯ-ಮಣಿ-ದರ್ಪಣ - ಪ್ರತಿಬಿಂಬಿತಾಶೇಷಾಗಮ - ನಿಗಮಸಾರ್ಥ-ಪರಮಾರ್ಥ ಸಾರ: ಮಾರ್ದಂಗಿಕ ವಂಶೀಮುಕ್ತಾಮಣಿಃ ರಾಮ-ನಾಮಾಕವಿಃ"

(ರಾಮನ ಸಹಪಾಠಿಯೊಬ್ಬ ರಚಿಸಿದ 'ಮುಕುಂದಶತಕ ವ್ಯಾಖ್ಯೆ')

ರಾಮನ ಪತ್ನೀಪುತ್ರಾದಿಗಳ ಬಗ್ಗೆ ಎಲ್ಲಿಯೂ ಉಲ್ಲೇಖವಿಲ್ಲ.

ವಿದ್ಯಾಭ್ಯಾಸದ ಅನಂತರ ಸಂಚಾರಶೀಲನಾಗಿದ್ದು ಅನೇಕ ದೊರೆಗಳ ಆಶ್ರಯ ವನ್ನು ಪಡೆದ. ಇದು ಅವನ ಗ್ರಂಥರಚನಾ ಚಟುವಟಿಕೆಗೆ ಯಾವ ತೊಡಕನ್ನೂ ಒಡ್ಡಲಿಲ್ಲ. ಅವನ ಸಾರಸ್ವತ ಸೇವೆ ನಿರಂತರವಾಗಿ ಸಾಗಿತ್ತು.

ಕೇರಳದ ಉತ್ತರಭಾಗದಲ್ಲಿ ಆಳುತ್ತಿದ್ದ ಕೋಲಟಗಿರಿ ರಾಜನ ಆಶ್ರಯುವನು ಕೋರಿದ. ಆದರೆ ಆ ದೊರೆ ಯುದ್ಧದಲ್ಲಿ ತೊಡಗಿದ್ದನಾದ್ದರಿಂದ ರಾಮನ ಕಡೆ ಗಮನವೀಯಲಿಲ್ಲ. ಅದಕ್ಕೆ ಬೇಸರಿಸಿ "ಕೋಲಭೂಪಸ್ಯ ನಗರೇ ವಾಸರಾ ಹರಿ-ವಾಸರಾಃ । ಮಪಕ್ಷೈಃ ಮತ್ಕುಕ್ಷ್ಯೈಶ್ಚಾಪಿ ರಾತ್ರಯಃ ಶಿವರಾತ್ರಯಃ ॥" ಎಂದು ಹೊರಬಂದ.

ವೆಟ್ಟತ್ತುನಾಡು ವೀರರಾಯನ ಆಶ್ರಯದಲ್ಲಿ ಕೆಲಕಾಲವಿದ್ದ. ಇದು ಅವನ "ಚಂದ್ರಿಕಾ" ವೀಥೀಯಿಂದ ತಿಳಿಯುತ್ತದೆ.

"ಪ್ರಕಾಶರಾಜ್ಯ-ಪ್ರಕಾಶಭೂತಸ್ಯ ಪ್ರತಾಪ-ವಿವೇಕ-ವಿದ್ಯಾ-ವಿಶೇಷಶಾಲಿನಃ ಶ್ರೀ ವೀರರಾಯ-ಮಹಾರಾಜಸ್ಯಾಜ್ಞಯಾ ಶ್ರೀ ಪರಕ್ರೋಡ (ತ್ರಿಪರಂಗೋಡೆ) ನಾಮಕ್ಷೇತ್ರಂ ಅಧಿವಸತಃ....ಶ್ರೀಪರಮೇಶ್ವರಸ್ಯ....ಉತ್ಸವ....ಪ್ರಸಂಗೇನ ಸಂಗ-ತಾಯಾಂ ಅಸ್ಯಾಂ ಪರಿಷದಿ...."

ಮುರಿಯನಾಟ್ಟು ನಂಬಿಯಾರ್-ಆರ್ಯ ಶ್ರೀಕಂಠರಾಮವರ್ಮ ಎಂಬ ಮುಕುಂದಪುರ (ಇರಿಂಜಲ ಕುಡ)ದ ದೊರೆಯ ಆಶ್ರಯದಲ್ಲಿ ಕೆಲವೊಂದು ಸ್ತೋತ್ರ ಗಳನ್ನು ರಚಿಸಿದ್ದು ಕಂಡು ಬರುತ್ತದೆ. "ನತ್ವಾ ಮುಕುಂದಪುರನಾಥಮಶೇಷ ನಾಥಂ....॥ ಗೋವಿಂದಸ್ಯ ಮುಕುಂದ-ಮಂದಿರಪತೇಃ ಶ್ರೀಪಾದ-ಸಂಸೇವಿನಃ ಸ್ತೋತ್ರಂ ತತ್ಖಲು ರಾಮವರ್ಮ ನೃಪತೇಃ ಭೋಭೂಯತಾಂ ಭೂತಯೇ ॥"

('ಮುಕುಂದ ಶತಕ')

ಮಲೆಯಾಳಂ ಭಾಷೆಯ "ಶಿವಪುರಾಣ"ದಲ್ಲಿ ಪಾನಕೊಟ್ಟು, ಆಚಾನ್‌ನ ಹೆಸರು ಉಲ್ಲಿಖಿತವಾಗಿದೆ. ಈತ 1735ರಲ್ಲಿ ತೀರಿಕೊಂಡಾಗ ಅವನ ಉತ್ತರಾಧಿ ಕಾರಿಗಳೂ ಯಾರೂ ಇಲ್ಲದೆ ಅವನೆಲ್ಲ ಆಸ್ತಿ ಕೊಚಿನ್ ದೇಶಗಳ ಪಾರಂಪರಿಕ ಮಂತ್ರಿ ಗಳಾದ ಪಾಲಿಯಾಟ್ಟು ಆಚಾನ್‌ಗಳಿಗೆ ಸೇರಿತು. ರಾಮನೂ ಅವರ ಆಶ್ರಯಕ್ಕೆ ಸೇರಿದ. ಇವರು ಜಯಂತಮಂಗಲ ಅಥವಾ ಚೆನ್ನಮಂಗಲಂನಲ್ಲಿದ್ದರು. ಪಾಲಿ ಯಾಟ್ಟು ಮುಖ್ಯನಾದ ರಾಮಕುಬೇರನ ಇಷ್ಟದಂತೆ "ವಿಷ್ಣುವಿಲಾಸ"ವನ್ನು ಬರೆ ದನು. ("ಶ್ರೀಮದ್ರಾಮ ಕುಬೇರನಾಮ-ಸುಪತಿ-ಶ್ರೀಪಾಲಿಯ-ಶ್ರೀಪತಿಪ್ರೀತಿ-ಸ್ಫೀತತಮೋದ್ಯ-ಮೇನಕಲಿತಂ ಕೇನಾಪಿ ನಾನಾರಸಂ । ಪೂರ್ಣಂ ಹಂತ ಜಯಂತ-ಮಂಗಲ-ಮಹಾವಿಷ್ಣೋಃ ಕೃಪಾನುಗ್ರಹಾತ್ ।....")

ಕೆಲಕಾಲದ ಅನಂತರ ಕುಮಾರನಲ್ಲೂರಿನ ಬಳಿ ಬಂದಿದ್ದನು. ಅಲ್ಲಿ ಕೂಟ ಮಾಲೂರು ಮಠದ ತಿಕ್ಕೊಟಿತು ಭಟ್ಟಾತಿರಿ ಅವರ ಪರಿಚಯವಾಯಿತು. ಅವರ ಮೂಲಕ ಅಂಬಲಪುಳ್ಳು ಅಥವಾ ಚಂಪಕಶ್ಶೇರಿಯ ನಂಬೂದಿರಿ ದೊರೆ ದೇವನಾರಾಯಣನ ಭೇಟಿಯಾಯಿತು. ಕವಿಗಳಿಗೆ ಉದಾರ ಪೋಷಕನಾಗಿದ್ದ ಈ ದೊರೆಯ ಆಶ್ರಯದಲ್ಲಿ "ರಾಘವೀಯ" ಎಂಬ ಮಹಾಕೃತಿ ಮೊದಲಾದುವನ್ನು ರಚಿಸಿದನು. ("ಪುರಾಣ–ಮಹೀಸುರ–ವರಿಷ್ಠಸ್ಯ ಪ್ರಿಯಮಿತ್ರಮಿತಿ ಶ್ರೂಯತೇ।" "ನಿತ್ಯಂ ನೃತ್ಯತಿ ಯಸ್ಯ ನಾಮ ರಸನಾ ರಂಗೇ ಸ್ವಯಂ ಭಾರತೀ। ಚಿತ್ತೇ ಯಸ್ಯ ಚ ಭಾಸತೇ ಸುರಧುನೀ (ಅಂಬಲಪುಳ್ಳು) ನಾಥೋ ರಥಾಂಗಾಯುಧಃ॥ ಯಂ ಭೂಯೋ ಬಹುಮನ್ಯತೇ ನರಪತಿಃ ಶ್ರೀ ದೇವನಾರಾಯಣಃ। ಸೋಽಯಂ ಮೇ ಹೃದಯೇ ಚಕಾಸ್ತು ಸತತಂ ಭೂದೇವ–ಚೂಡಾಮಣಿಃ।" ("ಲೀಲಾವತೀ ವೀಥೀ").

ತ್ರಾವಣಕೂರಿನ (ತ್ರಿವೇಂದ್ರಂನ) ವೀರಮಾರ್ತಂಡವರ್ಮನು ಚಂಪಕಶ್ಶೇರಿಯನ್ನು ಗೆದ್ದುಕೊಂಡ ಮೇಲೆ ರಾಮನೂ ಅವನ ಆಶ್ರಯಕ್ಕೆ ಸೇರಿದ (ಸುಮಾರು 1755–56) ("ವೈಕುಂಠತೋಽಪ್ಯತಿಶಯರಮಣೀಯತತ್ತನ್ನವ್ಯದ್ರವ್ಯ ಸಂಪೂರಿತ–ಶ್ರಾವ್ಯನಂದೂರ–ಮಂದಿರೇಣ.... ಇದಾನೀಂತನೇನ ರಾಜ್ಞಾ ವಂಚಿ ಮಾರ್ತಂಡೇನ।" ("ಸೀತಾರಾಘವ ಪ್ರಹಸನ," ಪ್ರ.) ಮಾರ್ತಂಡವರ್ಮನ ಅನಂತರ ಅಧಿಕಾರಕ್ಕೆ ಬಂದ ಕಾರ್ತಿಕತಿರುನಾಳ್ ಮಹಾರಾಜನೂ ವಿದ್ವತ್ಪಕ್ಷಪಾತಿಯಾಗಿದ್ದ. ಇವನಿಂದಲೂ ಸಹ ರಾಮ ಗೌರವಿತನಾದ. ಕೊನೆಗೆ ರಾಮಪಾಣಿವಾದನು ಅಂಬಲಪುಳ್ಳುದಲ್ಲಿ ದೇಹತ್ಯಾಗ ಮಾಡಿದನು. ಬಹುಶಃ ಇದು 1775ರಲ್ಲಿರಬಹುದು.

ಕೃತಿಗಳು :—ರಾಮಪಾಣಿವಾದ ಸಂಸ್ಕೃತ–ಪ್ರಾಕೃತ–ಮಲೆಯಾಳಂ ಈ ಮೂರೂ ಭಾಷೆಗಳಲ್ಲಿ ಕೃತಿಗಳನ್ನು ರಚನೆ ಮಾಡಿದ್ದಾನೆ. ಸಂಸ್ಕೃತದಲ್ಲಿ ಇವನ ರಚನೆಗಳು : ಪದ್ಯಕಾವ್ಯಗಳು ಎರಡು ; ಚಂಪೂ ಒಂದು ; ನಾಲ್ಕು ರೂಪಕಗಳು (ಇದರಲ್ಲಿ 2 ವೀಥೀಗಳು, 1 ಪ್ರಹಸನ, 1 ನಾಟಕ), ಐದು ಸ್ತೋತ್ರಗಳು—ಒಟ್ಟು 12 ಕಾವ್ಯಗಳು. ವ್ಯಾಖ್ಯಾನಗಳು : ತನ್ನೆರಡು ಕಾವ್ಯಗಳ ಮೇಲೆ, ತನ್ನ ಗುರು ನಾರಾಯಣಭಟ್ಟರ "ಧಾತುಕಾವ್ಯ"ದ ಮೇಲೆ ಸುಕುಮಾರನ "ಶ್ರೀಕೃಷ್ಣವಿಲಾಸ"ದ ಮೇಲೆ–ಒಟ್ಟು ನಾಲ್ಕು ಶಾಸ್ತ್ರ ಗ್ರಂಥಗಳು–ಛಂದಶ್ಶಾಸ್ತ್ರದಲ್ಲಿ "ವೃತ್ತವಾರ್ತಿಕ" ಮತ್ತು "ರಾಸಕ್ರೀಡಾ"; ಸಂಗೀತದಲ್ಲಿ "ತಾಲಪ್ರಸ್ತಾರ"; ಪ್ರಾಕೃತ ವ್ಯಾಕರಣದಲ್ಲಿ "ಪ್ರಾಕೃತಪ್ರಕಾಶ"ದ ವ್ಯಾಖ್ಯೆ, "ಪ್ರಾಕೃತವೃತ್ತಿ"; ಈ ರೀತಿ ಒಟ್ಟು 20 ಸಂಸ್ಕೃತ ಗ್ರಂಥಗಳು. ಮಲೆಯಾಳಂನಲ್ಲಿ ಹಲವಾರು ಕೃತಿಗಳಿವೆ. ಪ್ರಾಕೃತದಲ್ಲಿ ಎರಡು ಕಾವ್ಯಗಳು. ಹೀಗೆ ರಾಮಪಾಣಿವಾದ 18ನೇ ಶತಕದ ಕೇರಳದಲ್ಲಿ ಬಹುಗ್ರಂಥಗಳ ರಚನೆ ಮಾಡಿದವನಾಗಿದ್ದಾನೆ.

## ಪ್ರಾಕೃತ ಕಾವ್ಯಗಳು

ರಾಮಪಾಣಿವಾದ ಪ್ರಾಕೃತದಲ್ಲಿ ರಚಿಸಿದ ಎರಡು ಕಾವ್ಯಗಳು: ಕಂಸವಹೋ[1] ಮತ್ತು ಉಸಾನಿರುದ್ಧಂ[2].

ಕಂಸವಹೋ :— ನಾಲ್ಕು ಸರ್ಗಗಳ ಈ ಕಾವ್ಯದಲ್ಲಿ ಹೆಸರಿನಿಂದಲೇ ತಿಳಿಯು ವಂತೆ ಪ್ರಧಾನವಾಗಿ ಕೃಷ್ಣನು ನಡೆಸಿದ ಕಂಸನ ವಧೆಯನ್ನು ವರ್ಣಿಸಲಾಗಿದೆ. ಪ್ರಾಸಂಗಿಕವಾಗಿ ಕೃಷ್ಣನ ಬಾಲಲೀಲೆಗಳೂ ವರ್ಣಿತವಾಗಿವೆ. ಒಟ್ಟು 232 ಪದ್ಯ ಗಳಿವೆ.

ಮಧುರೆಯಲ್ಲಿ ನಡೆಯುವ ಧನುರ್ಯಜ್ಞಕ್ಕೆ ಕೃಷ್ಣಬಲರಾಮರಿಗೆ ಕಂಸನ ಆಹ್ವಾನವನ್ನು ತಂದ ಅಕ್ರೂರನು ಗೋಕುಲಕ್ಕೆ ಬರುತ್ತಾನೆ, ಎಂಬುದರಿಂದ ಪ್ರಾರಂಭವಾಗುತ್ತದೆ ಈ ಕಾವ್ಯ. ಕಂಸನ ಆಹ್ವಾನವಿತ್ತು, ಕಂಸನ ದುರ್ವರ್ತನೆ ಯನ್ನು ತಿಳಿಸಿ ಅವನನ್ನು ನಿಗ್ರಹಿಸುವಂತೆ ಅಕ್ರೂರ ಪ್ರಾರ್ಥಿಸುತ್ತಾನೆ. ಪ್ರಕೃತ ಆಹ್ವಾನವೂ ಛಲದಿಂದ ಕೂಡಿರಬಹುದೆನ್ನುತ್ತಾನೆ. ಅದನ್ನು ಕೇಳಿದ ಬಲರಾಮ ಮಧುರೆಗೆ ಹೋಗಲು ಸಮ್ಮತಿಸಲಿಲ್ಲ ; ಅನಂತರ ಕೃಷ್ಣನ ಒತ್ತಾಯದಿಂದ ಒಪ್ಪಿ ಕೊಂಡ ; ಮೂವರೂ ಮಧುರೆಗೆ ಹೊರಡುತ್ತಾರೆ. ಆಗ ಕೃಷ್ಣನ ವಿರಹಕ್ಕೆ ಗೋಪ ಸ್ತ್ರೀಯರು ವಿಲಾಪಿಸುತ್ತಾರೆ ; ತಾವು ಕೃಷ್ಣನೊಡನೆ ಕ್ರೀಡಿಸಿದ ಸನ್ನಿವೇಶಗಳನ್ನು ನೆನೆಸಿಕೊಳ್ಳುತ್ತಾರೆ. ಇಲ್ಲಿಯವರೆಗೆ ಮೊದಲ ಸರ್ಗ. ಮಧುರಾ ಪ್ರವೇಶ ಮಾಡು ತ್ತಿದ್ದಂತೆ ಅಗಸನ ಹಾಗೂ ಕುಬ್ಜೆಯ ಪ್ರಸಂಗಗಳನ್ನು ವರ್ಣಿಸಿ ಕೋದಂಡಶಾಲೆ ಯಲ್ಲಿ ಕೃಷ್ಣನೆಸಗಿದ ಧನುರ್ಭಂಗವನ್ನು ಚಿತ್ರಿಸುತ್ತಾನೆ. ಅನಂತರ ಮಧುರಾ ವರ್ಣನೆ ಬರುತ್ತದೆ. ಸೂರ್ಯಾಸ್ತ ವರ್ಣನೆಯೊಡನೆ ಎರಡನೆ ಸರ್ಗ ಮುಗಿಯು ತ್ತದೆ. ಅರಮನೆಯ ದ್ವಾರದಲ್ಲಿ ಆನೆ ಕುವಲಯಾ–ಪೀಡದ ನಿಗ್ರಹ, ಚಾಣೂರ, ಮುಷ್ಟಿಕರೆಂಬ ಜಟ್ಟಿಗಳನ್ನು ಕೆಡವಿ ಕೃಷ್ಣನು ಕಂಸನ ಮೇಲೆ ಬಿದ್ದುಕೊಲ್ಲುವುದು ಇದು ಮೂರನೇ ಸರ್ಗದ ವಸ್ತು. ಕೊನೆಯ ಸರ್ಗದಲ್ಲಿ–ಉಗ್ರಸೇನನ ಅಭಿಷೇಕ, ವಸುದೇವ ದೇವಕಿಯರ ಬಿಡುಗಡೆ ; ಆನಂದ ; ಗೋಕುಲದಲ್ಲಿ ನಡೆದ ಪೂತನಾ ಸಂಹಾರಾದಿ ಲೀಲೆಗಳ ವರ್ಣನೆ.

---

[1] ಸಂ : ಆ. ನೇ. ಉಪಾಧ್ಯೆ ; ಪ್ರಕಾಶಕರು : (ಪ್ರ) ಹಿಂದೀ ಗ್ರಂಥರತ್ನಾಕರ ಕಾರ್ಯಾಲಯ, ಬೊಂಬಾಯಿ 1940; (ದ್ವಿ) ಮೋತೀಲಾಲ್ ಬನಾರಸಿದಾಸ್, ದೆಹಲಿ, 1966.

[2] ಸಂ. : ಪಿ. ಎಸ್. ಸುಬ್ರಹ್ಮಣ್ಯಶಾಸ್ತ್ರಿ ಮತ್ತು ಡಾ॥ ಸಿ. ಕುನ್‌ಹನ್‌ರಾಜಾ ; ಪ್ರ. : ಅಡ್ಯಾರ್ ಲೈಬ್ರರಿ, ಅಡ್ಯಾರ್, ಮದ್ರಾಸ್, 1943.

ಈ ಕಾವ್ಯಕ್ಕೆ ಮೂಲ ಭಾಗವತದ ದಶಮಸ್ಕಂದ 38-46 ಅಧ್ಯಾಯಗಳು. ಮೂಲಕಥೆಯಲ್ಲಿ ಕವಿ ಏನೊಂದೂ ಬದಲಾವಣೆ ಮಾಡಿಕೊಂಡಿಲ್ಲ. ಒಂದೆರಡು ವರ್ಣನೆಗಳನ್ನು ಸೇರಿಸಿ, ವಿಸ್ತರಿಸಿದ್ದಾನಷ್ಟೆ. ಅನೇಕವೇಳೆ ಭಾಗವತದ ಪಂಕ್ತಿಗಳನ್ನೇ ಯಥಾವತ್ ಆಗಿ ತೆಗೆದುಕೊಂಡು ಅನುವಾದ ಮಾಡಿದ್ದಾನೆ.

## ಉಸಾನಿರುದ್ಧಂ

ಇದೂ ಸಹ ನಾಲ್ಕು ಸರ್ಗಗಳ ಕಾವ್ಯ. ಹೆಸರೇ ತಿಳಿಸುವಂತೆ ಉಷೆ ಅನಿರುದ್ಧರನ್ನು ಕುರಿತ ಎಂದರೆ ಅವರಿಬ್ಬರ ವಿವಾಹವನ್ನು ಕುರಿತ ಕಾವ್ಯ. 295 ಪದ್ಯಗಳಿವೆ.

ಬಾಣಾಸುರನ ಮಗಳು ಉಷೆ; ಒಮ್ಮೆ ಕನಸಿನಲ್ಲಿ ಸುಂದರ ಯುವಕನೊಬ್ಬ ತನ್ನನ್ನು ಆಲಿಂಗಿಸಿದಂತೆ ಕನಸು ಕಾಣುತ್ತಾಳೆ. ಅವನಾರೆಂದು ತಿಳಿಯದಿದ್ದರೂ, ಎಚ್ಚರವಾದ ಮೇಲೂ ಅವನನ್ನೇ ನೆನಸಿಕೊಂಡು ಪರಿತಪಿಸುತ್ತಾಳೆ. ಅವಳ ಸಖಿ ಚಿತ್ರಲೇಖೆ ಸಮಕಾಲೀನ ಸುಂದರ ಯುವಕರ ಚಿತ್ರಗಳನ್ನೆಲ್ಲಾ ಬರೆದು ತೋರಿಸಿದಾಗ, ಉಷೆಯ ಅನುರಾಗ ಕೃಷ್ಣನ ಮೊಮ್ಮಗ, ಪ್ರದ್ಯುಮ್ನನ ಮಗ ಅನಿರುದ್ಧನ ಮೇಲಿದೆ ಎಂದು ತಿಳಿಯುತ್ತದೆ. ತನ್ನ ಮಂತ್ರಬಲದಿಂದ ಚಿತ್ರಲೇಖೆ ಅನಿರುದ್ಧನನ್ನು ಅಂತಃಪುರಕ್ಕೆ ತಂದುಬಿಡುತ್ತಾಳೆ. ಉಷೆ-ಅನಿರುದ್ಧರು ಹೀಗೆ ಸೇರುವುದನ್ನು ಬಾಣನು ಕಂಡು ಅನಿರುದ್ಧನನ್ನು ಬಂಧನದಲ್ಲಿಡುತ್ತಾನೆ. ಅಲ್ಲಿ ಇದ್ದಕ್ಕಿದ್ದಂತೆಯೇ ಅದೃಶ್ಯನಾದ ಅನಿರುದ್ಧನ ಬಗ್ಗೆ ಕೃಷ್ಣಾದಿಗಳು ಶೋಕಿಸುತ್ತಿದ್ದರು. ಇಲ್ಲಿಗೆ ಮೊದಲ ಸರ್ಗ ಮುಗಿಯುತ್ತದೆ. ಆ ಸಮಯಕ್ಕೆ ನಾರದನು ಬಂದು ವಿಷಯವನ್ನೆಲ್ಲಾ ತಿಳಿಸುತ್ತಾನೆ. ಕೃಷ್ಣನು ತನ್ನವರನ್ನೆಲ್ಲಾ ಕೂಡಿಕೊಂಡು ಬಾಣನ ಮೇಲೆ ಯುದ್ಧಕ್ಕೆ ಹೊರಡುತ್ತಾನೆ. ಬಾಣನೊಡನೆ ತೀವ್ರ ಹೋರಾಟ ನಡೆಯುತ್ತದೆ. ಇಲ್ಲಿಯವರೆಗೆ ಎರಡನೇ ಸರ್ಗ. ಹೋರಾಟ ನಡೆಯುತ್ತಿರುವಾಗ ಕೃಷ್ಣ ಬಾಣನ ತೋಳುಗಳನ್ನು ಕತ್ತರಿಸುತ್ತಾನೆ. ಆಗ ಭಕ್ತನ ಪರವಾಗಿ ಈಶ್ವರ ಮಧ್ಯ ಪ್ರವೇಶಿಸಿ ಯುದ್ಧ ಸಮಾಪ್ತಿ ಮಾಡಿಸುತ್ತಾನೆ. ಉಷಾ-ಅನಿರುದ್ಧರ ವಿವಾಹಕ್ಕೆ ಬಾಣ ಒಪ್ಪುತ್ತಾನೆ. ನವದಂಪತಿಗಳನ್ನು ಕರೆದುಕೊಂಡು ಕೃಷ್ಣಾದಿಗಳೆಲ್ಲಾ ದ್ವಾರಕೆಗೆ ಹಿಂದಿರುಗುತ್ತಾರೆ. ಇದು ಮೂರನೇ ಸರ್ಗದ ವಸ್ತು. ಪುರವನ್ನು ಪ್ರವೇಶಿಸುತ್ತಿರುವ ನವ ವಧೂವರರನ್ನು ದ್ವಾರಕೆಯ ಜನರು ಕುತೂಹಲದಿಂದ ವೀಕ್ಷಿಸುತ್ತಾರೆ. ವಿವಾಹಾನಂತರ ಉಷಾ-ಅನಿರುದ್ಧರು ನಾನಾ ಕ್ರೀಡೆಗಳಲ್ಲಿ ತೊಡಗುತ್ತಾರೆಂದು ವರ್ಣಿಸುತ್ತಾ ಕಾವ್ಯ ಮುಗಿಸುತ್ತಾನೆ.

ಈ ಕಾವ್ಯಕ್ಕೂ ಸಹ ಭಾಗವತ ದಶಮಸ್ಕಂಧದ 62-63 ಅಧ್ಯಾಯಗಳಲ್ಲಿನ ಕಥೆಯೇ ಆಧಾರ. ಕವಿ ಇಲ್ಲಿಯೂ ಮೂಲಕಥೆಯನ್ನೇ ಅನುಸರಿಸಿದ್ದಾನೆ. ಈ

ಕಾವ್ಯದಲ್ಲಿಯೂ ಭಾಗವತದ ಪದಪುಂಜವನ್ನೇ ಕಾಣಬಹುದು. ಆದರೆ ಮೂಲಕ್ಕಿಂತ ಇನ್ನೂ ಕಾವ್ಯಮಯವಾಗಿ, ಮನೋಜ್ಞವಾಗಿ ನಿರೂಪಿಸಿದ್ದಾನೆ.

## ಕಾವ್ಯದ್ವಯದ ವಿಮರ್ಶೆ

ಇವೆರಡು ಕಾವ್ಯಗಳಲ್ಲಿ "ಕಂಸವಹೋ"ವನ್ನು ಮೊದಲು ಬರೆದಿರಬೇಕು. ಏಕೆಂದರೆ, ಅದನ್ನು ಬರೆಯುವ ಉದ್ದೇಶ ಅವನೇ ಹೇಳಿಕೊಳ್ಳುವಂತೆ ಬಾಲರಿಗೆ ಭಾಷೆ ಕಲಿಯಲು ಸಹಾಯ ಮಾಡುವುದು.

"ದುವ್ವಾಹ-ಪಾಅಅ-ಪಓ-ಣಿಲಯೇ ಗಹೀರೇ
ಬಾಲಾಣ ವಾಹಿಉಮಿಣಂ ಖು ಮುಣೇಹ ರೂಹಂ ।
ಣವ್ವಂ ಹಿ ಕವ್ವಮಿಹ ಕಂಸವಹಾಭಿಹಾಣಂ
ಸವ್ವೇ ವಿ ಭವ್ವ-ಮದಿಣೋ ಪರಿಸೀಲಏಹ ॥" (4–48.1)

ಭಾ : ದುರ್ವಾಹ–ಪ್ರಾಕೃತ ಪಯೋನಿಲಯೇ ಗಭೀರೇ ಬಾಲಾನಾಂ ವಾಹಿತು-
ಮಿದಂ ಖಲು ಜಾನೀತ ರೋಧಃ । ನವ್ಯಂ ಹಿ ಕಾವ್ಯಮಿಹ ಕಂಸವ
ಧಾಭಿಧಾನಂ ಸರ್ವೇಽಪಿ ಭವ್ಯಮತಯಃ ಪರಿಶೀಲಯಂತ ॥ (4–48.1)

"ಉಷಾನಿರುದ್ಧ" ಬರೆಯುವಲ್ಲಿ ಕಾವ್ಯ ರಚಿಸಬೇಕೆಂಬುದೇ ಉದ್ದೇಶ. ಇದು ಕಾವ್ಯದ ಭಾಷೆ ಬಗ್ಗೆ ರಾಜಶೇಖರನ ಅಭಿಪ್ರಾಯವನ್ನು ಪ್ರತಿಧ್ವನಿಸುವುದರಿಂದ ತಿಳಿಯುತ್ತದೆ.

"ಅತ್ಥಾವಬೋಹಮ್ಮಿ ಪಹಾಣ–ಭೂದೇ ಗೋಣತ್ತಣೇಣೋವ ಅರಂತಿ
ಸದ್ದಾ ।
ತೇ ಸಕ್ಕಅ ವಾ ಉಣ ಪಾಅಡಾ ವಾ ಬುಹಾಣ ಕೋ ತತ್ಥ ವಿಸೇಸ–ಸಂಗೋ॥"
(1–6)

ಭಾ : ಅರ್ಥಾವಬೋಧೇ ಪ್ರಧಾನ ಭೂತೇ ಗೌಣತ್ವೇನೋಪಚರಂತಿ ಶಬ್ದಾಃ ।
ತೇ ಸಂಸ್ಕೃತಾ ವಾ ಪುನಃ ಪ್ರಾಕೃತಾ ವಾ ಬುಧಾನಾಂ ಕಸ್ತತ್ರ ವಿಶೇಷ
ಸಂಗಃ ॥ (1–6)

ರಾಜಶೇಖರ :—

"ಉತ್ತವಿಸೇಸೋ ಕವ್ವಂ ಭಾಸಾ ಜಾ ಹೋಇ ಸಾ ಹೋಉ ।"
(ಕರ್ಪೂರ ಮಂಜರಿ)

ರಾಮಪಾಣಿವಾದನ ಈ ಪ್ರಾಕೃತ ಕಾವ್ಯಗಳಲ್ಲಿ ಮಹತ್ವದ ವಿಷಯಗಳೇನೂ ಇಲ್ಲ. 18ನೇ ಶತಮಾನದಲ್ಲಿಯೂ ಇಂಥದೊಂದು ಪ್ರಯತ್ನ ನಡೆಯಿತೆಂಬು

ದೊಂದೇ ಪ್ರಶಂಸನೀಯವಾದದ್ದು. ಈತ ನಾಲ್ಕಾರು ರೂಪಕಗಳನ್ನೂ ಬರೆದಿದ್ದಾನೆಂದು ಮೇಲೆ ತಿಳಿಸಿದೆ. ಅವುಗಳಲ್ಲಿ ಪರಂಪರೆಯನ್ನನುಸರಿಸಿ ಪ್ರಾಕೃತ ಪಾಠವನ್ನು ಅಳವಡಿಸಿದ್ದಾನೆ. ಇದು ಬಹಳ ಹಿಂದಿನಿಂದಲೂ ನಡೆದು ಬಂದ ದಾರಿ. ಆದರೆ ಹಾಗೆ ರೂಪಕಗಳನ್ನು ಬರೆದವರೆಲ್ಲಾ ಪ್ರಾಕೃತದಲ್ಲಿಯೂ ಕಾವ್ಯ ಬರೆದಿಲ್ಲ. ಪೂರ್ಣ ಪ್ರಾಕೃತ ಕಾವ್ಯ ಬರೆದಿರುವುದು ಅಪರೂಪ. ಅಲ್ಲೊಂದು ಇಲ್ಲೊಂದು ಕಾಣುತ್ತದೆ. ಇತಿಹಾಸದಲ್ಲಿ ಅಂತಹ ಕೆಲವೇ ಕವಿಗಳ ಪಂಕ್ತಿಯಲ್ಲಿ ರಾಮನ ಹೆಸರೂ ಸೇರುತ್ತದೆ.

ಈ ಕಾವ್ಯಗಳಲ್ಲಿ ಸ್ವಾಭಾವಿಕತೆ ಕಾಣದಿದ್ದರೆ, ಅದಕ್ಕೆ ಐತಿಹಾಸಿಕ ಕಾರಣಗಳನ್ನು ಮೇಲೆ ಸೂಚಿಸಿದೆ. ಅದರಲ್ಲಿಯೂ ಕವಿ ರಾಮನು ಸಂಸ್ಕೃತದಲ್ಲಿ ಆಲೋಚಿಸಿ ಸಂಸ್ಕೃತದಲ್ಲಿ ವಾಕ್ಯ ರಚಿಸಿ ಅದನ್ನು ಪ್ರಾಕೃತಕ್ಕೆ ತರ್ಜುಮೆ ಮಾಡಿದಂತಿದೆ. ಛಂದಸ್ಸು, ಅಲಂಕಾರಗಳು, ಶೈಲಿ ಎಲ್ಲವೂ ಸಂಸ್ಕೃತ ಕಾವ್ಯದ ಅಚ್ಚು. ಆದರೆ ಧ್ವನಿದೃಷ್ಟಿಯಿಂದ ಕಾವ್ಯಗಳಲ್ಲಿ ಅತಿಶಯ ಸ್ವಾರಸ್ಯವೇನೂ ಇಲ್ಲ. ಪೌರಾಣಿಕ ಕಥೆಯನ್ನು ಸರಳವಾಗಿ ಹೇಳುವ ಉದ್ದೇಶವನ್ನು ಹೊಂದಿರುವುದರಿಂದ ಭಾವದ ಗಾಢತೆಯ ನಿರೂಪಣೆಗೆ ಕವಿ ಅವಕಾಶ ಮಾಡಿಕೊಂಡಿಲ್ಲ. ಅಲ್ಲಲ್ಲಿ ಶಬ್ದಾಲಂಕಾರಗಳನ್ನು ಸೇರಿಸಿ ಶ್ರವ್ಯವಾಗುವಂತೆ ಮಾಡಿದ್ದಾನೆ.

ಸಂಸ್ಕೃತ ಸಾಹಿತ್ಯದ ಹಾಗೂ ಪ್ರಾಕೃತ ಕಾವ್ಯಗಳ ಪ್ರಭಾವ ರಾಮನ ಕೃತಿಗಳ ಮೇಲೆ ಬಹಳ ಗಾಢವಾಗಿದೆ. ಭಾಗವತಾದಿ ಗ್ರಂಥಗಳು, ರಘುವಂಶ–ಶಿಶುಪಾಲವಧ ಮೊದಲಾದ ಸಂಸ್ಕೃತ ಕಾವ್ಯಗಳು, ರಾವಣವಹೋ, ಕರ್ಪೂರಮಂಜರೀ ಮೊದಲಾದ ಪ್ರಾಕೃತಕಾವ್ಯಗಳು—ಇವುಗಳನ್ನೆಲ್ಲ ಚೆನ್ನಾಗಿ ಹೃದ್ಗತಮಾಡಿಕೊಂಡಿದ್ದನೆಂಬುದರಲ್ಲಿ ಸಂದೇಹವಿಲ್ಲ.

ಭಾಗವತದ ಪಂಕ್ತಿಗಳನ್ನೇ ಅನುವಾದ ಮಾಡಿದಂತೆ ಇದೆ, ಕೆಲವೆಡೆ ಎಂದು ಹಿಂದೆ ತಿಳಿಸಿತ್ತು. ಒಂದೆರಡು ಉದಾಹರಣೆಗಳು :

ಅಹೆಕ್ಕದಾ ಚಂಕಮಿರೋ ವಅಂಗಣೇ
ದಿಣಂತ–ಗೋ–ದೊಹಣ–ವಾವುತಂಗಣೇ । (ಕಂ. 1–3ab)

ಭಾ : ಅಥೈಕದಾ ಚಂಕ್ರಮಣಶೀಲೋ ವ್ರಜಾಂಗಣೇ
ದಿನಾಂತ–ಗೋದೋಹನವ್ಯಾಪೃತಾಂಗನೇ ।

=ರಥೇನ ಗೋಕುಲಂ ಪ್ರಾಪ್ತಃ ಸೂರ್ಯಶ್ಚಾಸ್ತಗಿರಿಂ ನೃಪ ।
ದದರ್ಶ ಕೃಷ್ಣಂ ರಾಮಂಚ ವ್ರಜೇಗೋದೋಹನಂ ಗತೌ ॥
(ಭಾ. 10–38, 24cd : 8ab)

ಉಂದಾವಣಮ್ಮಿ ಜಉಣಾ-ಪುಲಿಣಮ್ಮಿ ರಮ್ಮೇ
ಗೋವಡ್ಢಣದ್ದಿ-ಸಿಹರಮ್ಮಿ ಅ ಹಮ್ಮಿಆಹೇ । (ಕಂ. 4–22ab)

ಛಾ : ವೃಂದಾವನೇ ಯಮುನಾಪುಲಿನೇ ರಮ್ಯೇ
ಗೋವರ್ಧನಾದ್ರಿ ಶಿಖರೇ ಚ ಹರ್ಮ್ಯಾಭೇ ।
=ವೃಂದಾವನಂ ಗೋವರ್ಧನಂ ಯಮುನಾ ಪುಲಿನಾನಿ ಚ ।
(ಭಾ. 10–11.36ab)

ಸು-ದುಜ್ಜ ಅಂ ಮಣಿಅ ಪಣ್ಣಅತ್ಥಂ ಖಿತ್ತೂಣ ಣಂ ಬಜ್ಝಇ ದೇಚ್ಚ-ಣಾಹೋ॥
(ಉ–1.72cd)

ಛಾ : ಸುದುರ್ಜಯಂ ಮತ್ವಾ ಪನ್ನಗಾಸ್ತ್ರಂ ಕ್ಷಿಪ್ತ್ವೈನಮಬಧ್ನಾದ್ದೈತ್ಯನಾಥಃ ॥
=ತಂ ನಾಗಪಾಶೈಃ ಬಲಿನಂದನೋ ಬಲೀ ಘ್ನಂತಂ ಸ್ವಸೈನ್ಯಂ ಕುಪಿತೋ ಬಬಂಧ ಹ । (ಭಾ. 10–62.35ab)

ಇಹ ಖುಣ ಬಳಿ-ಣಂದಣಂ ಹಣಿಸ್ಸಂ ಣವರ ಕರೇಮಿ ಮಅ-ಪ್ಪರೋಹ-ಣಿಸ್ಸಂ । (ಉ–3.47ab)

ಛಾ : ಇಹ ಖಲು ನ ಬಲಿನಂದನಂ ಹನಿಷ್ಯಾಮಿ ಕೇವಲಂ ಕರೋಮಿ ಮದಪ್ರ-ರೋಹನಿಃಸ್ವಂ ।
=ಅವಧ್ಯೋऽಯಂ ಮಮಾಪ್ಯೇಷ ವೈರೋಚನಿಸುತೋऽಸುರಃ ।
ದರ್ಪೋಪಶಮನಾಯಾಸ್ಯ ಪ್ರವೃಕ್ಣಾ ಬಾಹವೋ ಮಯಾ ॥
(ಭಾ. 10–63.47ab 48ab)

"ಶಿಶುಪಾಲವಧ"ದ ಅನೇಕ ಪದ್ಯಗಳನ್ನು ನೆನಪು ಮಾಡಿಕೊಡುತ್ತವೆ, "ಕಂಸವಹೋ" ಕಾವ್ಯದ ಪದ್ಯಗಳು. ಕಾಳಿದಾಸನ ಛಾಯೆಯೂ ಕೆಲವೆಡೆ ಕಾಣುತ್ತದೆ.

ಒಂದೆರಡು ಉದಾ :

ಅಹ ಫ್ಫುಡಂ ಕಾಹಿಇ ಸಾಹಸಂ ಜಯಿ
ಕ್ಖಅಂ ಸಅಂ ಜಾಹಿಇ ಪಾ-ಅಡೋ ಜಣೋ ।
ಸಮಿದ್ಧಮಗ್ಗಿಂ ಗಸಿಉಂ ಸಮುಟ್ಠಿಓ
ಣ ಡಜ್ಝಏ ಕಿಂ ಸಲಹಾಣ ಸಂಚಓ ॥ (ಕಂ. 1–29)

ಛಾ : ಅಥ ಸ್ಫುಟಂ ಕರಿಷ್ಯತಿ ಸಾಹಸಂ ಯದಿ ಕ್ಷಯಂ ಸ್ವಯಂ ಯಾಸ್ಯತಿ ಪ್ರಾಕೃತೋ ಜನಃ । ಸಮಿದ್ಧಮಗ್ನಿಂ ಗ್ರಸಿತುಂ ಸಮುತ್ಥಿತೋ ನ ದಹ್ಯತೇ ಕಿಂ ಶಲಭಾನಾಂ ಸಂಚಯಃ ॥

ಇದು ಶಿಶುಪಾಲವಧದ 16ನೇ ಸರ್ಗ, 35ನೇ ಪದ್ಯವನ್ನು ಜ್ಞಾಪಿಸುತ್ತದೆ.

ಮಹತಸ್ತರಸಾ ವಿಲಂಘಯನ್ನಿಜದೋಷೇಣ ಕುಧೀರ್ವಿನಶ್ಯತಿ ।
ಕುರುತೇ ನ ಖಲು ಸ್ವಯೇಚ್ಛಯಾ ಶಲಭಾನಿಂದನವಿದ್ಧದೀಧಿತಿಃ ॥

ಅವಿಜ್ಝಾ ರವಿ-ಕಿರಣೇಹಿ ಸುಜ್ಜ-ಕಂದಾ
ಉಮ್ಹಾಣಂ ವಮಿಉಮಮೀ ಉವಕ್ಕಮಂತಿ ।
ಣೋ ಖುದ್ದಾ ಅವಿ ಹಿ ಸಹಂತಿ ಅಣ್ಣ-ತೇಓ-
ವಿಚ್ಛಡ್ಡಂ ಕಿಮುಅ ಕುಮಾರಿಸಾ ಮಹಂತಾ ॥ (ಕಂ. 3–14)

ಛಾ : ಅವಿದ್ಧಾ ರವಿಕಿರಣೈಃ ಸೂರ್ಯಕಾಂತಾ ಊಷ್ಮಾಣಂ ವಮಿತು ಮಮೀ
ಉಪಕ್ರಮಂತೇ । ನೋ ಕ್ಷುದ್ರಾ ಅಪಿ ಸಹಂತೇಽನ್ಯತೇ ಜೋವಿಚ್ಛರ್ದಂ
ಕಿಮುತತಾದೃಶಾ ಮಹಾಂತಃ ॥ ೩೪ ॥

ಇದು ಅಭಿಜ್ಞಾನ ಶಾಕುಂತಲದ ಅಂಕ 2 ಪದ್ಯ 7ನ್ನು ನೆನಪಿಗೆ ತರುತ್ತದೆ :

ಶಮಪ್ರಧಾನೇಷು ತಪೋಧನೇಷು ಗೂಢಂ ಹಿ ದಾಹಾತ್ಮಕಮಸ್ತಿ ತೇಜಃ ।
ಸ್ಪರ್ಶಾನುಕೂಲಾ ಇವ ಸೂರ್ಯಕಾಂತಾಃ ತದನ್ಯತೇಜೋಽಭಿಭವಾದ್ವಮಂತಿ॥

"ಉಸಾನಿರುದ್ಧ" ಸ್ವತಂತ್ರವಾಗಿ ರಚಿತವಾಗಿದೆ. "ಕಂಸವಹೋ" "ಶಿಶುಪಾಲ ವಧ"ದ ಮಾದರಿಯ ಮೇಲೆ ರಚಿಸಲಾಗಿದೆ ಎಂಬುದು ಸ್ಪಷ್ಟ. ಹೆಸರಿನಲ್ಲಿ ಸಾಮ್ಯವಿದೆ. ಆರಂಭ "ಶ್ರೀ"ಕಾರದಿಂದ ಆಗಿದೆ. "ಸಿರೀಅ ಣಾಹೋ ಸಿಹಿ ಪಿಂಛ-ಸೇಹರೋ (ಕಂ.1–1a) ಮಾಘ ವರ್ಣಿಸಿದ ನಾರದಾಗಮನಕ್ಕೆ ಅನುಗುಣವಾಗಿ ರಾಮನು ಅಕ್ರೂರನ ಆಗಮನವನ್ನು ವರ್ಣಿಸುತ್ತಾನೆ. ಭಾಗವತದಲ್ಲಿ "ಅಕ್ರೂರನು ನೋಡಿದನು" ಎಂದರೆ, "ಕೃಷ್ಣನು ಕಂಡನು" ಎಂದು ರಾಮ ಹೇಳುತ್ತಾನೆ.

ಅಹೆಕ್ಕದಾ ಚಂಕಮಿರೋ ವ-ಅಂಗಣೇ (ಕಂ. 1–3)

ಕರ್ತವ್ಯಾಲೋಚನೆ, ಶೃಂಗಾರ ಕ್ರೀಡೆಗಳು — ಈ ವರ್ಣನೆಗಳು ಕ್ರಮವಾಗಿ ಉಭಯ ಕಾವ್ಯಗಳಲ್ಲಿಯೂ ಇವೆ. ಕೊನೆಯಲ್ಲಿ ಶಿಶುಪಾಲವಧೆಗೆ ಸಮನಾಗಿ ಕಂಸವಧೆ. ಕೊನೆಯಲ್ಲಿ ಭೀಷ್ಮ ಕೃಷ್ಣನ ಲೀಲೆಗಳನ್ನು ತಿಳಿಸುವಂತೆ ಇಲ್ಲಿ ಆ ಲೀಲೆಗಳನ್ನು ಅಕ್ರೂರ ಹೇಳುತ್ತಾನೆ.

ಕಥಾನಿರೂಪಣೆಯಲ್ಲಿ ಭಾಗವತವನ್ನೇ ಅನುಸರಿಸಿದರೂ, ಅನೇಕ ಘಟನೆಗಳನ್ನು ನಾಟಕೀಯವನ್ನಾಗಿ ಮಾಡಿದ್ದಾನೆ. ಉದಾಹರಣೆಗೆ "ಕಂಸವಹೋ"ನಲ್ಲಿ ಅಗಸ-ಕುಬ್ಜೆಯರ ಪ್ರಸಂಗಗಳು. "ಉಸಾನಿರುದ್ಧ"ದಲ್ಲಿ ಎರಡು ಅಧ್ಯಾಯಗಳ ಕಥೆಯನ್ನು ನಾಲ್ಕು ಸರ್ಗಗಳಲ್ಲಿ ವಿಸ್ತರಿಸುವಾಗ ಪ್ರತಿಯೊಂದು ಘಟನೆ ಎಂಬಂತೆ ಬಹಳ ರೋಚಕವನ್ನಾಗಿ ಮಾಡಿದ್ದಾನೆ.

ಉಪಮಾ, ಉತ್ಪ್ರೇಕ್ಷಾ, ಅರ್ಥಾಂತರನ್ಯಾಸ, ಪ್ರತಿವಸ್ತೂಪಮಾ ಮೊದಲಾದ ಅಲಂಕಾರಗಳನ್ನು ಬಳಸಿದ್ದಾನೆ.

ಅರ್ಥಾಂತರನ್ಯಾಸ ;

ಮಹಣಿಜ್ಜ-ಮಹುಜ್ಜಲಂಗ-ಲಚ್ಛೀ-
ವಿಹವಾಲೋಅ-ವಿಹುಲ್ಲ-ಕೋಉಹಲ್ಲಾ ।
ಪದಿಸಂತಿ ಪಿಹಜ್ಜಣಾ ವಿ ಮಗ್ಗಂ
ತಹಿ ಸೇ ಕಂ ಣ ಹರಂತಿ ಪುಣ್ಣಭಾಅ ॥ (ಕಂ. 2-31)

ಭಾ : ಮಹನೀಯ-ಮಹೋಜ್ಜ್ವಲಾಂಗ-ಲಕ್ಷ್ಮೀವಿಭವಾಲೋಕವಿಫುಲ್ಲ ಕೌತೂ-
ಹಲಾಃ । ಪ್ರಾದಿಶನ್ ಪೃಥಗ್ಜನಾ ಅಪಿ ಮಾರ್ಗಂ ತಸ್ಯಾಮಸ್ಮೈ ಕಂ ನ
ಹರಂತಿ ಪೂರ್ಣಭಾಗಾಃ ॥

ಕಡ್ಢಂತೋ ಗಲ-ಪಹ-ಣಿಂತ-ರತ್ತ-ಸಿತ್ತಂ
ಗತ್ತಂ ಸೇ ಗಲುಲ-ಧಓ ಗಲಣುಕಂಪಂ ।
ಸೇರಂ ಸೋ ಲಹಇ ತಹಿಂ ಖು ವೇರ-ಸಂತಿಂ
ಧೀರಾಣಾಂ ಪಿ ಹಿ ಹಿಅಅಂ ಧುಣಾಇ ಕೋಹೋ ॥ (ಕಂ. 3-56)

ಭಾ : ಕರ್ಷನ್ ಗಲಪಥನಿರ್ಯದ್ರಕ್ತಸಿಕ್ತಂ ಗಾತ್ರಮಸ್ಯ ಗರುಡಧ್ವಜೋ
ಗತಾನುಕಂಪಂ । ಸ್ವೈರಂ ಸೋಽಲಭತ ತಸ್ಮಿನ್ ಖಲು ವೈರಶಾನ್ತಿಂ
ಧೀರಾಣಾಮಪಿ ಹಿ ಹೃದಯಂ ಧುನಾತಿ ಕ್ರೋಧಃ ॥

ಪ್ರತಿವಸ್ತೂಪಮಾ :

ಅಹಮೇಹಿಮಿ ದಾವ ಭೂವ-ಸೇವಾ-
ಣಿಅಲಾದೋ ಮಹ ಜಾವ ಹೋಜ್ಜ ಮೋಕ್ಖೋ ।
ಣ ಹಿ ಕೇರವಿಣಿಂ ಛಿವೇ ಉಮೀಸೋ
ಘಣ-ರುದ್ಧ-ಪ್ಪಸರೋ ಸ ಚಂದಮೋ ವಿ ॥ (ಕಂ. 2-28)

ಭಾ : ಅಹಮೇಷ್ಯಾಮಿ ತಾವದ್ಭೂಪಸೇವಾ-ನಿಗಲಾನ್ಮಮ ಯಾವದ್ಭವೇನ್ಮೋಕ್ಷಃ।
ನಹಿ ಕೈರವಿಣೀಂ ಸ್ಪೃಶ್ಯುಮೀಶೋ ಘನರುದ್ಧಪ್ರಸರಃ ಸ ಚಂದ್ರಮಾ ಅಪಿ॥

ಉತ್ಪ್ರೇಕ್ಷಾ :

ಮಂಚಗ್ಗ-ಟ್ಠಿಅ-ಣಿಅ-ಭತ್ತು-ದಿಟ್ಠ-ವಿಟ್ಠೀ
ಸಿಂಚಂತಾ ಪಿಅ ಮಹಿ-ಪಲ್ಲವುಲ್ಲಸಂತಾ ।
ಚಾಣೂರೋ ಸಅಮುಹಂ ಮುಟ್ಠಿಓ ಅ ಬೇಣ್ಣಿ
ಪ್ಪೊಣ್ಣದ್ಧಾ ಣಿಹಿಲಮುವಂತಿ ಮಲ್ಲ-ಸೇಣಂ ॥ (ಕಂ. 3-41)

ಭಾ : ಮಂಚಾಗ್ರಸ್ಥಿತನಿಜಭರ್ತೃದೃಷ್ಟಿವೃಷ್ಟಿಸಿಚ್ಯಮಾನಾವಿವ ಮದಪಲ್ಲವೋಲ್ಲ-ಸಂತೌ । ಚಾಣೂರಃ ಸ್ವಯಮಥ ಮುಷ್ಟಿಕಶ್ಚ ದ್ವಾ ವ್ಯೋನ್ನಿದ್ರೌ ನಿಖಿಲಂ ಅವತಾಂ ಮಲ್ಲಸೈನ್ಯಂ ॥

ಶಬ್ದಾಲಂಕಾರಗಳು ಅಲ್ಲಲ್ಲಿ ಕಾಣುತ್ತವೆ. ಆದರೆ ಅತಿಯಿಲ್ಲ. ಯಮಕ ಅನುಪ್ರಾಸಗಳಿವೆ. ದ್ವಿತೀಯಾಕ್ಷರ ಪ್ರಾಸವೂ ಕೆಲವೆಡೆ ಕಾಣಸಿಗುತ್ತದೆ. ಇವು "ಕಂಸವಹೋ"ವಿನಲ್ಲಿ ವಿಶೇಷವಾಗಿವೆ. "ಉಸಾಸಿರುದ್ಧ"ದಲ್ಲಿ ಬಹಳ ಕಡಮೆ.

ಉದಾ :—

**ಯಮಕ :—**

ಖಣಂ ರುವಂತಂ ವಿಹಸಂತಮಂತರಾ
ಖಣಂ ಚ ಖಂಭಂ ವ ಣಿರೂಸಹಂ ಠಿಅಂ ।
ಖಣಂ ಚರಂತಂ ಖಣಮುಚ್ಚ-ಜಂಪಿಅಂ
ಖಣಂ ಪಿ ತುಣ್ಹಿಕ್ಕ-ಮುಹಂ ಮಅಹಿ ವ ॥ (ಕಂ. 1-7)

ಭಾ : ಕ್ಷಣಂ ರುವಂತಂ ವಿಹಸಂತಮಂತರಾ ಕ್ಷಣಂ ಚ ಸ್ತಂಭಮಿವ ನಿರುಚ್ಛ್ವಸಂಸ್ಥಿತಮ್ । ಕ್ಷಣಂ ಚರಂತಂ ಕ್ಷಣಮುಚ್ಚಜಲ್ಪಿತಂ ಕ್ಷಣಮಪಿ ಚ ತೂಷ್ಣೀಕಮುಖಂ ಮದಾದಿವ ॥

ಸೋಏಣಂ ಬಹು-ದಿಅಹೇ ಸಮಾಉರಾಏ
ವಾಮಾಚ್ಛೀ ಫುರಇ ತಆ ಸ-ಮಾಉರಾಏ ।
ಕಂಸಾದೀಣ ಅ ಕುಹಣಾ-ಸಮಲ್ಲಆಣಂ
ಸತ್ತೂಣಂ ಪಇದಿ-ಹದಾಸ-ಮಲ್ಲಆಣಂ ॥ (ಕಂ. 3-25)

ಭಾ : ಶೋಕೇನ ಬಹುದಿವಸಾತ್ ಸಮಾತುರಾಯಾ ವಾಮಾಕ್ಷಿ ಅಸ್ಫುರತ್ ತದಾ ಸ್ವಮಾತುಃ । ಕಂಸಾದೀನಾಂ ಚ ಕುಹನಾಸಮಾಶ್ರಯಾಣಾಂ ಶತ್ರೂ-ಣಾಂ ಪ್ರಕೃತಿಹತಾಶಮಲ್ಲಕಾನಾಂ ॥

**ದ್ವಿತೀಯಾಕ್ಷರ ಪ್ರಾಸ :**

ಅಟ್ಠ ದಾವ ಣಿವರಸ್ಸ ಕಣಿಟ್ಠಾ
ಣಿಟ್ಠುರಟ್ಟಹಸಿಅದಿ-ಗರಿಟ್ಠಾ ।
ದುಟ್ಠ-ರುಟ್ಠ-ಮಣಸೋ ವಿ ಪವಿಟ್ಠಾ
ಪಿಟ್ಠರಸ್ಸವ-ಹಆ ಸುರ-ಗೋಟ್ಠಿಂ ॥ (ಕಂ. 3-59)

ಭಾ : ಅಷ್ಟ ತಾವನ್ನೃಪಸ್ಯ ಕನಿಷ್ಠಾ ನಿಷ್ಠುರಾಟ್ಟಹಸಿತಾತಿಗರಿಷ್ಠಾಃ । ದುಷ್ಟರುಷ್ಟಮನಸೋಽಪಿ ಪ್ರವಿಷ್ಟಾ ಪಿಷ್ಟರಶ್ರವಹತಾ ಸುರಗೋಷ್ಠೀಮ್ ॥

ಅನುಪ್ರಾಸ :

ವಿಸಿಹಾ ವಿ ಸಿಹಾವಳುಕ್ಕಡ–ಪ್ಫುಡ–ಪಕ್ಖಾಣಿಳ–ತಕ್ಖಣುದ್ಧಿಅ ।
ವಿಮುಹಾ ವಿಮುಹಾ ಹಳಅ ತಂ ಣ ವಿಸಾಹಂ ಪವಿಸಂತಿ ವೇರಿಣೋ ॥
(ಉ. 2–31)

ಭಾ : ವಿಶಿಖಾ ಅಪಿ ಶಿಖಾವಲೋತ್ಕಟ–ಸ್ಫುಟಪಕ್ಷಾನಿಲತತ್ಕ್ಷಣೋದ್ಧೃತಾಃ ।
ವಿಮುಖಾ ವಿಮುಖಾ ಹತಾಶ್ಚ ತಂ ನ ವಿಶಾಖಂ ಪ್ರಾವಿಶನ್ ವೈರಿಣಃ ॥

ರಾಮನಲ್ಲಿ ವರ್ಣನಾಚಾತುರ್ಯಕ್ಕೆ ದಾರಿದ್ರ್ಯವೇನೂ ಇಲ್ಲ. ಒಂದೆರಡು ಉದಾಹರಣೆಗಳು :

ಕೃಷ್ಣನು ಕುಬ್ಜೆಯನ್ನು ಉದ್ಧರಿಸಿದಾಗ ಅವಳ ಶೋಭೆಯನ್ನು ಕವಿ ಹೀಗೆ ಹೇಳುತ್ತಾನೆ.

ಪಢಮಂ ಕುಡಿಲಾ ವಿ ಚಂದಲೇಹಾ
ಜಹ ಸಂಪುಣ್ಣದಮೇಇ ಪುಣ್ಣಿಮಾಅಂ ।
ತಹ ಸಾ ಸಹಸಾ ಭುವೀಅ ಪುಣ್ಣಾ
ಕಮಣೀ–ಕೋಮಲ–ಕಂತಿ–ಕೋಮುಈಹಿಂ ॥ (ಕಂ. 2–19)

ಭಾ : ಪ್ರಥಮಂ ಕುಟಿಲಾಪಿ ಚಂದ್ರಲೇಖಾ ಯಥಾ ಸಂಪೂರ್ಣತಾಮೇತಿ ಪೂರ್ಣಿಮಾಯಾಂ। ತಥಾ ಸಾ ಸಹಸಾ ಬಭೂವ ಪೂರ್ಣಾ ಕಮನೀಯ ಕೋಮಲ ಕಾಂತಿ ಕೌಮುದೀಭಿಃ ॥

ಚಂದ್ರಬಿಂಬವು ಮೊದಲು ವಕ್ರವಾಗಿದ್ದರೂ ಹುಣ್ಣಿಮೆಯಂದು ಪೂರ್ಣವಾದಾಗ ಕೋಮಲ ಕಾಂತಿ ಪೂರ್ಣವಾದಂತೆ ಆದಳು.

ಮಥುರೆಯ ವರ್ಣನೆ ಹೀಗಿದೆ :

ಗಂಧವ್ವಾ ಣ ಕಿಮೇತ್ಥ ಸಂತಿ ಣ ಹು ಕಿಂ ವಿಜ್ಜಂತಿ ವಿಜ್ಜಾಹರಾ
ಕಿಂ ವಾ ಚಾರು ಣ ಚಾರಣಾಣ ಅ ಕುಲಂ ಜಿಣ್ಣಂತಿ ಣೋ ಕಿಂಣರಾ ।
ಕಿಂ ಣೇ ಅಂ ಸುಮಣಾಣ ಧಾಮ ಕಿಮಹೋ ಣಾಹೋ ಮಹಿಂದೋ ಣ ಸೇ
ಸಗ್ಗೋ ಜ್ಜೇಅ ವಸೂಣ ಠಾಣಮಿಣಮೋ ರಮ್ಮಂ ಸುಧಮ್ಮುಜ್ಜಲಂ ॥
(ಕಂ. 2–58)

ಭಾ : ಗಂಧರ್ವಾ ನ ಕಿಮತ್ರ ಸಂತಿ ನ ಖಲು ಕಿಂ ವಿದ್ಯಂತೇ ವಿದ್ಯಾಧರಾಃ ಕಿಂ ವಾ ಚಾರು ನ ಚಾರಣಾನಾಂ ಚ ಕುಲಂ ಜಯಂತಿ ನೋ ಕಿನ್ನರಾಃ । ಕಿಂ ನೇದಂ ಸಮನಸಾಂ ಧಾಮ ಕಿಮಹೋ ನಾಥೋ ಮಹೇಂದ್ರೋ ನಾಸ್ಯ ಸ್ವರ್ಗ ಏವ ವಸೂನಾಂ ಸ್ಥಾನಮಿದಂ ರಮ್ಯಂ ಸುಧರ್ಮೋಜ್ಜ್ವಲಮ್ ॥

**ಪ್ರಾತಃ ಕಾಲದ ವರ್ಣನೆ :**

ಹೋಸ್ಸಂತಿ ತುಹ ಮುಹ-ಲಚ್ಛಿಮುಚ್ಛಿ-ಸೋಹಾ-
ವಿಚ್ಛಾಇಅ-ಕಲ-ಣಿಅ-ಚಿಣ್ಹ-ಕಣ್ಹಮಾಣಂ ।
ಪೇಚ್ಛಂತೋ ಪಢಮಮಿಮೋ ತುಹ ಪ್ಪಬೋಹಾ
ಣಿಕ್ಕಂತೋ ಣಿಹುಅ-ಗಈ ಣಿಸಾಉ ಣಾಹೋ ॥ (ಕಂ. 3-4)

ಭಾ : ಭವಿಷ್ಯಂತೀಂ ತವ ಮುಖಲಕ್ಷ್ಮೀಮುಕ್ಷಿತೋಭಾ-ವಿಚ್ಛಾಯೀಕೃತ-ನಿಜ-ಚಿಹ್ನಕೃಷ್ಣಿಮಾನಮ್ । ಪಶ್ಯನ್ ಪ್ರಥಮಮಯಂ ತವ ಪ್ರಬೋಧಾನ್ನಿಷ್ಕ್ರಾಂತೋ ನಿಭೃತಗತಿರ್ನಿಶಾಯಾ ನಾಥಃ ॥

ನಿನ್ನ ಕಣ್ಣುಗಳ ಕಾಂತಿಯಿಂದ ತನ್ನ ಕಲೆಯನ್ನು ಮೀರಿಸಿದ ನಿನ್ನ ಮುಖದ ಸೌಂದರ್ಯವನ್ನು ನೋಡಿ ಚಂದ್ರನು ನಿನ್ನ (ಕೃಷ್ಣನ) ಎಚ್ಚರವಾಗುವ ಮೊದಲೇ ಗುಟ್ಟಾಗಿ ಹೊರಟು ಹೋದನು.

**ಉಷೆಯ ವರ್ಣನೆ :**

ಸಿಂಗಾರ-ಓಣಿಸ್ಸ ಕುಅಂಡ-ಜುಗ್ಗಂ ಣೀಲುಪ್ಪಲಾಣಂ ಜುಅಳಂ ಚ ಲೋಲಂ ।
ಪಿಕ್ಕಂ ಚ ಬಿಂಬೀಫಳಅಂ ವಹಂತೋ ವಿಹಾಇ ಚಂದೋ ವಿ-ಅಳಂಕ-ರಮ್ಮೋ ॥
(ಉ. 1-48)

ಭಾ : ಶೃಂಗಾರಯೋನೇಃ ಕೋದಂಡಯುಗ್ಮಂ ನೀಲೋತ್ಪಲಯೋರ್ಯುಗಲಂ ಚ ಲೋಲಂ । ಪಕ್ವಂ ಚ ಬಿಂಬೀಫಲಂ ವಹನ್ವಿಭಾತಿ ಚಂದ್ರೋ ವಿಕಲಂಕ-ರಮ್ಯಃ ।

ವಿಚ್ಛಿಣ್ಣ-ಮಜ್ಝಾ ವಿ ಸುವಣ್ಣ-ವೇಲ್ಲೀ ಕಿಮುತ್ತರದ್ಧೇಣ ಸಿಣಿದ್ಧ-ಸೋಹಾ । ವಹೇಇ ಪೀಣೇ ಕಳ-ಧೋಅ-ಕುಂಭೇ ರಂಭೇ ಅ ಹಂಹೋ ಅಪರದ್ಧಏಣಂ ॥ (ಉ. 1-49)

ಭಾ : ವಿಚ್ಛಿನ್ನಮಧ್ಯಾಽಪಿ ಸುವರ್ಣವಲ್ಲೀ ಕಿಮುತ್ತರಾರ್ಧೇನ ಸ್ನಿಗ್ಧಶೋಭಾ । ವಹತಿ ಪೀನೌ ಕಲಧೌತಕುಂಭೌ ರಂಭೇ ಚ ಹಂಹೋ ಅಪರಾರ್ಧೇನ ॥

**ಉಷಾನಿರುದ್ಧರನ್ನು ನೋಡುವ ಪರಸ್ತ್ರೀಯರ ಸಡಗರ :**

ಅಮುಂಚಿಅ ರುಣಕ್ಕಾರಿ ಎಕ್ಕ-ಪಾಅಮ್ಮಿ ಣೇಉರಂ ।
ಸುಣ್ಣೇಣಾವರ-ಪಾಏಣ ಸಿಗ್ಘಂ ಕಾ ವಿ ಪಧಾವಿಆ ॥ (ಉ. 4-5)

ಭಾ : ಅಮೋಚ್ಯ ರುಣತ್ಕಾರ್ಯೇಕಪಾದೇ ನೂಪುರಮ್ ।
ಶೂನ್ಯೇನಾಪರಪಾದೇನ ಶೀಘ್ರಂ ಕಾಽಪಿ ಪ್ರಧಾವಿತಾ ॥

ಅತ್ತಿ-ಣೇತ್ತ-ಸಮುತ್ತಿಣ್ಣೋ ವಿ ತಿ-ಣೇತ್ತ-ಸಿರ-ಸೇಹರೋ ।
ಅಮಿಅಸ್ಸ ಣಿವಾಸೋ ವಿ ಮಅಸ್ಸ ವಸಇ ಅಅಂ ॥ (ಉ. 4-55)

ಭಾ : ಅತ್ರಿ-ನೇತ್ರಸಮುತ್ಥೋಽಪಿ ತ್ರಿನೇತ್ರಶಿರಃ ಶೇಖರಃ ।
ಅಮೃತಸ್ಯ ನಿವಾಸೋಽಪಿ ಮೃಗಸ್ಯ ವಸತಿರಯಮ್ ॥

ಮಾ ದೇ ಮಹೇನ್ದುಣಾ ಹೋಜ್ಜ ದಿವಾ ವಿ ರಅಣಿ-ಬ್ಭಮೋ ।
ಇಅ ಏಸ ವಿರಿಂಚೇಣ ಅಂಕಿಓ ರಅಣೀ-ಅರೋ ॥ (ಉ. 4-57)

ಭಾ : ಮಾ ತೇ ಮುಖೇಂದುನಾ ಭೂದ್ದಿವಾಽಪಿ ರಜನೀಭ್ರಮಃ ।
ಇತ್ಯೇಷ ವಿರಿಂಚೇನಾಂಕಿತೋ ರಜನೀಕರಃ ॥

ಅಲ್ಲಲ್ಲಿ ಸ್ವಾರಸ್ಯಕರ ಉಕ್ತಿಗಳನ್ನು ಜೋಡಿಸಿದ್ದಾನೆ. ಉದಾ :—

ಅಹ ಜಂಪಇ ಸಾ ವಿಹಿಸ್ಸ ಸತ್ತೀ
ಬಲಿಅಂ ಜಂಭಇ ವಾಮಿಆ ಮಮುಸ್ಸಿಂ ।
ಹಿಅಅಮ್ಮಿ ಪಸಿದ್ಧಮಿತ್ಥಿಆಣಂ
ಮಹ ಗತ್ತೇ ವಿ ಕುಣೇಅ ವಂಕದಂ ಜಾ ॥ (ಕಂ. 2-14)

ಭಾ : ಅಥ ಅಜಲ್ಪತ್ ಸಾ ವಿಧೇಃ ಶಕ್ತಿರ್ಬಲವಜ್ಜೃಂಭತೇ ವಾಮಾಮಯಿ ।
ಹೃದಯೇ ಪ್ರಸಿದ್ಧಾಂ ಸ್ತ್ರೀಣಾಂ ಮಮ ಗಾತ್ರೇಽಪ್ಯಕರೋತ್ ವಕ್ರತಾಂ
ಯಾ ॥

ಆಣಾಇಓ ಧಣುಹ-ಜಣ್ಣ-ಛಲೇಣ ಏಸೋ
ಕಂಸೇಣ ತೇಣ ಧುವಮತ್ತ-ಣಿಬಂಹಣತ್ಥಂ ।
ಸಾಹಗ್ಗ-ಸಂಘರಿಸ-ಸಂಘಡಿಓ ಹಿ ವಣ್ಹೀ
ಸುಣ್ಣೀ-ಕರೇಇ ತರಸ ಚ್ಚಿಅ ಕಿಂ ಣ ರುಕ್ಖಂ ॥ (ಕಂ. 4-45)

ಭಾ : ಆನಾಯಿತೋ ಧನುರ್ಯಜ್ಞಚ್ಛಲೇನೈಷ ಕಂಸೇನ ತೇನ ಧ್ರುವಮಾತ್ಮನಿ-
ಬರ್ಹಣಾರ್ಥಮ್ । ಶಾಖಾಗ್ರಸಂಘರ್ಷಸಂಘಟಿತೋ ಹಿ ವಹ್ನಿಃ ಶೂನ್ಯೀ-
ಕರೋತಿ ತರಸ್ಯೈವ ಹಿ ಕಿಂ ನ ವೃಕ್ಷಮ್ ॥

ಜಇ ಮಅ-ಸಅಹೂ ಉವೇಕ್ಖಿದೋ ಸೋ ಉವರಿ ಖಳಾಣ ಹಿ ಹೋಜ್ಜ
ಭೂರಿ-ದೋಸೋ ॥ (ಉ. 3-47cd)

ಭಾ : ಯದಿ ಮದಶ್ವಯಥುರುಪೇಕ್ಷಿತಃ ಸ ಉಪರಿ ಖಲಾನಾಂ ಹಿ ಭವೇದ್ಭೂರಿ-
ದೋಷಃ ॥

ಇತ್ಥಿಅ-ಗುಣ-ಸಾಮಗ್ಗೀ ಅಚ್ಚಇಳ್ಳಮ್ಮಿ ವಳ್ಳಹೇ ।
ರತ್ತಾ ವಿ ಣಿ-ಪ್ಫಳ ಚ್ಚೇಅ ಕಂದಾರಮ್ಮಿ ವ ಕೋಮುಈ ॥ (ಉ. 4-25)

ಭಾ : ಸ್ತ್ರೀಗುಣಸಾಮಗ್ರ್ಯವಿದಗ್ಧೇ ವಲ್ಲಭೇ ।
ರಕ್ತಾಯಾಂ ನಿಷ್ಫಲೈವ ಕಾಂತಾರ ಇವ ಕೌಮುದೀ ॥

ಸಾವಜ್ಜಾ ಹೋಇ ವಿಜ್ಜಾ ವಿ ಅ-ವಿಣೀದೇಣ ಗಹ್ಣಿಆ ।
ಅ-ರಮ್ಮಾ ಹೋಇ ರಮ್ಮಾ ವಿ ದು-ಬ್ಭಏಣೋಢಿಅಂಗಣಾ ॥ (ಉ. 4-31)

ಛಾ : ಸಾವದ್ಯಾ ಭವತಿ ವಿದ್ಯಾऽಪ್ಯವಿನೀತೇನ ಗೃಹೀತಾ ।
ಅರಮ್ಯಾ ಭವತಿ ರಮ್ಯಾऽಪಿ ದುರ್ಭಗೇಣೋಢಾऽಂಗನಾ ॥

ಮಧುರಾವರ್ಣನೆ ಮಾಡುವಾಗ ಆ ನಗರದಲ್ಲಿ ವ್ಯಾಕರಣ ಚರ್ಚೆ ನಡೆಯುತ್ತಿತ್ತೆಂದು ಯಣ್ ಸಂಧಿ ಸಂಬನ್ಧ ಸೂತ್ರಗಳಿಗೆ ಸೂಚನೆಗಳನ್ನಳವಡಿಸಿ ಒಂದು ಪದ್ಯ ಬರೆದಿದ್ದಾನೆ :

ಪರದೋ ಸುಣ ಥಾಣಿಕಪ್ಪ-ಭಾವಾ
ವಿಹಲಂ ಪಚ್ಚಅ-ಲಕ್ಖಣಸ್ಸ ಸುತ್ತಂ ।
ಸಹಲಂ ತವುಲಲ್ಲಅವ್ವಿ ಕಜ್ಜೇ
ಇಅ ವಯ್ಯಾಅರಣಾಣ ವಾಅ-ಘೋಸಂ ॥ (ಕ. 2-56)

ಛಾ : ಪರತಃ ಶೃಣು ಸ್ಥಾನಿವದ್ಭಾವಾದ್ವಿಫಲಂ ಪ್ರತ್ಯಯ ಲಕ್ಷಣಸ್ಯ ಸೂತ್ರಮ್ । ಸಫಲಂ ತದಲಾಶ್ರಯೇ ಕಾರ್ಯೇ ಇತಿ ವೈಯಾಕರಣಾನಾಂ ವಾದ ಘೋಷಮ್ ॥

ಇಲ್ಲಿ ಸೂಚಿತ ಪಾಣಿನಿ ಸೂತ್ರಗಳು—ಅನಚಿ-ಚ ; ಸ್ಥಾನಿವದಾದೇಶೋ ಅನಲ್ವಿಧೌ.

ಛಂದಸ್ :—

"ಕಂಸವಹೊ" ಕಾವ್ಯದ 232 ಪದ್ಯಗಳು 22 ವೃತ್ತಗಳಲ್ಲಿವೆ. ಇವುಗಳಲ್ಲಿ ವಂಶಸ್ಥ (60), ವಸಂತಮಾಲಿಕಾ (60), ಮತ್ತು ಪ್ರಹರ್ಷಿಣೀ (56) ಪ್ರಧಾನವಾಗಿವೆ. "ಉಸಾಣಿರುದ್ಧ"ದ 295 ಪದ್ಯಗಳಲ್ಲಿ 14 ವೃತ್ತಗಳು ಮಾತ್ರ. ಉಪಜಾತಿ (76), ವಿಯೋಗಿನೀ (66), ಪುಷ್ಪಿತಾಗ್ರಾ (60) ಮತ್ತು ಅನುಷ್ಟುಪ್ (72) ಪ್ರಧಾನವಾಗಿವೆ. ಸ್ರಗ್ಧರಾ, ಹರಿಣೀ, ಪೃಥ್ವೀಯಂಥ ದೀರ್ಘವೃತ್ತಗಳೂ ಇವೆ. ಇಲ್ಲಿಯೂ ಪ್ರಾಕೃತ ಛಂದಸ್ಸುಗಳನ್ನು ಪ್ರಯೋಗಿಸದೆ ಸಂಸ್ಕೃತ ಕಾವ್ಯಗಳಲ್ಲಿ ಪ್ರಸಿದ್ಧವಾದ ಛಂದೋಪ್ರಕಾರಗಳನ್ನು ಬಳಸಿರುವುದು ಗಮನಾರ್ಹ.

ಭಾಷೆ :—ರಾಮನ ಭಾಷೆ ಸರಾಗವಾಗಿ ಹರಿಯುತ್ತದೆ. ಅನೇಕ ಪದ್ಯಗಳಲ್ಲಿ ಉದ್ದುದ್ದ ಸಮಾಸಗಳನ್ನು ಜೋಡಿಸಿದ್ದಾನೆ. ಇದನ್ನು ಸಂಸ್ಕೃತ ಕಾವ್ಯಗಳ ಪ್ರಭಾವ ಎನ್ನಬೇಕು. ಒಂದೆರಡು ಉದಾಹರಣೆಗಳನ್ನು ನೋಡಬಹುದು.

ಸಜ್ಜೋ ಗಜ್ಜಂತ-ವಿಜ್ಜುಜ್ಜಲ-ಜಲಅ-ಘಡಾ-ಗಬ್ಭ-ಪಬ್ಭಾರ-ಘೋರ-
ಪ್ಪಬ್ಭಟ್ಠಂ ಪಚ್ಚವಿಟ್ಠಂ ಭುಅ-ಭುವಣ-ಅಲಂ ಪಿಟ್ಠಿಮಬ್ಭ ಪಡಂತಿ ।
ಗೋವಾಲೋ ಏಸ ಗೋವದ್ಧಣಮಹಿಲವರಂ ತಕ್ಖಣಂ ಉಕ್ಖಣಂತೋ ।
ಛತ್ತಂ ಕಾಊಣ ಘೇತ್ತೂಣ ಅ ಕರ-ಅಮಲೇ ಡಿಂಭಿಡಿ ರುಂಭಏ ಣಂ ॥
(ಕಂ. 4-35)

ಛಾ : ಸದ್ಯೋ ಗರ್ಜದ್ವಿದ್ಯುದುಜ್ಜ್ವಲಜಲದಘಟಾಗರ್ಭಪ್ರಾಗ್ಭಾರಸ್ಥೂಲಪ್ರಭ್ರಷ್ಟಾಂ ಸ್ಪೃಷ್ಟ-ವಿಷ್ಟಂಭಿತಭುವನತಲಾಂ ವೃಷ್ಟಿಮಭ್ಯಾಪತಂತೀಮ್ । ಗೋಪಾಲ ಏಷ ಗೋವರ್ಧನಮಚಲವರಂ ತತ್ಕ್ಷಣಮುತ್ಪನನ್ ಛತ್ರಂ ಕೃತ್ವಾ ಗೃಹೀತ್ವಾ ಚ ಕರಕಮಲೇ ಡಿಂಭಕೋ ಅತೌತ್ಸೀತ್ ಏನಾಮ್ ॥

ಪಾಲೇಅಅಲ-ಮೋಲಿ-ಘೋಲಿರ-ಮಹಾ-ಕಲ್ಲೋಲ-ಹಲ್ಲೋಹಲ-
ಪ್ಪಾರುಡ್ಢಾಮರ-ಚಾರು-ಚಾರಣ-ಧುಣೀ-ಸಚ್ಛಾಹಿ ವಚ್ಛಾ-ಚಿರಂ ।
ತುಮ್ಹೇ ಜೀವಹ ಪುಣ್ಣಿಮಾಮಅ-ಮಊಹುಣ್ಣಿದ್ದ-ಜೋಣ್ಹಾ-ಝರೀ-
ಪಂಡಿಚ್ಚ-ಚ್ಛಿಉರ-ಚ್ಛಈಹಿ ಮಹಿಅ ಕಿತ್ತೀಹಿ ಧತ್ತೀಅಲೇ ॥ (ಕಂ. 4–47)

ಛಾ : ಪ್ರಾಲೇಯಾಚಲಮೌಲಿಘೂರ್ಣನಶೀಲಮಹಾಕಲ್ಲೋಲಹಲ್ಲೋಹಲ ಸ್ಫಾರೋಡ್ಢಾಮರ-ಚಾರುಚಾರಣಧುನೀಸ್ವಚ್ಛಾಭಿರ್ವತ್ಸೌ ಚಿರಮ್ । ಯುವಾಂ ಜೀವತಂ ಪೂರ್ಣಿಮಾಮೃತಮಯೂಖೋನ್ನಿದ್ರಜ್ಯೋತ್ಸ್ನಾ-ಝರೀಪಾಂಡಿತ್ಯಚ್ಛಿದುರಚ್ಛವಿಭಿರ್ಮಹಿತೌ ಕೀರ್ತಿಭಿರ್ಧಾತ್ರೀತಲೇ ॥

ತುರಓಹ-ಖುರಗ್ಗ-ವಿಕ್ಖಅ-ಕ್ಖಿದಿ-ಪಟ್ಠುಚ್ಛಲಿದೇಹಿ ರೇಣುಹಿಂ ।
ಪರಿದೋ-ಹರಿದಂಗಣಾ-ಘಣ-ತ್ಥಣ-ಉಂಭಾವರಣಂಬರಾ ಇದಂ ॥
(ಉ. 2–16)

ಛಾ : ತುರಗೌಘಖುರಾಗ್ರವಿಕ್ಷತಕ್ಷಿತಿಪೃಷ್ಠೋಚ್ಛಲಿತೈ ರೇಣುಭಿಃ ।
ಪರಿತೋ ಹರಿದಂಗನಾಘನಸ್ತನಕುಂಭಾವರಣಾಂಬರಾಯಿತಮ್ ॥

ವಅ-ಸುಂದರೀ-ಘಣ-ಥಣಂಕ-ಕುಂಕುಮ-ಪ್ಫುಸಣಾ-ಪಿಸಂಗ-ವಣಮಾಳ
-ಭಾರಿಣೋ। ತುಹ ದೇವಈ-ಸುಅ ಸು-ಅಮ್ಮ-ಣಿಮ್ಮಳೀ-ಕಅ-ಜಮ್ಮ-
ಜಮ್ಮಿ-ಮಣ-ವಾಸಿಣೋ ಣಮೋ ॥ (ಉ. 2–69)

ಛಾ : ವ್ರಜಸುಂದರೀಘನಸ್ತನಾಂಕಕುಂಕುಮಮಾರ್ಜನಾ ಪಿಶಂಗವನಮಾಲ ಭಾರಿಣೇ । ತುಭ್ಯಂ ದೇವಕೀಸುತ ಸುಕರ್ಮನಿರ್ಮಲೀಕೃತಜನ್ಮಜನ್ಮಿ-ಮನೋವಾಸಿನೇ ನಮಃ ॥

ಇನ್ನು ರಾಮನ ಪ್ರಾಕೃತದ ಬಗ್ಗೆ : 13 ಪುಟಗಳಷ್ಟು ವಿವರವಾಗಿ ಡಾ॥ ಆ. ನೇ. ಉಪಾಧ್ಯೆ ತಮ್ಮ "ಕಂಸವಹೋ" ಪೀಠಿಕೆಯಲ್ಲಿ ಬರೆದಿದ್ದಾರೆ. ಸಂಗ್ರಹವಾಗಿ ಅವರ ಅಭಿಪ್ರಾಯವನ್ನು ಹೀಗೆ ಹೇಳಬಹುದು:

(1) ರಾಮ ಹೆಚ್ಚಾಗಿ ವರರುಚಿಯ ಪ್ರಾಕೃತ ಪ್ರಕಾಶವನ್ನು ಅನುಸರಿಸುತ್ತಾನೆ. (2) ನಾಟಕಗಳ ಗದ್ಯಗಳಲ್ಲಿರುವ ಶಬ್ದಗಳನ್ನೂ ಶಬ್ದರೂಪಗಳನ್ನೂ

ಕಾಣಬಹುದು. (3) ಸಿದ್ಧಸಂಸ್ಕೃತ ಪದಗಳ ನೇರ ಪ್ರಾಕೃತ ರೂಪಗಳಾಗಿರುವ ಅನೇಕ ಪದಗಳು ಇಲ್ಲಿವೆ. (4) ಹಿಂದಿನ ಪ್ರಾಕೃತ ಸಾಹಿತ್ಯದಲ್ಲಿ ಕಾಣಸಿಗದ ಕೆಲವೊಂದು ಶಬ್ದಗಳನ್ನೂ ಶಬ್ದರೂಪಗಳನ್ನೂ ಬಳಸಲಾಗಿದೆ. (5) ಸಂಸ್ಕೃತ ಶಬ್ದಗಳು ಆರಂಭದಲ್ಲಿ ಸಂಯುಕ್ತಾಕ್ಷರವಿದ್ದು ಅವುಗಳ ಪ್ರಾಕೃತ ರೂಪದಲ್ಲಿಯೂ ಸಂಯುಕ್ತಾಕ್ಷರವನ್ನು ನಿರೀಕ್ಷಿಸಬಹುದಾದರೂ ಸಾಮಾನ್ಯವಾಗಿ ಒಂದು ವ್ಯಂಜನ ಲೋಪವಾಗಿರುತ್ತದೆ. ಆದರೆ ರಾಮನು ಪ್ರಯೋಗಿಸಿರುವಂತೆ ಸಂಯುಕ್ತ ವ್ಯಂಜನಗಳೇ ಇಲ್ಲಿವೆ. (6) ಸಂಯುಕ್ತ ವ್ಯಂಜನ ಆದಿಯಲ್ಲಿಲ್ಲವಾದರೂ ಕೆಲವೆಡೆ ಸಂಯುಕ್ತ ವ್ಯಂಜನವನ್ನು ರಾಮ ಪ್ರಯೋಗಿಸುತ್ತಾನೆ. ಬಹುಶಃ ಇದು ಛಂದಸ್ಸಿನ ಕಾರಣದಿಂದ ಇರಬಹುದು. ರಾಮನ ಪ್ರಾಕೃತವು ಮಹಾರಾಷ್ಟ್ರೀ ; ಆದರೆ ಶೌರಸೇನಿಯ ಲಕ್ಷಣವನ್ನು ಒಳಗೊಂಡಿದೆ ಎಂದು ಉಪಾಧ್ಯೆ ನಿಶ್ಚಯಿಸಿದ್ದಾರೆ. (ಪು. xlvi)

ಒಟ್ಟಿನಲ್ಲಿ ಚಿಕ್ಕವಾದರೂ ರಸಧ್ವನಿ ಭಾವಗಳ ಗಾಢತೆಯಿಲ್ಲದಿದ್ದರೂ ತನ್ನದೇ ಆದ ಸ್ವಾರಸ್ಯವುಳ್ಳ ಪ್ರಾಕೃತಕಾವ್ಯಗಳನ್ನು 18ನೇ ಶತಮಾನದಲ್ಲಿ ರಚಿಸಿ ಕೆಲವೇ ಪ್ರಾಕೃತಭಾಷಾ ಕವಿಗಳ ಸಾಲಿಗೆ ಕೇರಳದ ರಾಮಪಾಣಿವಾದನೂ ಸೇರಿದ್ದಾನೆ.

— o —

ಹೆಚ್ಚಿನ ವಿವರಗಳಿಗೆ ನೋಡಿರಿ :

ರಾಜಾ, ಕೆ. ಕುಂಜುಣ್ಣಿ : ಕಾಂಟ್ರಿಬ್ಯೂಷನ್ ಆಫ್ ಕೇರಳ ಟು ಸಂಸ್ಕೃತ ಲಿಟರೇಚರ್, ಮದ್ರಾಸ್ : ಮದ್ರಾಸ್ ವಿಶ್ವವಿದ್ಯಾನಿಲಯ, 1980 (ದ್ವಿ) ; ಪುಟಗಳು 183-195) ಅಧ್ಯಾಯ 9 : ರಾಮಪಾಣಿವಾದ.

# ಯಕ್ಷಗಾನ ಕವಿ ಪಾರ್ತಿಸುಬ್ಬ ಮತ್ತು ಅವನ ಕೃತಿಗಳು

— **ತಾಳ್ತಜೆ ಕೃಷ್ಣಭಟ್ಟ**

**ಪಾರ್ತಿ**ಸುಬ್ಬನು "ಯಕ್ಷಗಾನ ವಾಲ್ಮೀಕಿ" ಎಂದು ಪ್ರಸಿದ್ಧನಾಗಿದ್ದಾನೆ. ಯಕ್ಷಗಾನದಲ್ಲಿ ರಾಮಾಯಣದ ಕಥೆಗಳನ್ನು ಅವನೇ ಮೊದಲಿಗೆ ಬರೆದುದು ಇದಕ್ಕೆ ಕಾರಣ. ಇದುವರೆಗೆ ಬೇರೆ ಯಾರೂ ಅವನಂತೆ ಕ್ರಮದಿಂದ ಕಥೆಗಳನ್ನು ಪ್ರಸಂಗಗಳಾಗಿ ರಚಿಸಿದವರಿಲ್ಲ. ಅಲ್ಲದೆ ಆತನು ಹೆಚ್ಚಾಗಿ ತನ್ನ ಪ್ರಸಂಗಗಳಿಗೆ ವಾಲ್ಮೀಕಿ ಋಷಿಯ ಶ್ಲೋಕಗಳನ್ನೇ ಆಧಾರವಾಗಿಟ್ಟು ಅವುಗಳನ್ನೇ ಸೊಗಸಾಗಿ ಭಾಷಾಂತರಿಸಿದ್ದೂ ಆತನಿಗೆ ವಾಲ್ಮೀಕಿ ಬಿರುದು ತರಲು ಕಾರಣವಾಗಿದೆ.

ಆತನ ಕೃತಿಗಳು : ರಾಮಾಯಣದಲ್ಲಿ ಪುತ್ರಕಾಮೇಷ್ಟಿ, ಪಟ್ಟಾಭಿಷೇಕ, ಪಂಚವಟಿ, ವಾಲಿಸಂಹಾರ, ಉಂಗುರಸಂಧಿ, ಅಂಗದ ಸಂಧಾನ—ಇವಿಷ್ಟು ಪಾರ್ತಿಸುಬ್ಬನ ಕೃತಿಗಳು ಎಂಬುದರಲ್ಲಿ ಸಂದೇಹವಿಲ್ಲ. "ಕುಂಭಕರ್ಣನ ಕಾಳಗ" ಎಂಬ ಒಂದು ಸಂಕ್ಷೇಪದ ಪ್ರಸಂಗವೂ ಇದೆ. ಇದು ಆತನದೇ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. "ಕುಶಲವರ ಕಾಳಗ" ಎಂಬ ಇನ್ನೊಂದು ಕೃತಿಯೂ ಆತನದೆಂದೂ ಅದು ಜೈಮಿನಿ ಭಾರತ (ಲಕ್ಷ್ಮೀಶ ಭಾರತ)ದ ಛಾಯಾನುವಾದವಾಗಿದೆಯೆಂದೂ ಊಹಿಸಲಾಗಿದೆ.

ನನ್ನಲ್ಲಿರುವ ತಾಳೆಗರಿಯಲ್ಲಿ ಬರೆಯಲ್ಪಟ್ಟ ರಾಮಾಯಣ ಗ್ರಂಥದ ಪ್ರಕಾರ ಸುಬ್ಬನು ಅಂಗದ ಸಂಧಾನದಿಂದ ಮುಂದೆ ರಾಮಾಯಣದಲ್ಲಿ ಪ್ರಸಂಗಗಳನ್ನು ಬರೆದಿಲ್ಲ. ಏಕೆಂದರೆ ಆತನು ತನ್ನ ಪ್ರಸಂಗದ ಕೊನೆಯಲ್ಲಿ "ಅಂತು ಸಂಧಿ .... ಕ್ಕಂ ಪದ .... ಕ್ಕೆ ಮಂಗಳ ಮಹಾ ॥" ಎಂದೂ "ಕುಶಲವರು ಕೇಳಿ .... ಉಂಗುರ ಕೊಟ್ಟಾಯ್ತು" ಎಂಬಲ್ಲಿಗೆ ಸಂಧಿ ಪರಿಸಮಾಪ್ತಿ ಎಂದೂ ಪ್ರತಿ ಸಂಧಿಯಲ್ಲೂ ಬರೆದಿದ್ದಾನೆ. ಅಂಗದ ಸಂಧಾನದಲ್ಲಿ ಆ ಸಂಧಾನದ ಮುಂದಿನ ಭಾಗಗಳನ್ನು ಬರೆಯುವ ಮನಸ್ಸು ಆತನಿಗಿರುತ್ತಿದ್ದರೆ ಹಾಗೆಯೇ ಸಂಧಿ ಪರಿಸಮಾಪ್ತಿ ಮಾಡಬಹುದಿತ್ತು. ಹಾಗೆ ಮಾಡದೆ ಅಂಗದನ ಸಂಧಾನ ವಿಫಲವಾದೊಡನೆ ಮಹಾಯುದ್ಧವೇ ನಡೆಯುತ್ತದೆ. ಮತ್ತೆ ಕೆಲವೇ ಪದ್ಯಗಳನ್ನು ಬರೆದು ಕಥೆ ಸಮಾಪ್ತಿ ಮಾಡಿ ರಾಮನ ಅಯೋಧ್ಯಾಗಮನ-ಪಟ್ಟಾಭಿಷೇಕಗಳ ವಿವರಕ್ಕೆ ಬರುತ್ತಾನೆ. ಆದ್ದರಿಂದ ಆತನಿಗೆ ರಾಮಾಯಣದಲ್ಲಿ ಮತ್ತೆ ಬರೆಯುವ ಕುತೂಹಲವಿದ್ದಿರಲಿಲ್ಲವೆಂದು ತೋರುತ್ತದೆ.

ಕುಶಲವರ ಕಾಳಗವು ಆತನದೇ ಎಂದು ಹೇಳುವಂತಿಲ್ಲ. ಅದರಲ್ಲಿಯ ಪದ್ಯಗಳಂತೂ ಲಕ್ಷ್ಮೀಶನ ಛಾಯಾನುವಾದಗಳೇ ಆಗಿವೆ ಎಂಬುದರಲ್ಲಿ ವಾದವಿಲ್ಲ. ಬಾಲಲೀಲೆ, ಬಿಲ್ಲಹಬ್ಬ ಮಾತ್ರವಲ್ಲದೆ ಕೃಷ್ಣಪಾರಿಜಾತ ಕೃತಿಗಳೂ ಪಾರ್ತಿಸುಬ್ಬನವು.

ಆದರೆ ಇಂದು ಪ್ರಚಲಿತವಿರುವ ಪಾರಿಜಾತ ಪ್ರಸಂಗವು ಬ್ರಹ್ಮಾವರ ಸುಬ್ಬನದು. ಪಾರ್ತಿಸುಬ್ಬ ಕವಿಯ ಪಾರಿಜಾತ ಪ್ರಸಂಗವು ಇಂದು ಮಾಂಬಾಡಿ ಭಾಗವತರಿಗೆ ಬರುತ್ತದೆ.* ಆದರೆ ಈ ಇಬ್ಬರು ಕವಿಗಳ ಮುಖ್ಯಪದ್ಯಗಳನ್ನು ಸಂಕಲಿಸಿ, ಒಂದೇ ಪುಸ್ತಕವಾಗಿಸಿದ್ದರಿಂದ ಅವನ್ನಿಂದು ಪ್ರತ್ಯೇಕಿಸಿ ಹೇಳುವುದು ಕಷ್ಟ.

**ಪಾರ್ತಿಸುಬ್ಬನ ಕಾಲ :** ಪಾರ್ತಿಸುಬ್ಬನ ಕಾಲ ನಿರ್ಣಯ ಮಾಡುವುದಕ್ಕೆ ಸರಿಯಾದ ಆಧಾರಗಳೇನೂ ದೊರೆಯುವುದಿಲ್ಲ. ಬೇರೆ ಬೇರೆ ವಿದ್ವಾಂಸರು ವಿಮರ್ಶೆ ಮಾಡಿ ಬೇರೆ ಬೇರೆ ಕಾಲಗಳನ್ನು ಸೂಚಿಸಿದ್ದಾರೆ. ಅವೆಲ್ಲವುಗಳನ್ನು ಅಭ್ಯಸಿಸಿ, ವಿಮರ್ಶಿಸಿ ಶ್ರೀ ಕುಕ್ಕಿಲ ಕೃಷ್ಣಭಟ್ಟರು ಕೇರಳದ ಕಥಕ್ಕಳಿ ರಾಮಾಯಣದ ಹಲವು ಪದ್ಯಗಳನ್ನು ಸುಬ್ಬನ ಕೃತಿಗಳಲ್ಲಿ ಕಂಡುಹಿಡಿದು, ಅವನ ಕಾಲವು 1590ರಿಂದ 1620ರ ತನಕವೆಂದು ದೃಢಪಡಿಸಿದ್ದಾರೆ. ಶ್ರೀ ಕಯ್ಯಾರ ಕಿಞ್ಞಣ್ಣ ರೈಯವರು ತಮ್ಮೊಂದು ಹೇಳಿಕೆಯಲ್ಲಿ ಕೇರಳದ ಕಥಕ್ಕಳಿ ರಾಮಾಯಣ ಬರೆದ ಕವಿಯು ಬಾಲ್ಯದಲ್ಲಿ ಮೂಕನಾಗಿದ್ದನೆಂದೂ ಆತನನ್ನು ಕುಂಬಳೆಗೆ ಆತನ ಹಿರಿಯರು ಕರೆತಂದು ಗೋಪಾಲಕೃಷ್ಣನ ಸನ್ನಿಧಿಗೊಪ್ಪಿಸಿದರೆಂದೂ, ಆತನಿಗೆ ಪಾರ್ತಿಸುಬ್ಬನೇ ಕೃಷ್ಣಭಕ್ತಿಯಿಂದ ಬಾಯಿ ಬರಿಸಿದನೆಂದೂ ಕೇರಳೀಯ ವಿದ್ವಾಂಸರೇ ಹೇಳಿದ ಕಥೆಯನ್ನು ಉದಾಹರಿಸಿ, ಸುಬ್ಬನ ಕೃತಿಗಳೇ ಕಥಕ್ಕಳಿ ರಾಮಾಯಣಕ್ಕೆ ಮೂಲಸ್ರೋತವೆಂಬುದನ್ನು ಸಮರ್ಥಿಸಿದ್ದಾರೆ. ಇದು ನಿಜವಾದರೆ, ಅವನ ಕಾಲವು ಮತ್ತೆ 50 ವರ್ಷಗಳಾದರೂ ಹಿಂದಕ್ಕೆ ಹೋಗುತ್ತದೆ.

ಸುಬ್ಬನು "ಗಜಸೋಹಿ" ಎಂಬ ಪ್ರಸಂಗ ಬರೆದಿದ್ದಾನೆ ಎಂಬುದರಲ್ಲಿ ವಾದವಿಲ್ಲ. ಇದು ಆತನ ಮೊದಲಕೃತಿ. ಇಲ್ಲಿಯ ಪದಬಂಧಗಳು ಆತನ ಉಳಿದ ಕೃತಿಗಳಿಗಿಂತ ತೀರಾ ಹಗುರವಾದವುಗಳು. ಈ ಕೃತಿಯಲ್ಲಿ ಆತನು ಕುಂಬಳೆ ಅರಸು ಜಯಸಿಂಹನನ್ನು ಹೆಸರಿತ್ತಿ, ಅವನೂ ಗಜಸೋಹಿ ಉತ್ಸವದ ಮೆರವಣಿಗೆಯಲ್ಲಿ ಪಾಲ್ಗೊಂಡುದನ್ನು ವರ್ಣಿಸಿದ್ದಾನೆ. ಆ ಪದ್ಯವು ಹೀಗಿದೆ:

ರಾಗ: ಘಂಟಾರವ ಜಂಪೆ ತಾಳ

ಗಜದ ಮುಂಭಾಗದಲಿ ಆಜಸುತನು ಬರುತಿರಲು
ಅಜನ ಪಿತ ಬಲಭಾಗದಲ್ಲಿ ಬರುತಿರಲು ||
....
ಅಂಗ ವಂಗ ಕಳಿಂಗ ತುಂಗ ಕುಂತೀಭೋಜ
ಸಿಂಗರಾಯರು ಸಹಿತ ಮುಂಗಡೆಯೊಳಿರಲು ||

ಸಿಂಗ ಭೂಪಾಲನನ್ನು ಸಿಂಗರಾಯ ಇಲ್ಲವೆ ಶಿಂಗರಾಯ, ಶಿಂಗರಸು ಮುಂತಾಗಿ ಕರೆಯುತ್ತಿದ್ದುದು ಜನಜನಿತವೂ ಇದೆ. ಅದೂ ಅಲ್ಲದೆ ಈ ಸಿಂಗಭೂಪಾಲನೇ "ಕವಿ

* ಇವರು ಇತ್ತೀಚೆ ದಿವಂಗತರು.

ಸಿಂಹ" ಹೆಸರಿನಿಂದಲೂ ಪ್ರಖ್ಯಾತನಾಗಿದ್ದು, ಭರತನ ನಾಟ್ಯಶಾಸ್ತ್ರವನ್ನು ಕನ್ನಡಿಸಿದ್ದಾನೆ. ಆ ಕನ್ನಡಿಸಿದ ಕೃತಿ "ಲಾಸ್ಯರಂಜನೀ" ಎಂದು ಪ್ರಸಿದ್ಧವಾಗಿದೆ. ಸುಬ್ಬನು ಈ ಗ್ರಂಥದಿಂದಲೇ "ಸಭಾಲಕ್ಷಣ"ವೆಂಬ ಯಕ್ಷಗಾನ ಲಕ್ಷಣ ಗ್ರಂಥಕ್ಕೆ ಆಕರವನ್ನು ಪಡೆದಿದ್ದಾನೆಂಬುದನ್ನು ಮುಂದೆ ಆಧಾರಯುಕ್ತವಾಗಿ ಮಂಡಿಸಲಿದ್ದೇನೆ.

## ಸುಬ್ಬನ ಕೃತಿಗಳು ಧ್ವನಿಯುಕ್ತ

ಐರಾವತ ಪ್ರಸಂಗ: ಈ ಪ್ರಸಂಗಕ್ಕೆ ಆಕರಗ್ರಂಥವು ಸದ್ಯ ದೊರೆಯುವುದಿಲ್ಲ. ಬಹಳ ಹಿಂದೆ ಮೈಸೂರು ಆಸ್ಥಾನದಿಂದ ಒಂದು ಭಾರತ (ಕುಮಾರವ್ಯಾಸ ಭಾರತ) ಕಲ್ಲಚ್ಚಿನಲ್ಲಿ ಮುದ್ರಿತವಾಗಿತ್ತಂತೆ. ಚಿಕ್ಕಂದಿನಲ್ಲಿ ನಾನೂ "ಐರಾವತ" ಎಂಬ ಒಂದು ನಾಟಕ ನೋಡಿದ್ದೇನೆ. ಅಂತೂ ಅದೊಂದು ವಿಚಿತ್ರ ಕಥೆ. ಈ ಪ್ರಸಂಗ ನಿರ್ಮಾಣ ಕಾಲದಲ್ಲಿ ಸುಬ್ಬನು ಕವಿಯಾಗಿದ್ದುದು ಮಾತ್ರವಲ್ಲ, ಕುಂಬಳೆ ಅರಸನಲ್ಲಿ ಕಡುಗಲಿ ದಂಡನಾಯಕನೂ ಇದ್ದಿರಬೇಕು. ಜನರ ಹೊಗಳಿಕೆಗೆ ಪಾತ್ರನಾಗಿದ್ದಿರಬೇಕು. ಅವನ ತಾಯಿ ಪಾರ್ವತಿಯು ಕುರಿತಾಗಿಯೇ ಈ ಪ್ರಸಂಗ ರಚನೆಯಾಗಿದೆ ಎಂಬುದು ನಿಸ್ಸಂದೇಹ.

ಸುಬ್ಬನ ತಾಯಿ ಸ್ಥಾನಿಕ ಸಂಪ್ರದಾಯದವಳು. ತಂದೆ ವೆಂಕಪ್ಪನು ಆಕೆಯನ್ನು ವರಿಸಿದುದು ಆ ಕಾಲದ ಮಡಿವಂತ ಹವ್ಯಕರಲ್ಲಿ ಕೋಲಾಹಲವನ್ನೆಬ್ಬಿಸಿತ್ತು. ಆದರೂ ಆಕೆಯೂ ಬ್ರಾಹ್ಮಣ ವರ್ಗದವಳೇ ಆದುದರಿಂದ ಯಾವ ಜಾತಿಕಟ್ಟನ್ನೂ ಮಾಡುವುದು ಅವರಿಂದಾಗಲಿಲ್ಲ. ವೆಂಕಪ್ಪನನ್ನು ಕುಟುಂಬದಿಂದ ಹೊರಹಾಕಲಾಗಿತ್ತು. ಆತನು ಕುಂಬಳೆಯಲ್ಲಿ ಪಾರ್ವತಿಯ ಮನೆಯಲ್ಲಿ ಇರುತ್ತಿದ್ದನು. ಅವನು ಕೇರಳದಲ್ಲಿ ಚೆರುಗುನ್ನ (ತಿರುವಗ್ರ) ಅನ್ನಪೂರ್ಣೇಶ್ವರೀ ದೇವಾಲಯದಲ್ಲಿ ಅರ್ಚಕ ವೃತ್ತಿಯಲ್ಲಿದ್ದನು. ಪಾರ್ವತಿಯನ್ನೂ ಸುಬ್ಬನನ್ನೂ ಕುಟುಂಬದ ಮನೆಗೆ ಪೂಜಾದಿ ಕಾರ್ಯಗಳಿಗೆ ಸುಬ್ಬನ ದೊಡ್ಡಪ್ಪ-ಚಿಕ್ಕಪ್ಪಂದಿರಾಗಲಿ ಅಜ್ಜ ಮುತ್ತುಭಟ್ಟರಾಗಲೀ ಕರೆಯುತ್ತಿರಲಿಲ್ಲ. ಅಂತಹ ಒಂದು ಸಂದರ್ಭ. ಕುಟುಂಬದ ಮನೆಯಲ್ಲಿ ದೊಡ್ಡದಾದ ಒಂದು ವ್ರತ ಉತ್ಸವವು ನಡೆಯಿತು. ಭೂರಿ ಸಂತರ್ಪಣೆಯೂ ನಡೆಯಿತು. ಸುಬ್ಬನಿಗಾಗಲಿ, ಅವನ ತಾಯಿಗಾಗಲಿ ಆಮಂತ್ರಣವಿರಲಿಲ್ಲ. ಇದರಿಂದ ಕವಿ ಸುಬ್ಬನ ಮನಸ್ಸಿನಲ್ಲಿ ತರಂಗಗಳೆದ್ದುವು. ಗಜನೋಹಿ ಪ್ರಸಂಗ ಸೃಷ್ಟಿಯಾಯಿತು. ಇದರ ಪ್ರಕಾರ, ವೇದವ್ಯಾಸರು ಹಸ್ತಿನಾವತಿಗೆ ಬಂದು, ಗಜನೋಹಿ ವ್ರತದ ಮಹತ್ವವನ್ನು ಗಾಂಧಾರಿಗೆ ಹೇಳಹೋಗುತ್ತಾರೆ. ಆಕೆ ತನ್ನ ಮಕ್ಕಳನ್ನು ಕರೆದು ಒಂದು ಮಣ್ಣಿನ ಆನೆ ಮಾಡಲು ಹೇಳುತ್ತಾಳೆ. ಅನೇಕ ಒಡ್ಡಾರರು ಕೆಲಸಮಾಡಿ ಮಣ್ಣಿನ ಆನೆ ಸಿದ್ಧವಾಗಿ ಗಾಂಧಾರಿಯು ಗಜನೋಹಿವ್ರತವು ನಡೆಯುತ್ತದೆ. ಈ ಉತ್ಸವಕ್ಕೆ ಕುಂತಿಗೆ

ಆಮಂತ್ರಣ ಕೊಡಲಿಲ್ಲ. ಈ ವರ್ತಮಾನ ತಿಳಿದ ಕುಂತಿ ಚಿಂತಿಸುತ್ತಿರುವಾಗ ಅರ್ಜುನನು ಇಂದ್ರನ ಆನೆಯನ್ನು ತಂದು ಗಜನೋಹಿ ವ್ರತವನ್ನು ಮಾಡಿಸುತ್ತಾನೆ.

ಈ ಕಥೆ ತೋರವಟ್ಟಿಗೆ ಮಹಾಭಾರತದ್ದು ಎಂದು ತೋರುವುದು ನಿಜವಾದರೂ ಕೇವಲ ಕಲ್ಪಿತವೆಂಬಂತೆ ಭಾಸವಾಗುತ್ತದೆ. ಇದು ಭಾರತ ಕಥೆಗೆ ಪ್ರಕ್ಷಿಪ್ತವಾಗಿರಬೇಕು. ಸುಬ್ಬನ ಗಜನೋಹಿ ಪ್ರಸಂಗವನ್ನೋದಿದಾಗ ಮೇಲಿಂದ ಮೇಲೆಯೇ ನಮಗೆ ಅದು ಕುಂತಿಗೆ ಸಂಬಂಧಿಸಿಲ್ಲವೆಂಬುದು ಪ್ರತ್ಯಕ್ಷವಾಗುತ್ತದೆ. ವೇದವ್ಯಾಸರು ಗಜನೋಹಿ ವ್ರತವನ್ನು ಉಪದೇಶಿಸಿ ತೆರಳಿದ ಕೂಡಲೇ ಗಾಂಧಾರಿಯು ಮಣ್ಣಿನ ಆನೆಯನ್ನು ಮಾಡಲು ಮಕ್ಕಳಿಗೆ ಅಜ್ಞಾಪಿಸುತ್ತಾಳೆ. ಅವರು ಮಣ್ಣನ್ನು ಅಗೆದು ಓಡಿ ಓಡಿ ತರುವುದು, ಮಂಡೆಯ ಮೇಲೆ ಬುಟ್ಟಿಯೊಳು ಮಣ್ಣು ತುಂಬಿ ತರುವುದು ಇತ್ಯಾದಿ ವಿವರಗಳು ಇಲ್ಲಿ ವರ್ಣಿತವಾಗಿವೆ. ಹಸ್ತಿನಾವತಿಯ ಮಹಾರಾಣಿಯು ಮಕ್ಕಳಿಗೆ ಮಣ್ಣು ತರಹೇಳುವುದು, ಆ ರಾಜಪುತ್ರರು ಮಣ್ಣು ಹೊರುವ ವರ್ಣನೆ ತೀರಾ ಕಲ್ಪಿತವೆಂಬುದು ಇಲ್ಲಿ ಯಾರಿಗಾದರೂ ಹೊಳೆಯದೆ ಇರದು. ಆಮೇಲೆ, ಗಾಂಧಾರಿ ಗಜನೋಹಿಯನ್ನು ಮಾಡುವಾಗ ಕುಂತಿಗೆ ಹೇಳಿಕೆ ಇರದ್ದರಿಂದ ಆಕೆ ಹೋಗಲಿಲ್ಲ. ಆಕೆ ಚಿಂತೆಯಿಂದ ತನ್ನ ಮಾಂಗಲ್ಯವಸ್ತುಗಳನ್ನು ಒಂದೊಂದಾಗಿ ಕಳಚುವ ಕ್ರಮವನ್ನು ಕವಿ ಹೀಗೆ ವರ್ಣಿಸುತ್ತಾನೆ: "ಮುಡಿಯೊಳಗಿದ್ದ ಪೂಸರ ಹರಿದು ಬಿಸಾಡಿದಳು. ಹಣೆಯಮೇಲಿಟ್ಟ ಕುಂಕುಮನಾಮ ಒರಸಿದಳು. ಸೊಂಟದ ಡಾಬು–ಪೈಜಣಗಳ ಕಳಚಿದಳು. ಕೊರಳ ಮುತ್ತಿನಹಾರ ಹರಿದು ಬಿಸಾಡಿದಳು. ಎದೆಗೆರಕದ ಕುಪ್ಪಸ ತೆಗೆದೊಗೆದಳು. ವಜ್ರದ ಅರಳೋಲೆಯ ಸಂದು ಬಿಡಿಸಿದಳು. ಕೈಯೊಳುಜ್ವಲಿಸುವ ಹಸ್ತಕಡಗವ ಬಿಸುಡಿದಳು. ಕಣ್ಣನೀರಲಿ ಕಜ್ಜಳ ಕರಗಿಸಿದಳು. ಸೆಜ್ಜೆಯ ಮಂಚದ ಮೇಲೆ ಹೊರಳಿದಳು".

ಇಲ್ಲಿ ಕುಂತಿಯು ಸೌಮಾಂಗಲ್ಯವನ್ನು ಅಭಿವ್ಯಕ್ತಗೊಳಿಸುವ ಎಲ್ಲಾ ವಸ್ತುಗಳನ್ನೂ ತ್ಯಜಿಸುವ ವರ್ಣನೆಯಿದೆ. ಪಾಂಡವರನ್ನು ಶತಶೃಂಗ ಪರ್ವತದಲ್ಲಿ ಪಡೆದ ಕುಂತೀದೇವಿ ಹಸ್ತಿನಾವತಿಗೆ ಬರುವ ಮೊದಲೇ ವಿಧವೆಯಾಗಿದ್ದಳು ಎಂದು ನಾವು ಮಹಾಭಾರತ ಕಥೆಯಲ್ಲಿ ಓದಿ ತಿಳಿಯುತ್ತೇವೆ. ವಿಧವೆಯರು ಕಜ್ಜಳ, ಹೂವು, ಕುಂಕುಮನಾಮ, ಸೊಂಟಪಟ್ಟಿ, ಮುತ್ತಿನಹಾರ, ಕಡಗ ಮುಂತಾದ ಮಂಗಲ ವಸ್ತುಗಳನ್ನು ಆ ಕಾಲದಲ್ಲಿಯಂತೂ ಧರಿಸುತ್ತಿರಲೇ ಇಲ್ಲ ಎಂಬುದು ಸರ್ವವಿದಿತ. ಅಂದ ಮೇಲೆ ಸುಬ್ಬನು ಹೀಗೇಕೆ ವರ್ಣಿಸಿದನೆಂದು ಆಶ್ಚರ್ಯವಾಗದಿರದು. ವಾಸ್ತವವಾಗಿ ಸುಬ್ಬನು ತನ್ನ ತಾಯಿಯನ್ನೇ ಕುಂತಿಗೆ ಸಂವಾದಿಯಾಗಿ ಕಲ್ಪಿಸಿ ಹೀಗೆ ವರ್ಣಿಸಿರಬೇಕು.

ಸುಬ್ಬನ ತಂದೆ ವೆಂಕಪ್ಪಭಟ್ಟನು ಹೆಚ್ಚಾಗಿ ಚೆರುಗುನ್ನದಲ್ಲಿಯೇ ಇರುತ್ತಿದ್ದನು. ಕುಟುಂಬದ ಹಿರಿಯರು ಅಜ್ಞಕಾನದಲ್ಲಿ ಯಾವುದೋ ಒಂದು ದೊಡ್ಡ

ಪೂಜೆ ವ್ರತವನ್ನು ಮಾಡಿರಬೇಕು. ಅಥವಾ ಮಣ್ಣಿನ ಆನೆ ಮಾಡಿ ಗಜಗೌರೀವ್ರತ ಪೂಜಾದಿಗಳನ್ನು ಮಾಡಿರಬೇಕು. ಆಗ ಸ್ಥಾನಿಕ ಸಮಾಜದ ಪಾರ್ವತಿಯನ್ನು ಕೀಳಾಗಿ ಕಂಡು ಆಕೆಗೆ ಕರೆ ಕೊಟ್ಟಿರಲಿಕ್ಕಿಲ್ಲ. ಇದರಿಂದ ಬಲು ಬೇಸರವಾಗಿ ತನ್ನ ಸೌಮಾಂಗಲ್ಯಾಭರಣಗಳನ್ನೆಲ್ಲಾ ಕಳಚಿ, ಅದೇ ವೇದನೆಯಿಂದ ಹಾಸಿಗೆ ಹಿಡಿದಾಗ ಸುಬ್ಬನಿಗೆ ಆತ್ಮಾಭಿಮಾನ ಕೆರಳಿತು. ಆತನಿಗೆ ಸಿಂಹಭೂಪಾಲನ ಆಶ್ರಯವೂ ಇತ್ತು. ಆದುದರಿಂದ ಆತನು ಅರಸನ ಪಟ್ಟದಾನೆಯನ್ನೇ ತರಿಸಿ ತನ್ನ ತಾಯಿಯಿಂದ ಗಜಗೌರೀವ್ರತವನ್ನು ಮಾಡಿಸಿ ಬೀದಿಯಲ್ಲಿ ಮೆರವಣಿಗೆಯನ್ನೂ ಮಾಡಿಸಿರಬೇಕು.

ಕುಂತಿಯು ತಾನು ಮಾಡುವ ವ್ರತೋತ್ಸವಕ್ಕೆ ಗಾಂಧಾರಿಯನ್ನು ಆಮಂತ್ರಿಸಲು ಹೋದಾಗ ಗಾಂಧಾರಿಯು "ನಮ್ಮ ಮನೆಯ ಉತ್ಸವಕ್ಕೆ ಏಕೆ ಬರಲಿಲ್ಲ? ಒಂದು ವೇಳೆ ಹೇಳಿಕೆಯಿಲ್ಲದಿದ್ದರೂ ನಾವು ಒಂದೇ ಮನೆಯವರಾದುದರಿಂದ ಬರಬೇಕಿತ್ತು" ಎನ್ನುತ್ತಾಳೆ. ಅದಕ್ಕೆ ಕುಂತಿಯು ಕೊಡುವ ಉತ್ತರವೂ ಯೋಚನೆ ಮಾಡತಕ್ಕದ್ದಾಗಿದೆ. "ಅಂದು ನನ್ನ ಮಕ್ಕಳೆಲ್ಲಾ ಹೊರಹೋಗಿದ್ದರು. ನನಗೆ ಮನೆ ಕಾಯಬೇಕಿತ್ತು" ಎನ್ನುವ ಮಾತು ಕುಂತಿಗಿಂತ ಹೆಚ್ಚಾಗಿ ಪಾರ್ವತಿಗೇ ಸರಿಹೊಂದುತ್ತದೆ. ಹಸ್ತಿನಾವತಿಯ ಪಾಲುದಾರರಾದ ಪಾಂಡವರ ಮನೆಯಲ್ಲಿ ಕೆಲಸದವರೋ ಭಟರೋ ಆರೂ ಇದ್ದಿಲ್ಲವೇ. ಮಕ್ಕಳು ಮತ್ತು ಕುಂತೀದೇವಿ ಮಾತ್ರ ವಾಸಿಸುತ್ತಿದ್ದಿರಬಹುದೇ ಎಂದು ಆರಿಗಾದರೂ ಸಂದೇಹ ಮೂಡದಿರದು. ಇಷ್ಟೇ ಅಲ್ಲ, ಕುಂತೀದೇವಿ ಮತ್ತು ಮಕ್ಕಳು ಮಾತಾಡುತ್ತಾ "ತಾವು ಬಡವರು, ಬದಲೊಂದು ವ್ರತ ಮಾಳ್ಪೆವೆಂದರೆ ಅರೆವೀಸ ಕೈಯೊಳಿಲ್ಲ" ಎಂದೂ, ಹಿರಿಯರು ಗಳಿಸಿಟ್ಟ ಭಂಡಾರವೆಲ್ಲಾ ಆ ಹಿರಿಮನೆಯಲ್ಲೇ ಇದೆಯೆಂದೂ ಮರುಗುವುದು ಕೇವಲ ಸಾಮಾನ್ಯ ಕುಟುಂಬವೊಂದರ ಚಿತ್ರವನ್ನೇ ಕೊಡುತ್ತದೆ. "ಬಲ್ಲಿದರೊಡನೆ ಬಡವರಿಗೆ 'ಇಗಾಯ' ಸಲ್ಲದು" ಮುಂತಾದ ಹತ್ತು ಹಲವು ವರ್ಣನೆಗಳು ಸುಬ್ಬನ ಕೌಟುಂಬಿಕ ಜೀವನವನ್ನೇ ಹೋಲುತ್ತವಲ್ಲದೆ ಪಾಂಡವ–ಕೌರವರಿಗೆ ಅಷ್ಟು ಸಲ್ಲುವಂತಿಲ್ಲ.

ಸುಬ್ಬನ ವೃತ್ತಾಂತ: ಪಾರ್ತಿಸುಬ್ಬನ ಕುರಿತಾಗಿ ಈ ತನಕ ಅನೇಕ ವಿದ್ವಾಂಸರು ಸಂಶೋಧನೆ ನಡೆಸಿದ್ದಾರೆ. ಹಿರಿಯರು ಹೇಳಿದಂತೆ ನನಗೂ ಪಾರ್ತಿಸುಬ್ಬನ ಕುರಿತಾದ ಒಂದು ದಂತಕಥೆ ನೆನಪಿದೆ. ಕುಂಬಳೆ ದೇವಸ್ಥಾನದ ವಠಾರದಲ್ಲಿ ಅಕ್ಕಮ್ಮ ಎಂಬ ಒಬ್ಬಳು ಸ್ಥಾನಿಕ ಸಮಾಜದ ಮಹಿಳೆಯಿದ್ದಳು. ಅವಳಿಗೆ ಪಾರ್ವತಿ ಎಂಬ ಚೆಲುವಿನ ಮಗಳಿದ್ದಳು. ಅವಳನ್ನು ಅಜ್ಜಕಾನ ಎಂಬಲ್ಲಿದ್ದ ಹವ್ಯಕ ಸಮಾಜದ ಮುತ್ತುಭಟ್ಟರ ಮಗ ವೆಂಕಪ್ಪನೆಂಬವನು ಮೋಹಗೊಂಡು ಮದುವೆಯಾದನು. ಅಂದಿನ ಜಾತಿಕಟ್ಟಿಗೆ ಇದು ವಿರೋಧವೆಂದು ಕಂಡದ್ದರಿಂದ ವೆಂಕಪ್ಪನು ಮನೆ ಬಿಡಬೇಕಾಯಿತು. ಆತನು ಕೇರಳದ ಚೆರುಗುನ್ನ ಎಂಬಲ್ಲಿ ಅನ್ನಪೂರ್ಣೇಶ್ವರೀ

ದೇವಾಲಯದಲ್ಲಿ ಅರ್ಚಕನಾಗಿ ಜೀವನ ಸಾಗಿಸುತ್ತಿದ್ದನು. ಈ ವೆಂಕಪ್ಪ-ಪಾರ್ತಿಯರ ಮಗನೇ ಸುಬ್ಬ. ಸುಬ್ಬನು ಪಾರ್ವತಿ (ಪಾರ್ತಿ)ಯ ಮಗನೆಂದೇ ಪ್ರಸಿದ್ಧನಾದನು. ಈ ಪಾರ್ವತಿಯ ಮನೆತನವೂ "ಪಾರ್ತ್" ವೆಂಬ ಸ್ಥಳದಲ್ಲಿತ್ತು. ಇದು ಇಂದಿನ ಪೆಲರದ ಸಮೀಪ, ಬಜಕ್ಕೂಡಲು ಎಂಬ ಸ್ಥಳದ ಆಸುಪಾಸಿನಲ್ಲಿದೆ. ಅಲ್ಲಿಯ ಅನೇಕರನ್ನು "ಪಾರ್ತ್" ಎಂಬ ಮನೆಹೆಸರಿನೊಂದಿಗೆ ಕರೆಯುವ ರೂಢಿಯಿದ್ದಿರಬೇಕು. (ಉದಾ : ಪಾರ್ತ್ ವೆಂಕಪ್ಪ ಶಾನುಭಾಗ, ಪಾರ್ತ್ ಕೃಷ್ಣಯ್ಯ ಇತ್ಯಾದಿ). ಮುಂದೆ ಕೆಲವರು ಸುಬ್ರಹ್ಮಣ್ಯ ಹೆಸರಿನವರೂ ಅಲ್ಲಿ ಆಗಿಹೋದರು. ಅವರೆಲ್ಲರೂ ಪಾರ್ತ್‌ಸುಬ್ಬ ಇಲ್ಲವೇ ಸುಬ್ರಹ್ಮಣ್ಯರೆನಿಸಿ, ಕಾಲಕ್ರಮೇಣ ಪಾರ್ತಿಸುಬ್ಬರೆಂದೇ ಹೆಸರುಪಟ್ಟರು. ಆದ್ದರಿಂದ ರಾಮಾಯಣ ಕರ್ತೃವಾದ ಹಾಗೂ ಪಾರ್ವತಿಯ ಮಗನಾದ ಸುಬ್ಬ-ಪಾರ್ತಿಸುಬ್ಬನ ಚರಿತ್ರೆಯು ಅನೇಕ ವಿರೋಧಾಭಾಸಗಳಿಗೆಡೆ ಕೊಟ್ಟಿತು.

ಸುಬ್ಬನು ಕುಂಬಳೆಯಲ್ಲಿ ಬೆಳೆಯುತ್ತಿದ್ದಂತೆ, ಆಗ ಅಲ್ಲಿ ಆಳುತ್ತಿದ್ದ ಜಯಸಿಂಹನ ಆಶ್ರಯ ಮತ್ತು ಪ್ರೋತ್ಸಾಹಗಳಿಂದ ಕನ್ನಡ-ಸಂಸ್ಕೃತಗಳನ್ನೂ, ಕತ್ತಿ, ಗದೆ, ಬಿಲ್ಗಾರಿಕೆಯೇ ಮುಂತಾದ ವೀರ ವಿದ್ಯೆಗಳನ್ನೂ ಅಭ್ಯಸಿಸಿದನು. ಆತನು ಹುಟ್ಟಿನಿಂದಲೇ ಕವಿಯೂ ಆಗಿದ್ದನು. ಸಂಗೀತ, ನೃತ್ಯ, ಬಣ್ಣಗಾರಿಕೆ ಮುಂತಾದ ಲಲಿತಕಲೆಗಳಿಗೆ ಕುಂಬಳೆ ಸೀಮೆಯು ಖ್ಯಾತವಾಗಿತ್ತು. ಸುಬ್ಬನಿಗೆ ಚಿಕ್ಕಂದಿನಿಂದಲೆ ಕೃತಿರಚನೆ ಮತ್ತು ನಾಟ್ಯ ಇವೆರಡರಲ್ಲಿಯೂ ಆಸಕ್ತಿಯಿದ್ದುದರಿಂದ, ರಾಜನ ಚಿಕ್ಕ ಚಿಕ್ಕ ಕಾರ್ಯಗಳನ್ನೂ ಗುರುತಿಸಿ, ಆತನು ಪ್ರಸಂಗಗಳನ್ನು ಬರೆಯುತ್ತಿದ್ದನು. ಆದರೆ ಆ ಪ್ರಸಂಗಗಳು ಯಾವುದೋ ಪುರಾಣದ ಘಟನೆಗಳನ್ನು ಹೋಲುತ್ತಿದ್ದು, ಅಲ್ಲಿ ಬರುವ ಪಾತ್ರಗಳೂ ಪುರಾಣಪುರುಷರದೇ ಆಗಿರುತ್ತಿದ್ದುವು.

ಒಮ್ಮೆ, ಸುಬ್ಬ ತನ್ನ ತಂದೆಯಿರುವ ಚೆರುಗುನ್ನಕ್ಕೆ ಹೋಗಿದ್ದನು. ವಿಶಾಲವಾದ ನೆಲ್ಲುಗದ್ದೆಗಳ ಮಧ್ಯದಲ್ಲಿ, ಎತ್ತರದಲ್ಲಿ ನಿರ್ಮಿತವಾಗಿರುವ ಅನ್ನಪೂರ್ಣೇಶ್ವರೀ ದೇವಿಯ ಆಲಯವನ್ನು ನೋಡಿದೊಡನೆಯೇ ಆತ ಭಾವಪರವಶನಾದನು. ಕೂಡಲೇ

"ಶರಣು ತಿರುವಗ ಶಾಲಿವಾಹಿನಿ, ಶರಣು ಶ್ಯಾಮಲ ರೂಪಿಣೀ"

ಎಂದು ಅನ್ನಪೂರ್ಣೇಶ್ವರೀ ದೇವಿಗೂ ಬತ್ತದ ಸಸಿಗೂ ಹೊಂದುವಂತೆ ಮೂರು ನಾಲ್ಕು ಪದ್ಯಗಳನ್ನು ಬರೆದನು. ಇಂದು ಆತನದೆಂದು ದೊರೆಯುವ ಪದಗಳಲ್ಲಿ ಇದೇ ಮೊದಲ ಸ್ತುತಿಪದವಾಗಿದೆ. ಸುಬ್ಬನು ಕೇರಳದ ಹಲವು ನಾಟ್ಯಗಳನ್ನೂ ಬಣ್ಣಗಾರಿಕೆ-ಹಜ್ಜೆಗಳನ್ನೂ ಅಭ್ಯಾಸ ಮಾಡಿಕೊಂಡಿರಬೇಕು.

ಕುಂಬಳೆಯ ನೆರೆಕರೆಯಲ್ಲಿ ಜಾನಕಿ ಎಂಬ ಸಂಪ್ರದಾಯಸ್ಥ ಮನೆತನದ ಹುಡುಗಿಯಿದ್ದಳು. ಸುಬ್ಬನಿಗೆ ಅವಳಲ್ಲಿ ಅನುರಾಗ ಮೂಡಿತು. ಆದರೆ ಅವಳನ್ನು ಅವನಿಗೆ ಮದುವೆ ಮಾಡಿಕೊಡಲು ಅವಳ ಹಿರಿಯರು ಒಪ್ಪಲಿಲ್ಲ. ಇದರಿಂದ ಸುಬ್ಬನ

ಕವಿಹೃದಯಕ್ಕೆ ಬಲುದೊಡ್ಡ ಪೆಟ್ಟಾಯಿತು. ವಾಲ್ಮೀಕಿಯ ಮನಸ್ಸಿಗೆ ಕ್ರೌಂಚ ಹನನದ ಆಘಾತದಿಂದ ಶೋಕವುಂಟಾಗಿ ಶ್ಲೋಕವು ಹೊರಹೊಮ್ಮಿದಂತೆ, ಸುಬ್ಬನ ಪ್ರೇಮಭಂಗದ ದುಃಖದ ಪರಿಣಾಮವಾಗಿ ಯಕ್ಷಗಾನ ರಾಮಾಯಣದ ಪದಗಳು ಅವನಿಂದ ಉಕ್ಕಿ ಹರಿದುವು. ಆತನು ತನ್ನ ರಾಮಾಯಣದಲ್ಲಿ ಸಂದರ್ಭ ಸಿಕ್ಕಾಗ ಲೆಲ್ಲಾ ಜಾನಕಿಯನ್ನೇ ವರ್ಣಿಸಿದ್ದಾನೆ. ಅವಳಿಗಾಗಿಯೇ ಮರುಗಿದ್ದಾನೆ. ಉದಾ ಹರಣೆಗೆ ಕೆಲವನ್ನು ನೋಡಬಹುದು.

ರಾಗ: ಸಾರಂಗ, ಅಷ್ಟತಾಳ

ತರಬೇಕು ತರುಣಿಯಳ। ಕಾಮನ ಮುಂಗೈ
ಅರಗಿಣಿಯಂತಿಹಳ
ಸ್ಮರನ ಸಿಂಗಾಡಿ ಪುರ್ಬಿನ ನೀರೆಮಲ್ಲಿಗೆ
ಪರಿಮಳಿಸುವ ಮೈಯ ವರಕರಿಗಮನೆಯ ॥ ೧ ॥

ಪನ್ನಂಗನಿಭ ವೇಣಿಯ। ಪಂಕಜದೆಸಳ್
ಗಣ್ಣ ಕನ್ನಡ ಜಾಣೆಯ
ಹೊನ್ನಪುತ್ತಳಿಯಂತೆ ಮೆರೆವ ಕಾಮನ ಕೈಯ
ಕನ್ನಡಿ ಕದಪಿನ ಕಡುಸುಪ್ರವೀಣೆಯ ॥ ೨ ॥

ಕಿರುನಗೆ ಮೊಗದೋಜೆಯ। ಲಾವಣ್ಯ ಭಾ
ಸ್ಕರ ಕೋಟಿನಿಭ ತೇಜೆಯ
ವರಕುಂಭಕುಚೆಯ ಸರೋಜಗಂಧಿನಿಯ ಕೇ
ಸರಿಮಧ್ಯೆ ಮರಿಶುಕವಚನೆ ಶುಭಾಂಗಿಯ ॥ ೩ ॥

ಆ ಜಾನಕಿಯನ್ನು ಆತನು ಮನಸ್ಸಿನಲ್ಲಿಯೇ ಮೆಲುಕು ಹಾಕುತ್ತಿದ್ದುದು ಈ ರೂಪದ ಪದ್ಯದಲ್ಲಿದೆ

ಸುಬ್ಬನು ತನ್ನ ರಾಮಾಯಣದಲ್ಲಿ ವಾಲ್ಮೀಕಿಯನ್ನೇ ಬಹಳವಾಗಿ ಅನುಸರಿಸಿದ್ದರೂ ಜಾನಕಿಯ ಸಂದರ್ಭದಲ್ಲಿ ತನ್ನದೇ ಆದ ಹಲವು ಹೊಸತನ್ನು ಅಳವಡಿಸಿದ್ದಾನೆ. ಉದಾಹರಣೆಗೆ, ಸೀತಾಪಹರಣವಾದ ಸಮಯದಲ್ಲಿ ರಾಮನು ತಮ್ಮನೊಡನೆ ಹೇಳುವುದು :

ರಾಗ: ಕಾಂಭೋಜಿ, ಚಂಪೆತಾಳ

ಪೊಡವಿಗಿಡ ಮರಕಲ್ಲು ನೋಡಿದರೆ ಅರಿಸಿನದ
ಪುಡಿಯಂತೆ ತೋರುತಿದೆ ತಮ್ಮಾ
ಮಡದಿ ಜಾನಕಿಯೆಂಬ ರತುನವನು ಕಾಣದಡಿ
ಯಿಡಲಾರೆನಯ್ಯಯ್ಯೊ ತಮ್ಮಾ ॥ ೧ ॥

ಏಳು ಜನ್ಮಾಂತರಕು ತಪವಗೈದರೂ ಇಂಥ
ಬಾಲೆ ಕೈಸೇರುವಳೆ ತಮ್ಮಾ
ಮೇಲುಕೀಳೊಂದನರಿಯದ ಸಖಿಯು ದುರ್ನುಡಿಯು
ಕೇಳಿ ನೀ ಬರಬಹುದೆ ತಮ್ಮಾ ॥ ೨ ॥

ಸುಬ್ಬನಿಗೆ ಜಾನಕಿಯನ್ನು ನೆನೆನೆನೆದು ವಿಪ್ರಲಂಭಾವಸ್ಥೆಯೂ ಬರುತ್ತಿತ್ತು. ಅದನ್ನು ಆತನ ಕವಿವಾಣಿಯಲ್ಲಿ ಕೇಳಿದರೇ ಚೆಲುವು :

ರಾಗ : ಘಂಟಾರವ, ಏಕತಾಳ

ಮಾರನಸ್ತ್ರ ತಾಗಿ ಬೇಗುವೇರಿತಲ್ಲೆ ಬಾಲೆ
ನಾರಿ ಎನ್ನ ಮೇಲೆ ದಯವ ನೀ ತೋರೆ ದಮ್ಮಯ್ಯಾ ॥ ೧ ॥
ಚಪ್ಪರ ಮಂಚದ ಮೇಲೆ ಚಂದದ ಉಯ್ಯಾಲೆ
ದರ್ಪಕನಾಟದಿ ನಿನ್ನ ದಣಿಸುವೆ ನಾ ಮುನ್ನ ॥ ೨ ॥
ಸೃಷ್ಟಿ ಊರೊಳರೊಳೆಲ್ಲ ಶ್ರೇಷ್ಠನಹೆ ಜಾಣೆ
ಪಟ್ಟದ ರಾಣಿತ್ವ ನಿನಗೆ ಕೊಟ್ಟು ಬಾಳ್ವೆ ಕಾಣೆ

ಸುಬ್ಬನಿಗೆ ಒಮ್ಮೊಮ್ಮೆ ನಿರಾಶೆಯೂ ಉಂಟಾಗುತ್ತಿತ್ತು. ಆತನು ಬೇರೆ ಹೆಣ್ಣನ್ನು ಮದುವೆಯಾಗುವಂತಿರಲಿಲ್ಲ. ಅವನು ಒಬ್ಬನೇ ಮಗನಾದುದರಿಂದ ಮದುವೆ ಮಾಡಿಕೊಳ್ಳದಿದ್ದರೆ ಅವನ ಕುಲವು ಅಲ್ಲಿಗೇ ಪರಿಸಮಾಪ್ತಿ. ಇದನ್ನು ಕವಿ ಮಾತಿನಲ್ಲಿಯೇ ಕೇಳುವುದು ಹೆಚ್ಚು ಸೊಗಸು : (ಇದು ಮಂಡೋದರಿ ರಾವಣನಿಗೆ ಹೇಳುವಂತಿದೆ)

ರಾಗ : ತೋಡಿ, ಅಷ್ಟತಾಳ

ಕುಲವೇ ಸಂಹಾರವಾಗುವ ಕಾಲ ಬಂತು
ಇಳೆಯೊಳ್ ಬಾಳಿರುವಂಥ ಋಣವೆಲ್ಲ ಸಂತು
ಇಳೆಯು ನಂದನೆ ಸಿಕ್ಕಳೆತಕೇ ಭ್ರಾಂತು
ಉಳಿಯದು ಪ್ರಾಣ ಸಾರಿದೆ ನಾಸಿಂತು ॥

ಹೀಗೆ ಸುಬ್ಬನು ತಾನು ಬರೆದ ಪ್ರಸಂಗಗಳಲ್ಲೆಲ್ಲಾ ತನ್ನ ಸ್ವಂತ ವೃತ್ತಾಂತಗಳನ್ನು ತಂದಿದ್ದಾನೆ. ಆತನು ತನ್ನರಸ ಸಿಂಹಭೂಪಾಲನನ್ನೂ ಸಂದರ್ಭಾನುಸಾರ ಹೆಸರಿಸಿದ್ದಾನೆ. ಹಿಂದೆಯೇ ಹೇಳಿದಂತೆ ಐರಾವತ ಪ್ರಸಂಗದಲ್ಲಿ ಮೆರವಣಿಗೆಯ ಸಂದರ್ಭ. ಮುಂಗಡೆಯಲ್ಲಿ ಸಿಂಗರಾಯರು ಇದ್ದುದನ್ನು ಹೇಳಿದ್ದಾನೆ. ಮತ್ತೆ ಅಂಗದ ಸಂಧಾನದಲ್ಲಿಯೂ ಪ್ರಹಸ್ತನ ಬಾಯಿಯಿಂದ ರಾವಣ ಸೇವವಿಟ್ಟು ಸಿಂಹ ಭೂಪಾಲನನ್ನೇ ವರ್ಣಿಸಿದ್ದನ್ನು ಗುರುತಿಸಬಹುದಾಗಿದೆ. ಉದಾ :

ರಾಗ : ಕಾಂಭೋಜಿ, ಅಷ್ಟತಾಳ

ಸಂಗರ ವಿಜಯು ವಿಹಾರ। ಶಿವ
ಲಿಂಗ ಪೂಜೆಯುಲಿ ವಿಸ್ತಾರ। ಚತು
ರಂಗ ವೇದದ ಸದ್ವಿಚಾರ। ಕರು
ಣಂಗಳಿಂದಖಿಳ ಲೋಕಂಗಳ ಪೊರೆವ ಉ
ತ್ತುಂಗ ಬಲಾಢ್ಯ ಶ್ರೀ ಮಂಗಳ ಕಾಂತಿಯು

ಈ ಪದ್ಯದಲ್ಲಿ ಬರುವ ನಾಮವಿಶೇಷಣಗಳಲ್ಲಿ ಕೆಲವಾದರೂ ಸಿಂಹಭೂಪಾಲನ ಬಿರುದುಗಳೆಂದು ತಲೆಂಗೆರೆ ಶಾಸನವನ್ನೋದಿದಾಗ ತಿಳಿಯುತ್ತದೆ. ಸುಬ್ಬನು ತನ್ನ ಪ್ರಸಂಗದ ಪರಿಸಮಾಪ್ತಿಯುಲ್ಲಿ ಕಣ್ವಪುರೇಶನ ದಯೆಯಿಂದ ಈ ಸಂಧಿ ಪೂರೈಸಿದೆನೆಂದು ಹೇಳುತ್ತಾನೆ. ಕಣ್ವಪುರೇಶನೆಂದರೆ ಕಣ್ವಪುರ ಇಲ್ಲವೆ ಕಣ್ವಾರ ಗೋಪಾಲಕೃಷ್ಣರ ಹೆಸರೂ ಆಗುತ್ತದೆ. ಅರಸ ಸಿಂಹಭೂಪಾಲನನ್ನೂ ಧ್ವನಿಸುತ್ತದೆ.

**ಸುಬ್ಬನ ಕಾಲದಲ್ಲಿ ಪ್ರಚಲಿತವಿದ್ದ ಯಕ್ಷಗಾನ:** ಆಗಿನ ಕಾಲದಲ್ಲಿ ಯಕ್ಷಗಾನವು ಕೇವಲ ಜಾನಪದವಾಗಿತ್ತು. ಅದರ ಸುಳಿವು ನಮಗೆ ಹಳೆಯ ಕಾವ್ಯಗಳಲ್ಲಿ ಸಿಗುತ್ತದೆ. ತಾಳಗಳ ಹೊಂದಾಣಿಕೆ ಸರಿಯಾಗಿರಲಿಲ್ಲ. ಶ್ರುತಿಗೆ ಮೇಳವಿಸಿ ಹಾಡುವುದು ತಿಳಿದಿರಲಿಲ್ಲ. ಗ್ರಾಮ್ಯಪದಗಳ ಪ್ರಯೋಗಗಳೇ ಅಧಿಕವಾಗಿದ್ದುವು. ಅವುಗಳನ್ನು ಚತ್ತಾಣ, ಬೆದಂಡೆ, ಬಾಜನೆಗಬ್ಬ, ಎಕ್ಕಳಗಾನ, ಮುಂತಾಗಿ ಕರೆಯುತ್ತಿದ್ದರು. ವಾಸ್ತವವಾಗಿ ಚತ್ತಾಣ, ಬೆದಂಡೆಗಳು ಶುದ್ಧಸಾಹಿತ್ಯದ ಸಾಲಿನವುಗಳಾಗಿದ್ದುವು. ಹಲವು ಕಂದಗಳು, ವೃತ್ತಗಳು, ಗೀತಿಕೆ, ತ್ರಿಪದಿ ಅಲ್ಲದೆ ಜಾತಿ ಪದ್ಯಗಳುಳ್ಳ ಕಾವ್ಯವು ಚತ್ತಾಣವೆನಿಸಿದರೆ, ಕಂದ, ವೃತ್ತ ಅಲ್ಲಲ್ಲಿ ಜಾತಿ ಪದ್ಯಗಳುಳ್ಳ ಕಾವ್ಯಗಳು ಬೆದಂಡೆ ಕಬ್ಬಗಳಾಗಿದ್ದುವು. ಇವು ಯಕ್ಷಾಟದಲ್ಲಿ ಗಾನಕ್ಕೆ ಬಳಸಲ್ಪಡುವವುಗಳಾದ ಶುದ್ಧ ಸಾಹಿತ್ಯಗಳೇ ಆಗಿದ್ದರೂ ಆ ಕಾಲದ ಪುರಾಣ ಹೇಳುವ ಕವಿಗಳು ಸಲ್ಲದ ಪದಪ್ರಯೋಗ ಮಾಡಿ ಶ್ರುತಿದುಷ್ಟ, ಶ್ರುತಿಕಷ್ಟ, ಅರ್ಥದುಷ್ಟ, ಗ್ರಾಮ್ಯ, ನೀರಸ, ಅಪ್ರತೀತಿ ಮೊದಲಾದ ದೋಷಯುಕ್ತ ಪದಗಳನ್ನೇ ಅಜ್ಞಾನದಿಂದ ರಚಿಸಿ ಅವುಗಳಿಗೆ ಬೆದಂಡೆ, ಎಕ್ಕಳಗಾಣ, ಬಾಜನಗಬ್ಬ ಮುಂತಾಗಿ ಹೆಸರಿಟ್ಟುಬಿಡುತ್ತಿದ್ದರು. ವೇಷಭೂಷಣ, ಬಣ್ಣಗಾರಿಕೆ, ನೃತ್ಯ, ನಾಟ್ಯಾಭಿನಯುಗಳಲ್ಲಿಯೂ ವಿಶೇಷವಾದ ಪರಿಣತಿಯಿರುತ್ತಿರಲಿಲ್ಲ.

ಕುಂಬಳೆಯ ಅರಸ ಸಿಂಹಭೂಪಾಲನು ಕಾವ್ಯನಾಟಕಾಲಂಕಾರಗಳನ್ನೂ ನಾಟ್ಯಾಭಿನಯುಗಳನ್ನೂ ಅಭ್ಯಸಿಸಿ ಅಂಥ ಶಾಸ್ತ್ರೀಯುತೆಯುರಿತವರನ್ನು ಪ್ರೋತ್ಸಾಹಿಸಿ ಪ್ರಚಾರಪಡಿಸುವುದರಲ್ಲಿ ಆಸಕ್ತಿ ವಹಿಸಿದ್ದನು. ಸುಬ್ಬನು ಇವೆಲ್ಲವನ್ನೂ ಶ್ರದ್ಧೆಯಿಂದ ಕಲಿತುಕೊಂಡುದಲ್ಲದೆ ಹೊರನಾಡಾದ ಕೇರಳದಲ್ಲಿ ಪ್ರಚುರವಿದ್ದ ಕಥೆಯ ಆಟ (ಕಥಕ್ಕಳಿ)ದ ಒಳತಿರುಳನ್ನೂ ಗ್ರಹಿಸಿಕೊಂಡಿದ್ದನು. ಯಕ್ಷಗಾನಕ್ಕೆ ಬೇಕಾದ

ತಾಳ-ರಾಗಗಳ ಮಾಹಿತಿಯನ್ನೂ ಪಡೆದುಕೊಂಡನು. ಇಂದು ಎಕ್ಕಳಗಾಣವೆಂದರೆ ಯಕ್ಷಗಾನವಲ್ಲ. ಅದು ಬೇರಾವುದೋ ಒಂದು ಹಾಡಿನ ಭೇದವೆಂದು ಭ್ರಮಿಸಿದವರಿದ್ದಾರೆ. "ಯಕ್ಷಗಾನ" ಶಬ್ದವು "ಎಕ್ಕಗಾಣ"ವೆಂದಾಗಬಹುದಲ್ಲದೆ ಎಕ್ಕಳಗಾಣವೆಂದಾಗದು ಎಂದು ಅವರು ವಾದಿಸುತ್ತಾರೆ. ಆದರೆ ಯಕ್ಷಗಾನವು "ಯಕ್ಷಾಟಗಾನ"ವೆಂದೂ ಕರೆಯಲ್ಪಡುತ್ತಿತ್ತೆಂಬುದನ್ನು ಮರೆಯಲಾಗದು. ಯಕ್ಷಾಟಗಾನದ ತದ್ಭವವೇ ಎಕ್ಕಳಗಾಣ (ನ) ವೆಂದಾಗಿದೆ. ಸುಬ್ಬನು ಯಕ್ಷಗಾನಕ್ಕೆ ತೀರಾ ಅಗತ್ಯವಾದ ಚತುರಸ್ರ ತಾಳಗಳನ್ನೂ ಮುಖ್ಯವಾಗಿ ಸಪ್ತತಾಳಗಳನ್ನೂ ಅಗತ್ಯವಾದ ರಾಗಗಳನ್ನೂ ಸ್ವೀಕರಿಸಿ, ಸಾಂಗೋಪಾಂಗವಾಗಿ ಅಭ್ಯಸಿಸಿ ಒಂದು ಮೇಳವನ್ನೇ ಕಟ್ಟಿದ್ದನು. ಆ ಕಾಲದಲ್ಲಿ ಆಶುಕವಿಗಳಿದ್ದರು. ಅವರು ಪುರಾಣವನ್ನು ಬಲ್ಲವರಾದ್ದರಿಂದ ರಂಗದಲ್ಲಿ ಶೀಘ್ರಕವಿತೆಗಳನ್ನು ನಿರ್ಮಿಸಿ ಹಾಡುತ್ತಿದ್ದರು. ಹೆಚ್ಚಾಗಿ ಆ ಸಮಯದಲ್ಲಿ ಕಾವ್ಯದೋಷಗಳುಂಟಾಗುತ್ತಿದ್ದುವು. ಸುಬ್ಬನು ಸುಲಭ ಶೈಲಿಯಲ್ಲಿ ರಾಮಾಯಣ ಹಾಗೂ ಕೃಷ್ಣನ ಕಥೆಗಳನ್ನು ಬರೆದನು. ಒಂದು ರಾತ್ರಿಗೆ ಬೇಕಾದಷ್ಟು ಪದ್ಯಗಳನ್ನು ಒಂದು ಪ್ರಕರಣವಾಗಿ ಆತನು ನಿರ್ಮಿಸಿದನು. ಈ ಪಗರಣಗಳೇ ಮುಂದೆ "ಪ್ರಸಂಗ"ಗಳೆಂದು ಹೆಸರು ಪಡೆದುವು.

ಸುಬ್ಬನ ಎಲ್ಲಾ ಪ್ರಸಂಗಗಳು ಸುಲಭ ಶೈಲಿಯಲ್ಲಿವೆ. ಅವನು ರೂಢಿ ಮಾತುಗಳನ್ನೇ ಬಳಸಿ ತನ್ನ ಪ್ರಸಂಗಕ್ಕೆ ಆಕರ್ಷಣೆ ಉಂಟುಮಾಡಿದ್ದಾನೆ. ಯಕ್ಷಗಾನವು ಜನರ ಜೀವನವನ್ನು ಆದರ್ಶಮಯವಾಗಿ ಮಾಡುವ ಕಲೆ. ರಾಮಾಯಣ, ಮಹಾಭಾರತಾದಿ ಪುರಾಣಗಳು ವೇದೋಕ್ತ ಧರ್ಮವನ್ನು ಜನರಿಗೆ ಸುಲಭ ರೀತಿಯಲ್ಲಿ ಸಂವಹಿಸಲಿಕ್ಕಾಗಿ ನಿರ್ಮಾಣಗೊಂಡವುಗಳು. ಅಂಥ ಪುರಾಣಗಳು ಶ್ರವಣ ಬೋಧಕಗಳು. ಇವುಗಳನ್ನು ದೃಷ್ಟಿಬೋಧಕಗಳಾಗಿಯೂ ಮಾಡಿ ಬಧಿರ, ಕುರುಡ, ಪಾಮರ, ಪಂಡಿತ ಮಾತ್ರವಲ್ಲ, ಮೇಲು-ಕೀಳೆಂಬ ನಾನಾ ವರ್ಗದವರೆಲ್ಲರಿಗೂ ಬೋಧಕವಾಗುವುದಕ್ಕಾಗಿ ಹರಿಕಥೆ ಹಾಗೂ ಯಕ್ಷಗಾನಗಳು ಉಪಯೋಗಕ್ಕೆ ಸಲ್ಲುವಂತಾದುವು.

ಸುಬ್ಬನ ಪ್ರಸಂಗಗಳು ವಾಲ್ಮೀಕಿ ರಾಮಾಯಣದ ಹಜ್ಜೆಯನ್ನೇ ಅನುಸರಿಸುತ್ತವೆಯಾದರೂ, ಕೆಲವೆಡೆ—ಯಕ್ಷಗಾನ ರಂಗಕ್ಕೆ ಕೊಂಚ ಮಿಂಚು ತರಲೆಂದೋ ಏನೋ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡುದೂ ಇದೆ.

"ಪಂಚವಟಿ" ಪ್ರಸಂಗದಲ್ಲಿ, ಪರ್ಣಕುಟೀರದಲ್ಲಿ ರಾಮಲಕ್ಷ್ಮಣಸೀತೆಯರಿದ್ದಾಗ, ಶೂರ್ಪನಖಿ ಬಂದು ರಾಮನೊಡನೆ ಕಾಮಭಿಕ್ಷೆ ಬೇಡುತ್ತಾಳೆ. ರಾಮನು ತಾನು ಧೃತದಾರಾ ಆಗಿದ್ದೇನೆಂದೂ ಆದರೆ ಲಕ್ಷ್ಮಣನು ಹೆಂಡತಿಯನ್ನು ಕರೆತಂದಿಲ್ಲವೆಂದೂ ಹೇಳುತ್ತಾನೆ. ಶೂರ್ಪನಖಿಗೆ ಲಕ್ಷ್ಮಣನೇ ಯೋಗ್ಯನೆಂದು ಕಂಡು

ಆತನನ್ನು ಮಾತನಾಡಿಸುತ್ತಾಳೆ. ಆತನು ತಾನು ರಾಮನ ದಾಸನೆಂದೂ ದಾಸನಾದ ತನ್ನನ್ನು ಮದುವೆಯಾದರೆ ದಾಸಿಯಾಗಿರಬೇಕಾಗುವುದೆಂದೂ ಹೇಳಿ ರಾಮನಲ್ಲಿಗೇ ಹೋಗು. ಅವನ ಹೆಂಡತಿ ಸುಂದರಿಯಲ್ಲ; ಅಲ್ಲದೆ ಈಗ ಹಳೆ ಹೆಂಡತಿ ಎನಿಸಿರುವುದ ರಿಂದ ರಾಮನು ನಿನ್ನನ್ನೇ ಮದುವೆಯಾಗುವನೆಂದೂ ಆಮಿಷ ಹುಟ್ಟಿಸುತ್ತಾನೆ. ಹೆಡ್ಡಿಯಾದ ರಾಕ್ಷಸಿಯು ಲಕ್ಷ್ಮಣನ ವ್ಯಂಗ್ಯವನ್ನರಿಯದೆ ರಾಮನ ಬಳಿ ಬಂದು ಕುರೂಪಿ ಮತ್ತು ವೃದ್ಧೆಯಾದ ಸೀತೆಯನ್ನು ಲಕ್ಷ್ಮಣ ಸಮೇತವಾಗಿ ತಾನು ನುಂಗಿ ಬಿಡುತ್ತೇನೆಂದೂ, ರಾಮನೊಡನೆ ಗಿರಿಗುಹೆಗಳಲ್ಲಿ ಸುಖಿಸಿ ವಿಹರಿಸುತ್ತೇನೆಂದೂ ಹೇಳಿ ದಳು. ರಾಮನು ಲಕ್ಷ್ಮಣನನ್ನು ಕರೆದು ಕಾಮುಕಿಯಾದ ರಾಕ್ಷಸಿಯನ್ನು ವಿರೂಪಗೊಳಿಸಲು ಆಜ್ಞಾಪಿಸಿದನು. ರಾಮನ ಆಜ್ಞೆಯಂತೆ ಲಕ್ಷ್ಮಣನು ಆಕೆಯ ಕರ್ಣನಾಸಾಚ್ಛೇದ ಮಾಡಿದನು.

ಸುಬ್ಬನು ಈ ಭಾಗವನ್ನು ಅತ್ಯಂತ ರಮಣೀಯವಾಗಿ ಚಿತ್ರಿಸಿದ್ದಾನೆ. ಶೂರ್ಪನಖಿ ತಾನು ಕುಲವತಿ, ಸುಂದರಿ, ಸರಸಿಜಾಂಬಕಿ, ಬಿಂಬಾಧರೆ ಎಂದೂ ರಾಮನು ಪೃಥ್ವೀಪತಿ, ಸೂರ್ಯಪ್ರಕಾಶವುಳ್ಳವ, ಅರಗಿಳಿ ಎಂದೂ ಹೊಂದಾಣಿಕೆಯ ಮಾತುಗಳನ್ನಾಡಿ ಸರಸವಾಡಲು ಬೇಡಿಕೊಳ್ಳುತ್ತಾಳೆ. ಲಕ್ಷ್ಮಣನನ್ನು ವರಿಸುವುದು ಒಳ್ಳೆಯದು. ತನ್ನ ಸಮೀಪ ಚದುರೆ ಸಣ್ಣವಳೊಬ್ಬಳಿದ್ದಾಳೆ. ತಮ್ಮನ ಜೊತೆಗೆ ಯಾರೂ ಇಲ್ಲವೆಂದು ರಾಮನು ಅವಳನ್ನು ಲಕ್ಷ್ಮಣನ ಬಳಿಗೆ ಕಳುಹಿಸುತ್ತಾನೆ. ಲಕ್ಷ್ಮಣನು ತಾನು ಬ್ರಹ್ಮಚಾರಿಯೆಂದೂ ಅಣ್ಣನ ಆಜ್ಞೆಯನ್ನು ತಂದು ತೋರಿಸಿದರೆ ಕೂಡಿಕೊಳ್ಳಬಹುದೆಂದೂ ಹೇಳುತ್ತಾನೆ. ಶೂರ್ಪನಖಿ ರಾಮನಲ್ಲಿ ಆ ಸಂಗತಿ ತಿಳುಹಿದಾಗ ಆತನು "ಚದುರೇ ಬಾ" ಎಂದು ಕರೆದು ಆಕೆಯ ಬೆನ್ನಲ್ಲಿ ಗುರುತು ಬರೆದು ಕಳುಹಿಸುತ್ತಾನೆ. ಅಣ್ಣನ ಈ ಆಜ್ಞೆಯನ್ನು ನೋಡಿ ಲಕ್ಷ್ಮಣನು ಆಕೆಯ ಮೊಲೆಗಳನ್ನು ಕತ್ತರಿಸುತ್ತಾನೆ. ಮೂಗನ್ನು ಕೆತ್ತುತ್ತಾನೆ. ಕಿವಿ ಕೊಯ್ಯುತ್ತಾನೆ.

ಅಂದಿನ ಯಕ್ಷಗಾನ ಆಟದಲ್ಲಿ ಈ ರುದ್ರ ಭಯಂಕರ ದೃಶ್ಯವು ಗ್ರಾಹ್ಯವಾಗಿ ದ್ದಿತು. ಕುಚಚ್ಛೇದವು ನಮ್ಮೂರ ರಾಮಾಯಣಗಳಾವುದರಲ್ಲಿಯೂ ಕಂಡುಬರುವು ದಿಲ್ಲ. ಬಲುಹಿಂದೆ ಕುಂಬಳೆ ಅರಸರಲ್ಲಿ, ಸ್ತ್ರೀಯರೂ ವ್ಯಭಿಚಾರ ಮಾಡಿದ್ದು ರುಜುವಾತಾದಾಗ ಅವರ ಕಿವಿ, ಮೂಗು ಮತ್ತು ಮೊಲೆಗಳಿಗೆ ಗಾಯಮಾಡಿ ಶಿಕ್ಷಿಸುವ ಕ್ರಮವಿತ್ತಂತೆ. ತೌಳವ ರಾಜ್ಯಭಾರ ಕ್ರಮದ ದಂಡನೀತಿ ಇದಾಗಿತ್ತಂತೆ. ಇದರ ಮುಂದಿನ ಹಂತವಾಗಿ, ಅವರು ಕೆಟ್ಟುಹೋದ ಹೆಂಗುಸನ್ನು ಹತ್ತುಮಂದಿಯ ಎದುರಲ್ಲಿ ಒಂದು ಬೆಂಕಿಯ ಕುಂಡವನ್ನು ಮಾಡಿಸಿ, ಆ ಕಡೆಯಿಂದ ಈ ಕಡೆಗೆ ಹಾರುವಂತೆ ಹೇಳಿ ಹಾಗೆ ಮಾಡಿದಾಗ ಆಕೆ ಶುದ್ಧಳಾದಳು ಎನ್ನುವ ನಂಬಿಕೆ ಆದಿ ವಾಸಿಗಳ ಕೆಲವು ಕುಟುಂಬಗಳಲ್ಲಿ ಈಗಲೂ ಇದೆಯಂತೆ. ಇದಕ್ಕೆ "ಸುಡುಸುದ್ದೊ"

ಎಂದು ಹೆಸರು. ಸೀತೆಯ ಅಗ್ನಿಪರೀಕ್ಷೆ ಈ "ಸುಡುಸುದ್ದ"ದಿಂದ ಪ್ರಭಾವಿತವಾಗಿರ ಬೇಕೆಂದು ದಿ. ಮಂ ಗೋವಿಂದ ಪೈಯವರು ಹೇಳುತ್ತಿದ್ದರು.

ಸುಬ್ಬನ ಪ್ರಸಂಗಗಳೆಲ್ಲಾ ಧ್ವನಿಯುಕ್ತವಾದವುಗಳು. ಪಂಪನಂತೆ ಸುಬ್ಬನೂ ತನ್ನ ಅರಸನ ಹೆಸರನ್ನು ಅಲ್ಲಲ್ಲಿ ತಂದಿದ್ದಾನೆ. ಕುಂಡಲಮಣಿ ಭೂಷಿತ, ಮಂಡಲ ನಾಯಕ, ಕಾಮಸನ್ನಿಭ, ಸಂಗರ ವಿಜಯ ವಿಹಾರ—ಮುಂತಾಗಿ ತನ್ನನ್ನೂ ಹೊಗಳಿಕೊಂಡಿದ್ದಾನೆ. ಆತ ಯಕ್ಷಗಾನದ ಆದಿಕವಿ, ಮಹಾಕವಿ. ಆತನ ಕವಿತೆ ಗಳು ಸುಲಭ ಗ್ರಾಹ್ಯವಾದವುಗಳು. ಎಡೆಯೆಡೆಯಲ್ಲಿ ನಾಡಗಾದೆಗಳು, ನಾಡಿನ ಜನರ ಆಡುಮಾತುಗಳು ಆತನಲ್ಲಿ ಹಾಸುಹೊಕ್ಕಾಗಿ ಹೊರಹೊಮ್ಮಿವೆ.

ಉದಾ : "ಬದನೆಕಾಯಿಯನ್ನು ಪರಬ್ರಹ್ಮವೆಂದ ಹಾಗೆ" "ಬರಿಗುಲ್ಲು, ನಿದ್ದೆ ಕೇಡು" "ಬೀಸಿದ ಕೈ ತಪ್ಪಿದರೆ ಸಾಸಿರ ಕಾಲ" ಇತ್ಯಾದಿ.

ಕಲ್ಲೊಳಂಬುಜವರಳಿದರೆ, ಮಲ್ಲಿಗೆ ದುರ್ಗಂಧವಾದರೆ, ಬೆಕ್ಕಿಗೆ ಕೋಡು ಬಂದರೆ ಮುಂತಾದ ಆಗಲಾರದ ದೃಷ್ಟಾಂತಗಳು ಸುಬ್ಬನಿಗೆ ಸ್ವತಃ ಸಿದ್ಧವಾಗಿವೆ. ಆತನ ಎಲ್ಲಾ ಕೃತಿಗಳನ್ನೂ ಅಮೂಲಾಗ್ರವಾಗಿ ಓದಿದರೆ ಈ ತರದ ಗಾದೆಗಳು, ಉಪಮೆಗಳು ಲೆಕ್ಕವಿಲ್ಲದಷ್ಟು ಸಿಗುತ್ತವೆ. ಶೋಭಾನೆಗಳೂ ಅವನ ಬರೆವಣಿಗೆಯ ಮೇಲೆ ಆಳವಾದ ಪ್ರಭಾವ ಬೀರಿರಬೇಕು. ಒಟ್ಟಿನಲ್ಲಿ ಯಕ್ಷಗಾನ ಕವಿ ಪಾರ್ತಿ ಸುಬ್ಬನು ಕನ್ನಡನಾಡು ಹೆಮ್ಮೆಯಿಂದ ಸ್ಮರಿಸಬೇಕಾದ ಮಹಾನ್ ಚೇತನವೆಂದು ನಿರ್ವಿವಾದವಾಗಿ ಹೇಳಬಹುದು.

—o—

# ಆರ್ಯಭಟ

—ಗೋ. ಪ್ರ. ಜೋಶಿ

"ಗುರುತ್ವಾಕರ್ಷಣ ಶಕ್ತಿಯನ್ನು ಕಂಡು ಹಿಡಿದವರಾರು ?" ಎಂಬ ಪ್ರಶ್ನೆಗೆ "ನ್ಯೂಟನ್" ಎಂದು ತಟ್ಟನೆ ಉತ್ತರ ಬರುವುದು. ಇದರಲ್ಲಿ ಮಕ್ಕಳದೇನು ದೋಷ? ನಾವು ಇದುವರೆಗೂ ಮಕ್ಕಳಿಂದ ಇದೇ ಉತ್ತರವನ್ನು ಹೇಳಿಸಿಕೊಳ್ಳುತ್ತ ಬಂದಿದ್ದೇವೆ. ಸರ್ ಐಸಾಕ್ ನ್ಯೂಟನ್ ಆಗಿಹೋದುದು 17ನೆಯ ಶತಮಾನದಲ್ಲಿ (ಕ್ರಿ. ಶ. 1642-1707). ಆದರೆ ಅದಕ್ಕೂ ಮೊದಲು 12ನೆಯ ಶತಮಾನದಲ್ಲಿ (ಕ್ರಿ. ಶ. 1150) "ಸಿದ್ಧಾಂತ ಶಿರೋಮಣಿ" ಎಂಬ ಗ್ರಂಥವನ್ನು ಬರೆದ ಭಾಸ್ಕರಾಚಾರ್ಯನು ಅದರಲ್ಲಿ ಗುರುತ್ವಾಕರ್ಷಣ ಶಕ್ತಿಯ ಉಲ್ಲೇಖ ಮಾಡಿದ್ದಾನೆ. "ಆಕೃಷ್ಟ ಶಕ್ತಿಶ್ಚ ತಯೋರ್ಮ ಹೀ ತಯಾಯತ್ ಸ್ವಸ್ಥಂ ಗುರುಸ್ವಾಭಿಮುಖಂ ಸ್ವಶಕ್ತ್ಯಾ। ಆಕೃಷ್ಯತೇ ಪತತೀವ ಭಾತಿ ಸಮೇ ಸಮಂತಾತ್ಕ್ವ ಪತಿತ್ವದಮ್ ॥ (ಸಿ. ಶಿ. ಭಾಸ್ಕರಾಚಾರ್ಯ). ಈ ಗುರುತ್ವಾಕರ್ಷಣ ಸಿದ್ಧಾಂತದ ಬಗ್ಗೆ ಟೀಕಾಕಾರರು ಸಾಕಷ್ಟು ಚರ್ಚಿಸಿದ್ದಾರೆ. ಇದರ ಮೇಲಿಂದ ನ್ಯೂಟನ್ನನಿಗಿಂತ ಐನೂರು ವರ್ಷಗಳ ಹಿಂದೆಯೇ ಭಾರತೀಯ ಖಗೋಲ ಶಾಸ್ತ್ರಜ್ಞರಿಗೆ ಗುರುತ್ವಾಕರ್ಷಣ ಸಿದ್ಧಾಂತ ಸಾಕಷ್ಟು ಪರಿಚಿತವಿದ್ದುದಾಗಿ ತಿಳಿದು ಬರುತ್ತದೆ. ವಸ್ತುಸ್ಥಿತಿ ಹೀಗಿರುವಾಗ ನ್ಯೂಟನ್ನನು ಗುರುತ್ವಾಕರ್ಷಣ ಶಕ್ತಿಯ ಸಿದ್ಧಾಂತವನ್ನು ಶೋಧಿಸಿದವರಲ್ಲಿ ಮೊತ್ತ ಮೊದಲಿಗ ಹೇಗೆ ?

ಭಾಸ್ಕರಾಚಾರ್ಯನ ಸಿದ್ಧಾಂತ ಶಿರೋಮಣಿಯು ಬ್ರಹ್ಮಗುಪ್ತನು ಬರೆದ "ಬ್ರಹ್ಮ ಸ್ಫುಟ ಸಿದ್ಧಾಂತ"ದ ಮೇಲಿನ ಉತ್ಕೃಷ್ಟ ಟೀಕಾಗ್ರಂಥವಾಗಿರುವುದರಿಂದ ಮತ್ತು ಭಾಸ್ಕರಾಚಾರ್ಯನು ವಿಷಯವನ್ನು ವ್ಯವಸ್ಥಿತವಾಗಿ ಮಂಡಿಸಲು, ಸ್ವಲ್ಪದರಲ್ಲಿಯೆ ವಿಷಯವನ್ನು ತಿಳಿಸಿಕೊಡಲು ಪದ್ಯರಚನೆಯ ಪದ್ಧತಿಯನ್ನವಲಂಬಿಸಿರುವುದರಿಂದ ಬ್ರಹ್ಮಗುಪ್ತನ 'ಬ್ರಹ್ಮಸ್ಫುಟ ಸಿದ್ಧಾಂತ'ವು ಹಿಂದೆ ಬಿದ್ದು ಜನರು 'ಸಿದ್ಧಾಂತ ಶಿರೋಮಣಿ'ಯನ್ನು ಅಪೇಕ್ಷೆಪಟ್ಟು ಅಭ್ಯಾಸ ಮಾಡತೊಡಗಿದರು. ಆದರೆ 'ಬ್ರಹ್ಮ ಸ್ಫುಟ ಸಿದ್ಧಾಂತ'ವಾದರೂ ಸ್ವತಂತ್ರ ಗ್ರಂಥ ಹೌದೋ ಅಲ್ಲವೋ ಎಂಬ ಬಗ್ಗೆ ಸಂದೇಹವೇ ಇದೆ. ಏಕೆಂದರೆ, ಬ್ರಹ್ಮಗುಪ್ತನು "ಖಂಡ ಖಾದ್ಯಕಾ" ಗ್ರಂಥವನ್ನು ಎರಡು ಭಾಗಗಳಲ್ಲಿ ಪೂರ್ಣಗೊಳಿಸಿದ್ದು, ಒಂಬತ್ತು ಅಧ್ಯಾಯಗಳನ್ನುಳ್ಳ (194 ಆರ್ಯಾವೃತ್ತಗಳು) ಅದರ ಪೂರ್ವಾರ್ಧವು ಪೂರ್ಣವಾಗಿ ಆರ್ಯಭಟೀಯದ ಸಂಕ್ಷಿಪ್ತ ರೂಪವೇ ಆಗಿದೆ. ಉತ್ತರಾರ್ಧದಲ್ಲಿ ಐದು ಅಧ್ಯಾಯಗಳಿದ್ದು (71 ಆರ್ಯಾವೃತ್ತಗಳು) ಈ ಭಾಗದಲ್ಲಿ ಆರ್ಯಭಟನ ಸಿದ್ಧಾಂತವನ್ನು ಬೊಟ್ಟುಮಾಡಿ ತೋರಿಸಿ ಅದನ್ನು ಚರ್ಚಿಸಿ ಟೀಕಿಸುತ್ತ ಕೊನೆಗೆ ಆರ್ಯಭಟನ ಬರಹವು ಶ್ರುತಿ-

ಸ್ಮೃತಿಗಳಿಗೆ ವಿರುದ್ಧವಾಗಿದೆಯೆಂದು ಹೇಳಿದ್ದಾನಲ್ಲದೆ (ಶಂ. ಬಾ. ದೀಕ್ಷಿತ-ಜ್ಯೋತಿಶ್ಶಾಸ್ತ್ರದ ಇತಿಹಾಸ, ಪುಟ-195) ತನ್ನ ಮತವೇ ಹೇಗೆ ಸರಿಯೆಂಬುದನ್ನು ಸಿದ್ಧ ಮಾಡಲು ಪ್ರಯತ್ನಿಸಿದ್ದಾನೆ.

''He (Brahmagupta) has planned his Khanda-khadyaka in two parts. In the first part, he has summarised the contents and the teaching of Aryabhata Siddhant without making any alterations of modification; but in second part he has stated his corrections and modifications which had to be applied to the first part in order to get accurate results.''

*(Aryabhatiya–Int. K S. Shukla, P. XXII)*

ಹೀಗೆ, ಈ ಆರ್ಯಭಟನು ಯಾರು ? ಎಂಬ ಬಗ್ಗೆ ನನ್ನ ಜಿಜ್ಞಾಸೆ ಹೆಚ್ಚಿತು. ಅದು ಇಮ್ಮಡಿಯಾಗಲು ಇನ್ನೂ ಒಂದು ಕಾರಣವಾಯಿತು. ಕ್ರಿ. ಶ. 1975ರ ಏಪ್ರಿಲ್ 19ರಂದು ಭಾರತ ಸರ್ಕಾರದ ವಿಜ್ಞಾನ ಶಾಖೆಯು "ಆರ್ಯಭಟ"ವೆಂಬ ಉಪಗ್ರಹವನ್ನು ಆಕಾಶದಲ್ಲಿ ಹಾರಿಸಿತು. ಆ ಉಪಗ್ರಹಕ್ಕೆ ಆರ್ಯಭಟ ಎಂಬ ಹೆಸರನ್ನೇಕೆ ಕೊಟ್ಟರು ? ಈ ಪ್ರಸಿದ್ಧ ವ್ಯಕ್ತಿ ಯಾರು ? ಅದರ ಮಾಹಿತಿ ದೊರಕಿಸಲು ಸತತ ಪ್ರಯತ್ನ ನಡೆಯಿತು. ನನಗೆ ದೊರೆತ ವಿಷಯ ಸಂಗ್ರಹವು ಸಾಮಾನ್ಯ ಸುಶಿಕ್ಷಿತ ಜಿಜ್ಞಾಸುಗಳಿಗೂ ವಿದ್ಯಾರ್ಥಿಗಳಿಗೂ ಉಪಯುಕ್ತವಾದೀತೆಂಬ ಭಾವನೆಯಿಂದ ಆರ್ಯಭಟನ ಜೀವನದ ಮೇಲೆ ಬೆಳಕು ಬೀರುವ ಯತ್ನ ಮಾಡುತ್ತಿದ್ದೇನೆ. ನನ್ನ ಈ ಯತ್ನ "ಉದ್ಬಾಹುರಿವ ವಾಮನಃ" ಎಂಬಂತಿದೆ.

ಆರ್ಯಭಟನು ಯಾರು ? ಎಲ್ಲಿಯವನು ? ಯಾವ ಕಾಲದವನು ? ಎಂಬೀ ಪ್ರಶ್ನೆಗಳು ನಮ್ಮ ಮುಂದೆ ಬಂದಾಗ ನಮ್ಮೆದುರು ಇಬ್ಬರು ಆರ್ಯಭಟರು ಬರುತ್ತಾರೆ. ಒಬ್ಬನು "ಆರ್ಯಭಟೀಯ" ಗ್ರಂಥವನ್ನು ಬರೆದ ಆರ್ಯಭಟ. ಇನ್ನೊಬ್ಬನು "ಮಹಾಸಿದ್ಧಾಂತ ಪದ್ಧತಿ" ಎಂಬ ಗ್ರಂಥದ ಲೇಖಕ ಆರ್ಯಭಟ. ಹೀಗಿದ್ದರೂ "ಆರ್ಯಭಟೀಯ" ಗ್ರಂಥದ ಲೇಖಕ ಮೊದಲನೆಯ ಆರ್ಯಭಟನೆಂದೂ "ಮಹಾಸಿದ್ಧಾಂತ ಪದ್ಧತಿ" ಗ್ರಂಥದ ಲೇಖಕ ಎರಡನೆಯ ಆರ್ಯಭಟನೆಂದೂ ಖಗೋಲಶಾಸ್ತ್ರ ಮತ್ತು ಗಣಿತಶಾಸ್ತ್ರದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ.

ಈ ಲೇಖನದಲ್ಲಿ ಮೊದಲನೆಯ ಆರ್ಯಭಟನ ಬಗೆಗೆ ಯಥಾಶಕ್ತಿ ಬೆಳಕು ಬೀರುವ ಪ್ರಯತ್ನ ಮಾಡಿದ್ದೇನೆ. ಮೊದಲನೆಯ ಆರ್ಯಭಟ ಹಾಗು ಎರಡನೆಯ ಆರ್ಯಭಟ ಇವರಿಬ್ಬರ ಕಾಲದ ನಡುವೆ 500 ವರ್ಷಗಳ ಅಂತರವಿದೆ ಎಂಬ ಮಾತನ್ನು ಮರೆಯಬಾರದು.

1ನೆಯ ಆರ್ಯಭಟ :—ಈತನ ಜನ್ಮ ಕ್ರಿ. ಶ. 476ರಲ್ಲಿ ಎಂದರೆ, ಶಕೆ 398ರಲ್ಲಿ ಆಯಿತು. ಹೀಗೆಂದು ಸ್ವತಃ ಆರ್ಯಭಟನೇ ತನ್ನ ಜನನದ ಬಗ್ಗೆ ಷಷ್ಟ್ಯಬ್ದಾನಾಂ ಷಷ್ಟಿರ್ಯದಾ ವ್ಯತೀತಾಸ್ತ್ರಯಶ್ಚ ಯುಗಪಾದಾಃ । ತ್ರ್ಯಧಿಕಾ ವಿಂಶತಿರಬ್ದಾಸ್ತದೇವ ಮಮ ಜನ್ಮನೋ ಽತೀತಾಃ 10 ("ಕಾಲಕ್ರಿಯಾಪಾದ—ಆರ್ಯಭಟ").

"ಮೂರು ಯುಗಪಾದಗಳು ಕಳೆದನಂತರ (60 x 60 x 3600) ಎಂದರೆ, ಕಲಿಯುಗದ 3600 ವರ್ಷಗಳ ಅನಂತರ ಶಕೆ 421ನೆಯ ವರ್ಷದಲ್ಲಿ ನಾನು ಜನಿಸಿ 23 ವರ್ಷಗಳಾಗಿದ್ದುವು" ಎಂದು ಹೇಳುತ್ತಾನೆ. ಇದರ ಮೇಲಿಂದ ಆರ್ಯಭಟನ ಜನ್ಮ ಶಕೆ 398ರಲ್ಲಿ ಅರ್ಥಾತ್ ಕ್ರಿ.ಶ. 476ರಲ್ಲಿ ಆಯಿತೆಂಬುದು ಸ್ಪಷ್ಟ. ಆತನು ಖಗೋಲಶಾಸ್ತ್ರದ ಗಣಿತದ ಮೂಲಕ ತನ್ನ ಜನ್ಮ ಯಾವಾಗ ಆಯಿತೆಂಬುದನ್ನೇನೋ ಸ್ಪಷ್ಟವಾಗಿ ಹೇಳಿದ್ದರೂ ತನ್ನ ತಾಯಿ-ತಂದೆಗಳ ಬಗೆಗೆ ಏನೂ ಹೇಳಿಲ್ಲ. ಟೀಕಾಕಾರರಾದರೂ ಈ ವಿಷಯದಲ್ಲಿ ಮೌನವನ್ನೇ ತಾಳಿದ್ದಾರೆ.

ತಾನು ಎಲ್ಲಿಯವನೆಂಬ ಪ್ರಶ್ನೆಗೆ ಆರ್ಯಭಟನು ಸ್ಪಷ್ಟವಾಗಿ ಉತ್ತರ ಕೊಟ್ಟಿಲ್ಲ. ಆದರೆ ಕುಸುಮಪುರವೆಂಬ ಹೆಸರನ್ನು ಮೇಲಿಂದಮೇಲೆ ಉಲ್ಲೇಖಿಸುವುದರಿಂದ ಆತನು ಹುಟ್ಟಿದ ಊರು ಕುಸುಮಪುರವೇ ಆಗಿದ್ದಿರಬೇಕೆಂದು ಹೇಳಲು ಯಾವ ಅಡ್ಡಿಯೂ ಇರಬಾರದು. "ಆರ್ಯಭಟಸ್ತ್ವಿಹ ನಿಗದಿತ ಕುಸುಮಪುರೇಽ ಭ್ಯರ್ಚಿತ ಜ್ಞಾನಂ" "(ಆರ್ಯಭಟೀಯ—ಗಣಿತ ಪಾದ, 1). ಕುಸುಮಪುರವೆಂದರೆ ಮಗಧ ರಾಜಧಾನಿಯಾದ ಪಾಟಲೀಪುತ್ರ — ಇಂದಿನ ಪಾಟ್ಣಾ.

"ಸೂರ್ಯಃಸ್ವಯಂ ಕುಸುಮಪುರ್ಯಭವತ್ ಕಲೌ ತು । ಭೂಗೋಲವಿತ್ ಕುಲಪ ಆರ್ಯಭಟಾಭಿಧಾನಃ ॥ ಸೂರ್ಯನು ಸ್ವತಃ ಆರ್ಯಭಟನ ರೂಪದಲ್ಲಿ ಕುಸುಮಪುರಕ್ಕೆ ಬಂದನೆಂದು ಹೇಳುತ್ತಾನೆ. "ನಮ್ಮ ಪ್ರಾಚೀನ ಗ್ರಂಥಗಳು ಅಪೌರುಷೇಯವೂ ಪರಿಪೂರ್ಣವೂ ಆಗಿರುವವೆಂಬ ತಿಳಿವಳಿಕೆ ಇದ್ದುದರಿಂದ ಆರ್ಯಭಟನ ಗ್ರಂಥವು ಪೌರುಷೇಯವಾಗಿದ್ದರೂ ಆತನ ಗ್ರಂಥ ಅಪೌರುಷೇಯವೆಂದು ಭಾವಿಸಲ್ಪಟ್ಟು ಅದನ್ನು ಕುರಿತು ಉಂಟಾದ ಪೂಜ್ಯಭಾವನೆ ಜ್ಯೋತಿಃಶಾಸ್ತ್ರದ ಪ್ರಗತಿಗೆ ಮಾರಕವಾಯಿತು" (ಶಂ. ಬಾ. ದೀಕ್ಷಿತ-ಜ್ಯೋತಿಶ್ಶಾಸ್ತ್ರ ಇತಿಹಾಸ-ಪುಟ-193). ಖಗೋಲಶಾಸ್ತ್ರ ಪ್ರಿಯರು ಪ್ರತ್ಯಕ್ಷ ಸೂರ್ಯನೇ ಜನ್ಮವೆತ್ತುವಂತೆ ಮಾಡಿದರು. ಇಂಥ ಶ್ರದ್ಧೆಯಿಂದಲೇ ನಮ್ಮ ಪ್ರಗತಿ ಕುಂಠಿತವಾಯಿತೆಂಬುದು ಮಾತ್ರ ನಿಜ.

ಎರಡನೆಯದಾಗಿ, ಇದೇ ಆರ್ಯಾವೃತ್ತದಲ್ಲಿ ಆರ್ಯಭಟನನ್ನು "ಕುಲಪ" (ಕುಲಪತಿ) ಎಂದು ಸಂಬೋಧಿಸಲಾಗಿದೆ. ಇದರಿಂದ ಆತನು ಕುಸುಮಪುರದ ಹತ್ತಿರ

ವಿದ್ದ ನಾಲಂದಾ ವಿದ್ಯಾಪೀಠದ ಕುಲಪತಿ ಇದ್ದಿರಬೇಕು. ಏಕೆಂದರೆ, ಆರ್ಯಭಟನ ಕಾಲದಲ್ಲಿ—ಎಂದರೆ, 5ನೆಯ ಮತ್ತು 6ನೆಯ ಶತಮಾನದಲ್ಲಿ—ನಾಲಂದಾ ವಿದ್ಯಾಪೀಠವು ಪ್ರಸಿದ್ಧವಾಗಿದ್ದು ಅಲ್ಲಿ ಖಗೋಲ ಮತ್ತು ಜ್ಯೋತಿಷಶಾಸ್ತ್ರದ ಸತತ ಅಭ್ಯಾಸ ನಡೆಯುತ್ತಿದ್ದಿತು. ನಾಲಂದಾದಲ್ಲಿ ವೇಧಶಾಲೆಯೂ ಇದ್ದುದರಿಂದ ಖಗೋಲ ಶಾಸ್ತ್ರಜ್ಞನಾದ ಆರ್ಯಭಟನು ನಾಲಂದಾದ ಕುಲಪತಿ ಇದ್ದಿರಬೇಕು (Ancient Universities – by D. G. Apte). ಒಂದು ವೇಳೆ ಆತನು ಕುಲಪತಿ ಪದವಿಯಲ್ಲಿದ್ದುದಾದರೆ ಆತನ ವೃತ್ತಿ ಶಿಕ್ಷಕನದೇ ಆಗಿದ್ದು ಅನೇಕ ಶಿಷ್ಯರೂ ಅವನಿಗೆ ಇದ್ದಿರಬೇಕೆಂಬುದು ಸಹಜ. ಪಾಂಡುರಂಗಸ್ವಾಮಿ, ಲಾಟದೇವ ಮತು ನಿಶಂಕು—ಹೀಗೆ ಮೂವರು ಶಿಷ್ಯಂದಿರ ಹೆಸರುಗಳನ್ನು ಭಾಸ್ಕರನು ತನ್ನ ಟೀಕೆಯಲ್ಲಿ ಉಲ್ಲೇಖಿಸಿದ್ದಾನೆ.

"ಏತದೇವ ಆಚಾರ್ಯಾರ್ಯಭಟಃ ಶಾಸ್ತ್ರವ್ಯಾಖ್ಯಾನ ಸಮಯೇ ವಾ ಪಾಂಡುರಂಗಸ್ವಾಮಿ, ಲಾಟದೇವ, ನಿಶಂಕು ಪ್ರಭೃತಿಭ್ಯಃ...." ಇದರಲ್ಲಿ ಭಾಸ್ಕರನು ಲಾಟದೇವನನ್ನು "ಆಚಾರ್ಯ ಲಾಟದೇವ"ನೆಂದು ಸಂಬೋಧಿಸಿದ್ದಾನೆ. ಮತ್ತೊಂದೆಡೆಯಲ್ಲಿ "ಸರ್ವಸಿದ್ಧಾಂತ ಗುರು" ಎಂದು ಕರೆದಿದ್ದಾನೆ. ಈ ಲಾಟದೇವನ ಹೆಸರಿನಲ್ಲಿ ಎರಡು ಗ್ರಂಥಗಳು ದೊರೆತಿವೆ. ಒಂದು "ರೋಮಕ ಸಿದ್ಧಾಂತ"ದ ಮೇಲಿನ ಟೀಕೆ; ಇನ್ನೊಂದು "ಪೌಲಿಶ ಸಿದ್ಧಾಂತದ ಮೇಲಿನ ಟೀಕೆ.

*(Aryabhatiya—K. S. Shukla, Intr. Page xxiii)*

ಆದರೆ, "ಆರ್ಯಭಟೀಯ"ದ ಟೀಕಾಕಾರನೂ "ಬ್ರಹ್ಮಸೂತ್ರ"ಕ್ಕೆ ಭಾಷ್ಯ ಬರೆದ 18ಜನ ಭಾಷ್ಯಕಾರರಲ್ಲಿ ಒಬ್ಬನೂ ಆಗಿದ್ದ ವಿದ್ಯಾಪತಿ ಒಂದನೆಯ ಭಾಸ್ಕರ ಭಟ (ಕ್ರಿ. ಶ. 650)ನ ಅಭಿಪ್ರಾಯದ ಪ್ರಕಾರ ಆರ್ಯಭಟನು ಅಶ್ಮಕ ದೇಶದ ನಿವಾಸಿಯಾಗಿದ್ದನು—ಎಂದಮೇಲೆ ಆತನ ಜನ್ಮವೂ ಅಶ್ಮಕ ದೇಶದಲ್ಲಿಯೇ ಆಗಿದ್ದಿರಬೇಕು. ಒಂದನೆಯ ಭಾಸ್ಕರನು "ಆರ್ಯಭಟೀಯ" ಗ್ರಂಥವನ್ನು "ಅಶ್ಮಕೀಯ"ವೆಂದು ಕರೆದಿದ್ದಾನೆ. "ಸೂರ್ಯೇಣ ಯಾತಮಿಹ ಪೃಚ್ಛತಿ ಚಾಶ್ಮಕೀಯೇ 17" ಶೀಘ್ರಂ ದಿನಾದಿ ಭಗಣಾಂಶ್ಚ ಮಚಾಶ್ಮಕೀಯ 18 "(ಭಾಸ್ಕರ ಟೀಕಾ)". ಇಲ್ಲಿ ಒಂದು ಪ್ರಶ್ನೆ ಏಳುತ್ತದೆ: ಒಂದನೆಯ ಭಾಸ್ಕರನು ಆರ್ಯಭಟನ ಹೆಸರನ್ನು ತೆಗೆದುಕೊಳ್ಳದೆ ಆತನನ್ನು (ಆರ್ಯಭಟನನ್ನು) ಅಶ್ಮಕನೆಂದೂ "ಆರ್ಯಭಟೀಯ" ಅಶ್ಮಕೀಯವೆಂದೂ ಏಕೆ ಕರೆದಿದ್ದಾನೆ? ಆರ್ಯಭಟನ ಅನುಯಾಯಿಗಳನ್ನೂ ಅಶ್ಮಕೀಯರೆಂದು ಕರೆಯಲು ಕಾರಣವೇನು ?"

"It seems that the astronomers of the Asmaka country of whom Bhaskara was one, were the followers of Aryabhata I. For patriotic reasons they called Aryabhata I by the name

Asmaka because he was an Asmaka, having originated from that country and themselves as followers of Asmaki"

"(ಅಶ್ಮಕೀಯಃ)"

ಸ್ವತಃ ಭಾಸ್ಕರನು ಅಶ್ಮಕ ದೇಶದ ನಿವಾಸಿಯಾಗಿದ್ದನು. ಅಶ್ಮಕ ಜನಪದವು ದಕ್ಷಿಣದಲ್ಲಿ ಗೋದಾವರಿಯ ದಂಡೆಯ ಮೇಲಿದ್ದು ಪಾಣಿನಿಯ ವ್ಯಾಕರಣದಲ್ಲಿ ಅದರ ಹೆಸರಿನ ಉಲ್ಲೇಖವಿದೆ (4-1-173). ಪಾಣಿನೀ ಕಾಲೀನ ಭಾರತ ವಾ ಕರಣ ಅಗ್ರವಾಲ-ಪುಟ 40).

ಮತ್ತೊಬ್ಬ ಟೀಕಾಕಾರನಾದ ನೀಲಕಂಠನ ಮತದಂತೆ ಆರ್ಯಭಟನ ಜನ್ಮ ಭೂಮಿ ಅಶ್ಮಕವಾಗಿದ್ದು ಜನ್ಮಸ್ಥಾನ ಅಶ್ಮಕ ಜನಪದವಾಗಿದ್ದಿತು. ಮುಂದೆ ಆರ್ಯಭಟನು ಕುಸುಮಪುರಕ್ಕೆ ಹೋಗಿ ಅಲ್ಲಿ ಗಣಿತ ಮತ್ತು ಖಗೋಲಶಾಸ್ತ್ರದ ಅಧ್ಯಯನ ಮಾಡಿದನು.

"It is not unlikely to presume that after his lesson was over at the school of Kusumapura, Aryabhata returned to his native place and wrote his mathematical works on the strength of knowledge he achieved there."

ಕುಸುಮಪುರವು ಬಿಹಾರದಲ್ಲಿ ಇರದೆ ದಕ್ಷಿಣದಲ್ಲಿಯೆ ಇದ್ದಿರಬೇಕೆಂದು ಪ್ರಸಿದ್ಧ ಗಣಿತಜ್ಞರೂ ಖಗೋಲಶಾಸ್ತ್ರಜ್ಞರೂ ಆದ ಶ್ರೀ ಶಂ. ಬಾ. ದೀಕ್ಷಿತರು ಅಭಿಪ್ರಾಯ ಪಟ್ಟಿದ್ದಾರೆ. ಪಾಟ್ಣಾದ ಹತ್ತಿರದ ಕುಸುಮಪುರವು ಆರ್ಯಭಟನ ವಾಸಸ್ಥಾನ ವೆಂಬ ತಿಳುವಳಿಕೆ ಇದ್ದರೆ ಅದನ್ನು ನಾನು ಒಪ್ಪುವುದಿಲ್ಲ. ಕುಸುಮಪುರವು ಖಂಡಿತ ವಾಗಿ ದಕ್ಷಿಣದಲ್ಲಿಯೇ ಇದ್ದಿರಬೇಕು. ಆರ್ಯಭಟೀಯ ಗ್ರಂಥದ ಟೀಕಾಕಾರರಲ್ಲಿ ಅನೇಕರು ಕೇರಳದವರಿದ್ದಾರೆ. ಎಂದಮೇಲೆ ಆರ್ಯಭಟನು ಕೇರಳದವನೇ ಆಗಿರ ಬೇಕೆಂದು ಕೆಲವರು ಟೀಕಾಕಾರರ ಅಭಿಮತವಿದೆ.

"It is not unlikely that after his lesson was over at the school of Kusumpur, Aryabhata returned to his native place at Kerala where he established a school and wrote his mathematical works. Bhaskara I was more popular in the South India than in the north ; but there is no mention of any place in Kerala as his seat of activity."

ಆರ್ಯಭಟನನ್ನು ಕುರಿತು ಹೇಳಬೇಕಾದ ಇನ್ನೊಂದು ವೈಶಿಷ್ಟ್ಯವೆಂದರೆ, ಗಣಿತಜ್ಞನಾದ ಭಾಸ್ಕರಾಚಾರ್ಯನು ತನ್ನ "ಸಿದ್ಧಾಂತ ಶಿರೋಮಣಿ" ಗ್ರಂಥದ ಮಂಗಲಾಚರಣೆಯ ಶ್ಲೋಕದಲ್ಲಿ ತನ್ನ ಕುಲದೇವತೆಯಾದ ಗಣಪತಿ ಹಾಗು

ಸರಸ್ವತಿಯರನ್ನು ಸ್ತುತಿಸಿ ಗ್ರಂಥಾರಂಭ ಮಾಡಿದ್ದಾನೆ. ಆದರೆ ಆರ್ಯಭಟನು ತನ್ನ "ಆರ್ಯಭಟೀಯ" ಗ್ರಂಥದ ಮಂಗಲಾಚರಣೆ ಹಾಗು ಉಪಸಂಹಾರದ ಶ್ಲೋಕಗಳಲ್ಲಿ ಬ್ರಹ್ಮನನ್ನು ಸ್ತುತಿಸಿದ್ದಾನೆ. ಮಂಗಲಾಚರಣೆಯ ಶ್ಲೋಕವು ಹೀಗಿದೆ :

"ಪ್ರಣಿಪತ್ಯೈಕಮನೇಕಂ ಕಂ ಸತ್ಯಾಂ ದೇವತಾಂ ಪರಬ್ರಹ್ಮ
ಆರ್ಯಭಟಸ್ತ್ರೀಣಿ ಗದತಿ ಗಣಿತಂ ಕಾಲಕ್ರಿಯಾ ಗೋಲವ್ ।

ಉಪಸಂಹಾರದ ಶ್ಲೋಕ ಇಂತಿದೆ :—

ಸದಸದ್ ಜ್ಞಾನ ಸಮುದ್ರಾತ್ ಸಮುದ್ಧೃತಂ, ಬ್ರಹ್ಮಣಾ ಪ್ರಸಾದೇನ ।
ಸದ್ ಜ್ಞಾನೋತ್ತಮ ರತ್ನಂ ಮಯಾ ನಿಮಗ್ನಂ ಸ್ವಮತಿನಾ ವಾ ॥
(ಆ. ಭ. ಗೋಲಪಾದ-49)

ಇದೊಂದು ಹೊಸ ಬಗೆಯ ಸ್ತುತಿ ಎಂದೇ ಹೇಳಬೇಕು. ಏಕೆಂದರೆ, ಮಂಗಲಾಚರಣದಲ್ಲಿ ಗಣಪತಿ, ಸರಸ್ವತಿ, ಲಕ್ಷ್ಮಿ, ಮಹಾದೇವ, ವಿಷ್ಣು ಮುಂತಾದ ದೇವತೆಗಳ ಸ್ತುತಿ ಇರುವುದು ಸಹಜ. ಆದರೆ ಬ್ರಹ್ಮದೇವನ ಸ್ತುತಿಯಿಂದ ಆರ್ಯಭಟನು ಗ್ರಂಥಾರಂಭವನ್ನೇಕೆ ಮಾಡಿದ? ಇದೇ ಆತನ ವಿಶೇಷತೆ. ಇದಕ್ಕೆ ಸಮರ್ಪಕ ಉತ್ತರ ಖಗೋಲಶಾಸ್ತ್ರಜ್ಞರಾದ ಶ್ರೀ ಶಂಕರ ಬಾಳಕೃಷ್ಣ ದೀಕ್ಷಿತ್ ಇವರ "ಜ್ಯೋತಿಷ ಶಾಸ್ತ್ರದ ಇತಿಹಾಸ"ದಲ್ಲಿ ದೊರೆಯುತ್ತದೆ. ಭಾರತದಲ್ಲಿ ಖಗೋಲ ಗ್ರಹಗಣಿತದಲ್ಲಿ ಮೂರು ಪಕ್ಷಗಳಿವೆ. ಒಂದು ಸೌರ ಪಕ್ಷ, ಎರಡನೆಯದು ಆರ್ಯಪಕ್ಷ, ಮೂರನೆಯದು ಬ್ರಹ್ಮ ಪಕ್ಷ. ಈ ರೀತಿ ಮೂರು ಪಕ್ಷಗಳಾಗಲು ಕಾರಣವೇನು ? ಕಲ್ಪದಲ್ಲಾಗಲಿ, ಯುಗದಲ್ಲಾಗಲಿ ವರ್ಷಗಳ ಮಾನ (ಎಣಿಕೆ) ಪ್ರತಿಯೊಂದು ಪಕ್ಷದಲ್ಲಿ ಸ್ವಲ್ಪ ಬೇರೆ ಬೇರೆಯಾಗಿದೆ. ಒಂದು ಕಾಲದಲ್ಲಿ, ಅರ್ಥಾತ್ ಕಲ್ಪದಲ್ಲಿ ಅಥವಾ ಮಹಾಯುಗದಲ್ಲಿ ಸಂಭವಿಸುವ ಗ್ರಹ ಮುಂತಾದುವುಗಳ ಗತಿ ಬೇರೆಯಾಗಿದೆ. ಇತರ ಅಂಶಗಳು ಎಲ್ಲ ಪಕ್ಷಗಳಲ್ಲಿ ಹಾಗು ಅವುಗಳನ್ನನುಸರಿಸುವ ಎಲ್ಲ ಗ್ರಂಥಗಳಲ್ಲಿ ಒಂದೇ ಆಗಿವೆಯೆಂದರೂ ಸಲ್ಲುತ್ತದೆ.

ಆರ್ಯಭಟನು ಖಗೋಲ ಶಾಸ್ತ್ರದಲ್ಲಿ ಬ್ರಹ್ಮ ಪಕ್ಷದ ಅನುಯಾಯಿ ಆಗಿದ್ದನು. ಇದಕ್ಕೆ ಕಾರಣವೆಂದರೆ, ಮಗಧ ದೇಶ ಖಗೋಲ ಶಾಸ್ತ್ರದಲ್ಲಿ ಬ್ರಹ್ಮ ಪಕ್ಷದ ಪಂಡಿತರಿಂದ ತುಂಬಿ ಹೋಗಿದ್ದಿತೆಂದೇನೂ ಅಲ್ಲ, ಅಥವಾ ಅಲ್ಲಿ ಇತರ ಪಕ್ಷಗಳ ಅಭಾವವಿದ್ದಿತೆಂದೂ ಅಲ್ಲ. ಸೌರಪಕ್ಷ ಹಾಗೂ ಆರ್ಯಪಕ್ಷಗಳ ಪಂಡಿತರು ಅಲ್ಲಿದ್ದರು. ಇಂದು ತಮಿಳುನಾಡು ಹಾಗು ಕೇರಳಗಳಲ್ಲಿ ಸೌರಪಕ್ಷವೂ, ಮಲಬಾರ, ಉಡುಪಿ, ಮಹಾರಾಷ್ಟ್ರಗಳಲ್ಲಿ ಆರ್ಯಪಕ್ಷವೂ, ಹಾಗೆಯೇ ಮಗಧ (ಬಿಹಾರ)ದಲ್ಲಿ ಬ್ರಹ್ಮಪಕ್ಷವೂ ಪ್ರಚಲಿತವಾಗಿವೆ. ಅವರಲ್ಲಿ ಜೈನ ಪಂಡಿತರ ಸಂಖ್ಯೆಯೇ ಹೆಚ್ಚು. ಇಂದಿಗೂ ಅಲ್ಲಿ (ಕ್ರಿ. ಶ. 593 ರಿಂದ ಇಂದಿನವರೆಗೆ) ಹೊಸ ವರ್ಷಾರಂಭವೂ ಶ್ರಾವಣ

ಬಹುಳ ಪ್ರತಿಪದೆಯಿಂದ ಆಗುತ್ತದೆ. (From the writings of the early Jain writers who belonged to Kusumpur and who were the followers of Brahma School of Thought).

"Kusumpur School-Umasvati (150 B. C.), one of the greatest metaphysicians of India, first cites the existence of the school mathematics. He resided in the city of Kusumpura (Pataliputra) near Patna. The school was originated long before the time of famous Jain sainst Bhadrabahu (B.C. 300) who lived at Kusumapura, the cultured centre of astronomy and mathematics. Mathematics and astronomy survived in this school for many centuries where Aryabhata took his lesson in the fifth century" *(Mathematics in Ancient and Medieval India—Dr. A.K. Bag, P. 8)*.

ಗ್ರಂಥವನ್ನು ಕುರಿತು:—ಆರ್ಯಭಟನ ಎರಡು ಗ್ರಂಥಗಳು ಪ್ರಸಿದ್ಧವಾಗಿವೆ. ಮೊದಲನೆಯದು "ಆರ್ಯಭಟೀಯ" ಮತ್ತು ಎರಡನೆಯದು "ಆರ್ಯಸಿದ್ಧಾಂತ", ಇಂದು "ಆರ್ಯಸಿದ್ಧಾಂತ ಉಪಲಬ್ಧವಿಲ್ಲ. ಆದರೂ ಆ ಗ್ರಂಥದ ಅಸ್ತಿತ್ವದ ಬಗ್ಗೆ 1ನೆಯ ಭಾಸ್ಕರನು ಬರೆದ "ಆರ್ಯಭಟೀಯ"ದ ಟೀಕೆಯಿಂದ ತಿಳಿದು ಬರುತ್ತದೆ.

ಇನ್ನೊಂದು ಗ್ರಂಥ "ಆರ್ಯಭಟೀಯ" ಮಾತ್ರ ಪ್ರಕಾಶಿತವಾಗಿದೆ. ಈ ಗ್ರಂಥದಲ್ಲಿ ಗೀತಿಕಾಪಾದ, ಗಣಿತಪಾದ, ಕಾಲಕ್ರಿಯಾಪಾದ, ಗೋಲಪಾದ ಎಂದು ನಾಲ್ಕು ಅಧ್ಯಾಯಗಳಿದ್ದು ಗೀತಿಕಾ ಪಾದದಲ್ಲಿ 13 ಶ್ಲೋಕಗಳೂ, ಗಣಿತಪಾದದಲ್ಲಿ 33 ಶ್ಲೋಕಗಳೂ, ಕಾಲಕ್ರಿಯಾಪಾದದಲ್ಲಿ 25 ಶ್ಲೋಕಗಳೂ, ಗೋಲಪಾದದಲ್ಲಿ 50 ಶ್ಲೋಕಗಳೂ ಇವೆ. ಹೀಗೆ ಒಟ್ಟು 121 ಶ್ಲೋಕಗಳಲ್ಲಿ ಗ್ರಂಥವು ಪೂರ್ಣಗೊಂಡಿದೆ (ಶ. ಬಾ. ದೀಕ್ಷಿತ). ತಾಂತ್ರಿಕ ದೃಷ್ಟಿಯಿಂದ ಬ್ರಹ್ಮಗುಪ್ತನು ಆರ್ಯಭಟೀಯವನ್ನು ಕುರಿತು ಕೆಲವು ಮತಭೇದಗಳನ್ನು ವ್ಯಕ್ತಗೊಳಿಸಿದ್ದಾನೆ. ಆರ್ಯಭಟೀಯವು ಶ್ರುತಿ-ಸ್ಮೃತಿಗಳಿಗೆ ವಿರುದ್ಧವಿದೆಯೆಂದು ಬ್ರಹ್ಮಗುಪ್ತನ ಅಭಿಪ್ರಾಯ. ತನ್ನ ಈ ಅಭಿಪ್ರಾಯವನ್ನು ಸಮರ್ಥಿಸಲು "ಖಂಡಖಾದ್ಯಕಾ" ಎಂಬ ಗ್ರಂಥವನ್ನು ಎರಡು ಭಾಗಗಳಲ್ಲಿ ಬರೆದಿದ್ದಾನೆ.

ಮುಂದೆ, ಆರ್ಯಭಟೀಯ ಗ್ರಂಥವು 9ನೆಯ ಶತಕದಲ್ಲಿ ಅರಬಸ್ತಾನಕ್ಕೆ ಒಯ್ಯಲ್ಪಟ್ಟು ಅಲ್ಲಿ ಅರಬ್ಬೀ ಭಾಷೆಗೆ ಅನುವಾದಗೊಂಡು "ಅರಜ್ ಪಹಾಜ್" ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಖಂಡಖಾದ್ಯಕಾ ಗ್ರಂಥವು ಕೂಡ ಅರಬಸ್ತಾನಕ್ಕೆ ಒಯ್ಯಲ್ಪಟ್ಟು ಇಂದಿಗೂ ಕೂಡ ಆ ದೇಶದಲ್ಲಿ "ಜಿಯ-ಉಲ್-ಅರಕಾಂಡ್" ಎಂಬ ಹೆಸರಿನಿಂದ ಪ್ರಸಿದ್ಧವಿದೆ.

"ಆರ್ಯಭಟೀಯು" ಗ್ರಂಥದ ಮೇಲೆ ಅನೇಕ ಪಂಡಿತರು ಟೀಕೆ ಬರೆದಿದ್ದಾರೆ. ಅವರಲ್ಲಿ ಹೆಚ್ಚಿನವರು ದಕ್ಷಿಣ ಭಾರತೀಯರೇ. ಅಂಥವರಲ್ಲಿ ಪ್ರಮುಖರೆಂದರೆ : 1ನೆಯ ಭಾಸ್ಕರ, ಪ್ರಭಾಕರ, ಗೋವಿಂದಸ್ವಾಮಿ. ಸೋಮೇಶ್ವರ, ಸೂರ್ಯದೇವ, ಪರಮೇಶ್ವರ, ಮಲ್ಲಯ್ಯ, ಮಾಧವ, ಭೂತಿವಿಷ್ಣು, ಕೃಷ್ಣದಾಸ, ಶ್ರೀಪತಿ ಮತ್ತು ರಘುನಾಥರಾಜ (ಶ್ರೀ ಕೆ. ಎಸ್. ಶುಕ್ಲ — ಆರ್ಯಭಟೀಯು—ಪು. XXV-viii). ಇದು ಮುಂಬಯಿ ವಿಶ್ವವಿದ್ಯಾಲಯುದಲ್ಲಿ ಆರ್ಯಭಟೀಯುದ ಮೇಲೆ ಒಂದು ಮರಾಠಿ ಟೀಕೆಯೂ ಉಪಲಬ್ಧವಿದ್ದು ಅದರ ಕರ್ತೃವು ಯಾರೆಂಬುದು ತಿಳಿಯದು. ಆ ಹಸ್ತ ಪ್ರತಿಯು ಸಂಖ್ಯೆ NS No. 334 ಇದೆ. ಮರಾಠೀ ಬಲ್ಲ ಯಾರಾದರೂ ಗಣಿತಜ್ಞರು ಹಾಗೂ ಖಗೋಲ ಶಾಸ್ತ್ರಜ್ಞರು ಅದನ್ನು ಸಂಪಾದಿಸುವಂತಾದರೆ ಆರ್ಯಭಟನ ಬಗ್ಗೆ ಹೊಸ ಸಂಗತಿಗಳು ಬೆಳಕಿಗೆ ಬರಬಹುದು.

ಇನ್ನೊಬ್ಬ ಟೀಕಾಕಾರನು ಕರ್ನಾಟಕದಲ್ಲಿ ಆಗಿ ಹೋಗಿದ್ದಾನೆ : ಆತನ ಹೆಸರು ರಘುನಾಥರಾಜ. ಈತನು ಒಂದು ಪ್ರದೇಶದ ರಾಜನಾಗಿದ್ದು ಆರ್ಯ ಭಟೀಯು ಗ್ರಂಥದ ಮೇಲೆ ಟೀಕೆ ಬರೆದಿದ್ದಾನೆ. ಈ ಟೀಕಾಕಾರನ ಇನ್ನೊಂದು ವೈಶಿಷ್ಟ್ಯವೆಂದರೆ : ಆರ್ಯಭಟೀಯುದೊಳಗಿನ ನಾಲ್ವತ್ತು ಉದಾಹರಣೆಗಳನ್ನು ಬಿಡಿಸಿ ತೋರಿಸಿದ್ದಾನೆ. ರಘುನಾಥ ರಾಜನು ಕರ್ನಾಟಕದ ಒಂದು ಪ್ರದೇಶದ (ರಾಯುಚೂರು ಜಿಲ್ಲೆಯು ಒಂದು ಭಾಗದ) ರಾಜನಾಗಿದ್ದು ಅಹೋಬಲವು ಆತನ ರಾಜಧಾನಿಯಾಗಿದ್ದಿತು. ಆತನು ತನ್ನ ವಂಶಾವಳಿಯುನ್ನು ಈ ರೀತಿ ಕೊಟ್ಟಿದ್ದಾನೆ: ವ್ಯಂಕಟ–ನಾಗರಾಜ–ಕೊಂಡಭೂಪ–ರಘುನಾಥರಾಜ. ಅಹೋಬಲವು ಕರ್ನಾಟಕ ದಲ್ಲಿದೆ. ಗರುಡಾದ್ರಿ, ವೇದಾದ್ರಿ, ಅಚಲ ಛಾಯಾ ಮೇರು—ಈ ಮೂರು ಬೆಟ್ಟ ಗಳ ಪೈಕಿ ಗರುಡಾದ್ರಿ ಬೆಟ್ಟದ ಅಡಿಯುಲ್ಲಿ ನರಸಿಂಹ ದೇವಾಲಯುವಿದೆ. ಇದು ಅಹೋಬಲ ನರಸಿಂಹ ದೇವಾಲಯುವೆಂದು ಪ್ರಸಿದ್ಧವಿದೆ. ಅಹೋಬಲವು ಒಂದು ಕಾಲಕ್ಕೆ ಹಿರಣ್ಯಕಶಿಪುವಿನ ರಾಜಧಾನಿಯಾಗಿದ್ದಿತು. ಹಿರಣ್ಯಕಶಿಪುವಿನ ಮಗ ಭಕ್ತ ಪ್ರಹ್ಲಾದನನ್ನು ಉಳಿಸಲು ಈ ಸ್ಥಳದಲ್ಲಿ ನರಸಿಂಹನು ಪ್ರಕಟನಾಗಿ ಹಿರಣ್ಯ ಕಶಿಪುವನ್ನು ಕೊಂದನು. ಇದೇ ಸ್ಥಳವೇ ರಘುನಾಥರಾಜನ ರಾಜಧಾನಿಯಾಗಿದ್ದಿತು. ರಘುನಾಥರಾಜನು ಕ್ರಿ. ಶ. 1592ರಲ್ಲಿ ಆರ್ಯಭಟೀಯು ಗ್ರಂಥದ ಮೇಲೆ ಟೀಕೆ ಬರೆದನು. ಈ ಟೀಕೆಯು ಆಧಾರದಿಂದ ಆರ್ಯಭಟನ ಜೀವನದ ಹಲವು ಸಂಗತಿ ಗಳನ್ನು ಸಂಗ್ರಹಿಸಬಹುದು. ಅಲ್ಲದೆ 1ನೆಯ ಭಾಸ್ಕರ, ಸೂರ್ಯದೇವ (ಈತನ ಜನ್ಮಭೂಮಿ ಶ್ರೀರಂಗಂ—ಇ. ಸ. 1191), ನೀಲಕಂಠ ಮುಂತಾದವರ ಟೀಕೆಗಳು ಕೂಡ ಆರ್ಯಭಟನ ಬಗೆಗೆ ಕೆಲ ಹೊಸ ಮಾಹಿತಿಗಳನ್ನು ಒದಗಿಸುತ್ತವೆ.

ಆರ್ಯಭಟೀಯು ಗ್ರಂಥದ ಟೀಕೆ ಬರೆದ ರಘುನಾಥರಾಜನು ಮಂಗಲಾಚರಣ ದಲ್ಲಿ ಹೀಗೆ ಸ್ತುತಿಸಿದ್ದಾನೆ :—

ವಂದೇ ಶ್ರೀ ವದನಾರವಿಂದ ತರಣಿಂ ಶ್ರೀ ಗಾರುಡಾದ್ರೀಶ್ವರಂ ।
ಪ್ರಹ್ಲಾದಾರ್ಚಿತ ಪಾದ ಪದ್ಮಯುಗಲಂ ಭಕ್ತಾಮೃತಾಬ್ಧಿಂ ಸದಾ ॥
ಭಾಷಾಧೀಶ್ವರ ಪಾರ್ವತೀಪ್ರಿಯ ಶಚೀನಾಥಾದಿ ಸಂಸೇವಿತಂ ।
ಜ್ಞಾನಾನಂದ ನಿಧಿಂ ನಿರಸ್ತ ಕಲುಷಂ ವಾತ್ಸಲ್ಯವಾರಾಂನಿಧಿಮ್ ॥

ಯಸ್ತನ್ವನ್ ಸುರವೈರಿ ಸೂನು ವಚನಂ ಸ್ತಂಭಾದಭೂತ್ ಸೂನೃತಂ ।
ಯಃ ಶ್ರೀ ವಕ್ತ್ರಸರೋಜ ದರ್ಶನಮುಷಾ ಶಾಂತಾಕೃತಿಸ್ತತ್ಕ್ಷಣಾತ್ ॥
ಲೋಕಾನ್ ಸಾಮರದಾನವಾನ್ ಸಮತನೋತ್ ಭೀತಾನ್ ಪುರಾನ್ನಿರ್ಭಯಾನ್ ।
ಸ ಶ್ರೀ ಗಾರುಡ ಶೈಲ ಶೇಖರ ಮಣಿರ್ದೇವೋ ನೃಸಿಂಹೋಽವತಾತ್ ॥

ಕರ್ಣಾಟವಂಶ ಕಲಶಾಂಬುಧಿ ಕೌಸ್ತುಭಾಭೋ ।
ವಿಖ್ಯಾತ ಕೀರ್ತಿರಭವದ್ ಭುವಿ ವೆಂಕಟಾಖ್ಯಃ ॥
ತಸ್ಯಾನಘಃ ಶುಭಗುಣೋ ಜನಿ ನಾಗರಾಜಃ ।
ತಸ್ಯಾತ್ಮಜೋ ಗುಣನಿಧಿರ್ಭುವಿ ಕೊಂಡಭೂಪಃ ॥

ತಸ್ಯ ಶ್ರೀಪತಿ ದೇಶಿಕೇಂದ್ರ ಕರುಣಾ ಪೂರ್ಣೋಽಸ್ತಿ ಪುತ್ರೋ ಮಹಾನ್ ।
ನಾಮ್ನಾ ಶ್ರೀ ರಘುನಾಥರಾಜ ಇತಿ ಯಃ ಖ್ಯಾತೋ ವಿಶುದ್ಧಾಶಯಃ ॥
ಲಕ್ಷ್ಮೀಗರ್ಭ ಸುಧಾಬ್ಧಿ ಕೌಸ್ತುಭಮಣಿಃ ಖ್ಯಾತಾಶ್ಚ ಯದ್ ಭ್ರಾತರಃ ।
ಸಂತಃ ಕಲ್ಪತರೋರಿವ ಪ್ರತಿದಿನಂ ಕಾಮಾನ್ ಲಭಂತೇ ಯತಃ ॥

ಕರೋತ್ಯಾರ್ಯಭಟ ವ್ಯಾಖ್ಯಾಂ ಕರ್ಣಾಟಕುಲಸಂಭವಃ ।
ವಿಶದಾಂ ವಿದುಷಾಂ ಪ್ರೀತ್ಯೈ ರಘುನಾಥಾವನೀಶ್ವರಃ ॥

**ಮುಕ್ತಾಯ** :—ಏವಂ ಗೋಲಪಾದೋ ವ್ಯುದ್ದೇಶತಃ ವ್ಯಾಖ್ಯಾತಃ । ಅತ್ರ ಗಣಿತಪಾದೇ ತ್ರಯಸ್ತ್ರಿಂಶತ್ ಸೂತ್ರಾಣಿ । ಕಾಲಕ್ರಿಯಾಪಾದೇ ಪಂಚವಿಂಶತಿಃ । ಗೋಲಪಾದೇ ಪಂಚಾಶತ್ । ಏವಂ ಅಷ್ಟೋತ್ತರ ಶತಮ್ ಅಸ್ಮಿನ್ ಪ್ರಬಂಧೇ । ಪೂರ್ವಸ್ಮಿನ್ ಪ್ರಬಂಧೇ ತ್ರಯೋದಶ । ಏವಂ ಸೂತ್ರಾಣಾಂ ಏಕವಿಂಶತ್ಯುತ್ತರ ಶತಮತೀಂದ್ರಿಯಾರ್ಥ ಪ್ರಕಾಶಕಮಾಚಾರ್ಯೇಣ ಪ್ರಣೀತಮ್ । ಏತಾನಿ ಚ ದ್ವಿಜೋತ್ತಮೇನ ಮಯಾ ವ್ಯಾಖ್ಯಾತಾನಿ । ಏವಮೇಕೈಕಸ್ಯ ಸೂತ್ರಸ್ಯ ಗ್ರಂಥ ಸಹಸ್ರೇಣಾಪಿ ನಿರವಶೇಷಾರ್ಥ ಪ್ರತಿಪಾದನಮಶಕ್ಯಮ್ ।

**ಭರತವಾಕ್ಯ** :—ಶ್ರೀ ಕರ್ಣಾಟವಂಶಕಲಶಾಂಬುಧಿ ಕೌಸ್ತುಭೇನ ಶ್ರೀಮದ್ ಗಾರುಡ ಶಿಖರ ಶಿರೋಮಣಿ ನರಹರಿ ಚರಣಾರವಿಂದ ಭೃಂಗರಾಜೇನ ಶ್ರೀ ಯತಿಪತಿ

ದೇಶಿಕ ಕರುಣಾಕಟಾಕ್ಷ ಲಬ್ಧ ವಿದ್ಯಾವಿಶೇಷೇಣ ಶ್ರೀ ರಘುನಾಥರಾಜೇನ ಕೃತಾ ಶ್ರೀ ಮದಾರ್ಯಭಟೀಯ ಗೋಲಪಾದ ವ್ಯಾಖ್ಯಾ ಸಂಪೂರ್ಣ ।

1. ರಘುನಾಥರಾಜನು ಬರೆದ ಆರ್ಯಭಟೀಯದ ಮೇಲಿನ ಟೀಕೆಯ ಹಸ್ತ ಲಿಖಿತ ಪ್ರತಿ ಲಖನೌ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿದ್ದು ಶ್ರೀ ಕೆ. ಎಸ್. ಶುಕ್ಲ ಎಂಬವರು ಆ ಬಗ್ಗೆ ಉಲ್ಲೇಖ ಮಾಡಿದ್ದಾರೆ. ಹಾಗೆಯೇ, ಅದರ ಹಸ್ತ ಲಿಖಿತ ಪ್ರತಿ ಅಹೋಬಲದ ಪರಿಸರದಲ್ಲಿ ದೊರೆಯುವ ಶಕ್ಯತೆಯಿದೆ. ಇದಕ್ಕಾಗಿ ಪ್ರಯತ್ನ ಹಾಗು ಸಂಶೋಧನೆ ಅಗತ್ಯವಿದೆ.

2. ಆರ್ಯಭಟನು ಪಾಟಲೀಪುರದ ಬಳಿಯ ಕುಸುಮಪುರದವನಾಗಿದ್ದರೆ ಆತ ಉತ್ತರ ದೇಶದವನೆಂದಾಗುತ್ತದೆ. ಆದರೆ ಈ ಗ್ರಂಥದ ಟೀಕಾಕಾರರೂ ದಕ್ಷಿಣ ದವರು ಹೇಗೆ ?

3. "ಆರ್ಯಭಟಸ್ತ್ವಿಹ ನಿಗದಿತ ಕುಸುಮಪುರೇಽಭ್ಯರ್ಚಿತಂ ಜ್ಞಾನಂ" । ಎಂದರೆ, "ಕುಸುಮಪುರದಲ್ಲಿ ಸಂಪಾದಿಸಿದ ಜ್ಞಾನ....ಆರ್ಯಭಟನು ಕುಸುಮಪುರ ದಲ್ಲಿ ಆರ್ಯಭಟೀಯವನ್ನು ಬರೆದ ಎಂಬರ್ಥ ಹೇಗೆ ಆದೀತು ?

4. (ಮೂಲ) ಲೇಖಕನು ಕುಸುಮಪುರದವನೂ ಟೀಕಾಕಾರನು ದಕ್ಷಿಣ ದವನು ಎಂಬುದರ ಪರಸ್ಪರ ಸಂಬಂಧವೇ ಹೊಂದುವುದಿಲ್ಲ.

5. ಆದುದರಿಂದ ಟೀಕಾಕಾರರಾದ 1ನೆಯ ಭಾಸ್ಕರ ಮತ್ತು ನೀಲಕಂಠ ಇವರ ಅಭಿಪ್ರಾಯದಲ್ಲಿ ಆರ್ಯಭಟನು ಅಶ್ಮಕ ದೇಶದ ಒಂದು ಊರವನಾಗಿದ್ದು ಕುಸುಮಪುರದಲ್ಲಿ ಸಂಪಾದಿಸಿದ ಜ್ಞಾನದ ಆಧಾರದಿಂದ ಅಶ್ಮಕ ದೇಶದಲ್ಲಿದ್ದು ಗ್ರಂಥ ರಚನೆ ಮಾಡಿದ ಆದುದರಿಂದ ಆರ್ಯಭಟನು ಅಶ್ಮಕ ದೇಶದವನೇ. ಅರ್ಥಾತ್, ದಕ್ಷಿಣದವನೇ ಎನ್ನಲಡ್ಡಿಯಿಲ್ಲ. ಕ್ರಿ. ಶ. 19ನೆಯ ಶತಮಾನದ ಪ್ರಸಿದ್ಧ ಗಣಿತಜ್ಞರೂ ಖಗೋಲ ಶಾಸ್ತ್ರಜ್ಞರೂ ಜ್ಯೋತಿಷಿಗಳೂ ಆಗಿದ್ದ ಶೈ.ವಾ.ಶಂ.ಬಾ. ದೀಕ್ಷಿತರು ಕೂಡ ಆರ್ಯಭಟನು ದಕ್ಷಿಣ ಭಾರತದವನೇ ಎಂದು ಅಭಿಪ್ರಾಯ ಪಟ್ಟಿದ್ದಾರೆ.

— ० —

# ಹಳೆಯಬೀಡಿನ ಉತ್ಖನನದಲ್ಲಿ ದೊರೆತಿರುವ ವೀರಗಲ್ಲು
(ಒಂದು ವಿಶ್ಲೇಷಣೆ)

—ಎಂ. ವಿ. ವಿಶ್ವೇಶ್ವರ

ಭಾರತೀಯ ಪುರಾತತ್ವ ಸರ್ವೇಕ್ಷಣದ ಉದ್ಯಾನ ವಿಭಾಗದವರು 1984–85 ರಲ್ಲಿ ಹಳೆಯಬೀಡಿನ (ಹಾಸನ ಜಿಲ್ಲೆ) ದೋರಸಮುದ್ರ ಕೆರೆಯ ಪಶ್ಚಿಮ ದಂಡೆಯ ಮೇಲೆ, ಹೊಯ್ಸಳೇಶ್ವರ ದೇವಾಲಯದ ಪೂರ್ವಕ್ಕೆ ಸುಮಾರು 300 ಮೀ. ದೂರ ದಲ್ಲಿರುವ ಸ್ಥಳದಲ್ಲಿ ಉದ್ಯಾನವನವನ್ನು ನಿರ್ಮಿಸುವುದಕ್ಕಾಗಿ ನೆಲವನ್ನು ಸಮ ಮಾಡುವ ಸಂದರ್ಭದಲ್ಲಿ ಕೆಲವು ವೀರಗಲ್ಲುಗಳ ತ್ರುಟಿತ ಭಾಗ ಮತ್ತು ಅಲಂಕೃತ ವಾಸ್ತುಭಾಗಗಳು ಬೆಳಕಿಗೆ ಬಂದುವು. ಈ ನಿವೇಶನದಲ್ಲಿ ಇದ್ದಿರಬಹುದಾದ ಸಾಂಸ್ಕೃತಿಕ ಹಾಗೂ ವಾಸ್ತು ಅವಶೇಷಗಳ ವೈಜ್ಞಾನಿಕ ಅಧ್ಯಯನಕ್ಕೆಂದು ಅದೇ ಇಲಾಖೆಯ ಬೆಂಗಳೂರು ವೃತ್ತದವರು ಇಲ್ಲಿ ಉತ್ಖನನ ಕಾರ್ಯವನ್ನು ಕೈಗೊಂಡಾಗ ಮತ್ತಷ್ಟು ಹೆಚ್ಚಿನ ಮಾಹಿತಿ ಲಭ್ಯವಾದುವು[2]. ಈ ಉತ್ಖನನದಲ್ಲಿ ಸಂಶೋಧಿಸ ಲಾಗಿರುವ ಶಾಸನವಿರುವ ವೀರಗಲ್ಲು ಮತ್ತು ಅದರ ಪರಿಸರದಲ್ಲಿ ದೊರೆತಿರುವ ವಾಸ್ತು ಅವಶೇಷಗಳ ಧಾರ್ಮಿಕ, ಸಾಮಾಜಿಕ ಹಿನ್ನೆಲೆಯನ್ನು ಅರ್ಥೈಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪ್ರಸ್ತುತ ಶಾಸನವಿರುವ ವೀರಗಲ್ಲನ್ನು, (ಛಾಯಾಚಿತ್ರ 1) ಸು. 23ಸೆಂ.ಮೀ. ದಪ್ಪವಾದ ಆಯತಾಕಾರದ (ಸು. 1.10 ಮೀ. ಎತ್ತರ, 0.52 ಮೀ. ಅಗಲ) ಹಸಿರು ಮಿಶ್ರಿತ ನೀಲಿ ಛಾಯೆಯುಳ್ಳ ಊದಾಬಣ್ಣದ ಬಳಪದ ಕಲ್ಲಿನ (Chloritic schest) ಫಲಕದ ಮೇಲೆ ಕಂಡರಿಸಲಾಗಿದೆ. ಫಲಕದ ಮೇಲ್ಭಾಗ ಕಮಾನಿನಾಕಾರ ದಲ್ಲಿದೆ. ಶಿರ ಕೆಳಗಣ ಭಾಗವನ್ನು ಒರಟಾಗಿ ಕೆತ್ತಿ ಭೂಮಟ್ಟದಿಂದ ಕೆಳಗೆ ಹುಗಿಯಲಾಗಿದೆ. ಶಾಸನವು ಒಟ್ಟು ಒಂಭತ್ತು ಸಾಲುಗಳಲ್ಲಿದೆ. ಮೊದಲ ಸಾಲಿನ ಮೇಲ್ಭಾಗದಲ್ಲಿ, ಮೂರು–ನಾಲ್ಕು ಮತ್ತು ಏಳು–ಎಂಟನೆಯ ಸಾಲುಗಳ ನಡುವೆ, ಶಿಲ್ಪ ಪಟ್ಟಿಕೆಗಳಿವೆ. ತಗ್ಗಾದ, ಆಯತಾಕಾರದ ಚೌಕಟ್ಟಿನೊಳಗೆ ತೆಳುವಾದ ಉಬ್ಬು ಶಿಲ್ಪರೂಪದಲ್ಲಿ (1ರಿಂದ 1.5 ಸೆಂ.ಮೀ. ದಪ್ಪ) ಅದನ್ನು ಕಂಡರಿಸಲಾಗಿದೆ. ಬರೆಹವಿರುವ ಭಾಗ ಹೊಳಪಾಗುವಂತೆ ನಯಗೊಳಿಸಿದ್ದು, ಕ್ರಿ. ಶ. ಹನ್ನೆರಡನೆಯ ಶತಮಾನದ ಕನ್ನಡ ಲಿಪಿಯಲ್ಲಿ ಬರೆಯಲಾಗಿರುವ ಅಕ್ಷರಗಳನ್ನು ಸ್ಫುಟವಾಗಿ ಆಳ ವಾಗಿ ಕೊರೆಯಲಾಗಿದ್ದು, ಸಾಕಷ್ಟು ಉತ್ತಮ ರಕ್ಷಿತ ಸ್ಥಿತಿಯಲ್ಲಿರುವುದರಿಂದ ಸುಲಭವಾಗಿ ಓದಲು ಸಾಧ್ಯವಾಗುವಂತಿವೆ.

ಮೂರು ಪಟ್ಟಿಕೆಗಳಲ್ಲಿರುವ ವೀರಗಲ್ಲಿನ ಶಿಲ್ಪವು ವಿನ್ಯಾಸ, ವಿವರಗಳಲ್ಲಿ ತತ್ಸಮ

ಕಾಲೀನ ಇತರ ಶಿಲ್ಪಗಳನ್ನೇ ಹೋಲುತ್ತಿದ್ದರೂ, ಕೆಳಪಟ್ಟಿಕೆಯಲ್ಲಿನ ಶಿಲ್ಪ ಮಾತ್ರ ಸ್ವಲ್ಪ ಭಿನ್ನಶೈಲಿಯಲ್ಲಿದೆ. ಕೆಳಪಟ್ಟಿಕೆಯ ಬಲಗಡೆ ಶೃಂಗಾರ ಸನ್ನಿವೇಶದಲ್ಲಿರುವ ದಂಪತಿಗಳ ಚಿತ್ರಣವಿದೆ. ಪುರುಷನು ತನ್ನ ಬಲಗೈಯಲ್ಲಿ ಹೂವನ್ನು ಹಿಡಿದು, ಒತ್ತಾಗಿ ಹೆಣೆದಿರುವ ಮಡದಿಯ ಮುಡಿಗೆ ಅದನ್ನು ಮುಡಿಸುವ ಪ್ರಯತ್ನದಲ್ಲಿರುವಂತೆ ಕಾಣುತ್ತದೆ. ಆಕೆ ತನ್ನ ಬಲಗೈಯನ್ನು ಪುರುಷನ ಎಡಭುಜದ ಮೇಲಿರಿಸಿ, ಬಹುಶಃ ಅವನನ್ನು ಆಲಿಂಗಿಸುವ ಪ್ರಯತ್ನದಲ್ಲಿರುವಂತೆ ಚಿತ್ರಿತಳಾಗಿದ್ದಾಳೆ. ಇದೇ ಪಟ್ಟಿಕೆಯ ಎಡಗಡೆ ಮಂಚದಂತೆ ತೋರುವ ಅಲಂಕೃತ ಪೀಠವಿದ್ದು ಅದರ ಮೇಲೆ ಕುಳಿತ ಈ ದಂಪತಿಗಳು ಸರಸ ಸಂಭಾಷಣೆಯಲ್ಲಿ ತಲ್ಲೀನರಾಗಿರುವಂತಿದೆ.

ಶಾಸನದ ಮೂರು–ನಾಲ್ಕನೆಯ ಸಾಲುಗಳ ನಡುವೆ ಇರುವ ಎರಡನೆಯ ಶಿಲ್ಪ ಪಟ್ಟಿಕೆಯಲ್ಲಿ ವಿಮಾನದಂತಹ ವಾಹನ ಒಂದರಲ್ಲಿ ಚಾಮರಧಾರಿಣಿಯರಾದ ಅಪ್ಸರ ಸ್ತ್ರೀಯರು ಈ ದಂಪತಿಗಳನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರವಿದೆ. ಮೊದಲಿನ ಸಾಲಿನ ಮೇಲಿರುವ ಪಟ್ಟಿಕೆಯ ಮಧ್ಯದಲ್ಲಿ ಪೀಠಸಹಿತವಾದ ಶಿವಲಿಂಗ, ಎಡಬದಿಗೆ ನಂದಿಯ ಚಿತ್ರ ಇವೆ. ಬಲಗಡೆ ಅಂಜಲಿಬದ್ಧರಾಗಿ ಕುಳಿತ ದಂಪತಿಗಳ ಚಿತ್ರಣ ವಿದ್ದು, ಮೇಲೆ ಪುಷ್ಪಮಾಲೆ ಹಿಡಿದ ವ್ಯಕ್ತಿ ಹಾಗೂ ಋಷಿಯಂತೆ ಕಾಣುವ ಇನ್ನೊಬ್ಬ ಚಿತ್ರಿತನಾಗಿದ್ದಾನೆ. ಇಂತಹ ವೀರಗಲ್ಲಿನ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ಸೂರ್ಯಚಂದ್ರರ ಕೆತ್ತನೆಗಳು ಇಲ್ಲಿ ಇಲ್ಲದಿರುವುದು ಪ್ರಸ್ತುತ ಶಿಲ್ಪ ವಿನ್ಯಾಸದಲ್ಲಿನ ಒಂದು ವಿಶೇಷವೆನ್ನಬೇಕು.

ಐದು–ಆರನೆಯ ಸಾಲುಗಳಲ್ಲಿ ಉಲ್ಲೇಖಿತವಾಗಿರುವಂತೆ ಈ ಶಾಸನದ ತೇದಿ "ನಂದನ ಸಂವತ್ಸರದ ಕಾರ್ತಿಕ ಬಹುಲ ೧೪, ಬೃಹವಾರ". ಆಗ ಆಳುತ್ತಿದ್ದ ದೊರೆ ಹೊಯ್ಸಣ ನರಸಿಂಹದೇವ. ಶಾಸನದಲ್ಲಿ ಆಗ ಪ್ರಚಲಿತವಿದ್ದ ಶಕವರ್ಷದ ಉಲ್ಲೇಖ ವಿಲ್ಲ. ಹೊಯ್ಸಳ ರಾಜವಂಶದಲ್ಲಿ ನರಸಿಂಹನೆಂಬ ಹೆಸರಿನ ಮೂವರು ಆಳಿಕೆ ನಡೆಸಿದ್ದು, ಆ ಮೂರೂ ಅರಸರ ಆಡಳಿತ ಕಾಲದಲ್ಲಿ ನಂದನ ಸಂವತ್ಸರ ಬರುವು ದಾದರೂ ಶಾಸನೋಕ್ತವಾದ ಉಳಿದೆಲ್ಲ ತೇದಿಯ ವಿವರ ಹೊಯ್ಸಳ ವಿಷ್ಣುವರ್ಧನನ ಮಗ (ಮೊದಲನೆ) ನರಸಿಂಹನ ಆಳಿಕೆಯ ಕಾಲದಲ್ಲಿ ಬರುವ ಕ್ರಿ. ಶ. 1172 (ಶಾ. ಶ. 1094), ನವೆಂಬರ್ ತಿಂಗಳ 16ನೇ ತಾರೀಖು ಗುರುವಾರಕ್ಕೆ ಸಂ ಹೊಂದುತ್ತವೆ.[3]

ಲಖ್ಖಣರಾಹುತ ಮತ್ತು ಆತನ ಪತ್ನಿ ಮಾಚವ್ವೆ ಎಂಬವರು ಸುರಲೋಕ ಪ್ರಾಪ್ತರಾದರು. ಮೃತರ ಆತ್ಮಶಾಂತಿಗೆ, ಇಲ್ಲವೆ ಅವರ ಸ್ಮರಣೆಯಲ್ಲಿ ಮಕ್ಕಳಾದ ಸಿರಿಯವ್ವೆ, ಸುಗ್ಗವ್ವೆಯರು "ಪ್ರರಾಕ (ಪರೋಕ್ಷ) ವಿನಯ"ವನ್ನು ಮಾಡಿ ಪ್ರಸ್ತುತ ಶಾಸನ ಕಲ್ಲನ್ನು ನಿಲ್ಲಿಸಿದರು"—ಎಂಬುದು ಶಾಸನದಿಂದ ತಿಳಿದು ಬರುವ ಮುಖ್ಯ



ಚಿತ್ರ ೧; ಉತ್ಖನನದಲ್ಲಿ ದೊರೆತಿರುವ ವೀರಗಲ್ಲು, ಹಳೆಯಬೀಡು




ನಕ್ಷೆ : ೧; ಹಳೆಯಬೀಡಿನ ಪಶ್ಚಿಮದಂಡೆಯ ಮೇಲಿನ ಉತ್ಖನನ



ಚಿತ್ರ ೨; ಜಲವಾಹಕಗಳು ಮತ್ತು ಕೊಳ, ಹಳೆಯಬೀಡು



ಚಿತ್ರ ೩; ವೀರಗಲ್ಲು ಮತ್ತು ಇತರ ನಿರ್ಮಿತಿಗಳು, ಹಳೆಯಬೀಡು

ಸಂಗತಿ. ಆಗ ದೋರಸಮುದ್ರದ ನೆಲದಿ (ವೀಡಿ)ನಿಂದ ರಾಜ್ಯವಾಳುತ್ತಿದ್ದ ದೊರೆ ಮಹಾಮಂಡಲೇಶ್ವರ ತ್ರಿಭುವನಮಲ್ಲ ವಿಷ್ಣುವರ್ಧನ ಪ್ರತಾಪ ಹೊಯ್ಸಣ ನಾರಸಿಂಹದೇವ. ಲಖ್ಖಣರಾಹುತನು ನರಸಿಂಹದೇವನ (ಕಿ. ಶ. 1141–1173) ಸೇನೆಯುಲ್ಲಿ ಗಣನೀಯ ಪದವಿ ಹೊಂದಿದ್ದನೆಂದು ಊಹಿಸಬಹುದು. ಆದರೆ ಈ ದಂಪತಿಗಳು ಸುರಲೋಕಸಾಪ್ರಪ್ತರಾದುದರ ನಿರ್ದಿಷ್ಟ, ಸಂದರ್ಭ, ಹಿನ್ನೆಲೆಗಳ ಬಗೆಗೆ ಹೆಚ್ಚಿನ ವಿವರ ಯಾವುವೂ ಶಾಸನದಲ್ಲಿ ದೊರೆಯುವು.[5]

ಪ್ರಸ್ತುತ ಶಾಸನದಿಂದ ದೊರೆಯುವ ವ್ಯಕ್ತಿವಿಷಯಕ ಮಾಹಿತಿಗಿಂತ ಈ ವೀರಗಲ್ಲನ್ನು ಸ್ಥಾಪಿಸಿರುವ ಸ್ಥಳ, ಅದರ ಪರಿಸರದಲ್ಲಿ ಸಂಶೋಧಿತವಾಗಿರುವ ವಾಸ್ತು ಅವಶೇಷಗಳಲ್ಲಿಯೇ ಇದರ ಹೆಚ್ಚಿನ ಪ್ರಾಮುಖ್ಯ ಅಡಗಿದೆ ಎನ್ನಬೇಕು. ಆ ಕಾರಣ, ಈ ವಾಸ್ತು ಅವಶೇಷಗಳ ಬಗೆಗೆ ಹೆಚ್ಚಿನ ವಿವರಣೆ ಆವಶ್ಯಕವೆನಿಸುತ್ತದೆ.[6]

ದೋರಸಮುದ್ರದ ಕೆರೆಯ ಪಶ್ಚಿಮ ದಂಡೆಯ ಮೇಲೆ, ಕೋಟೆಯ ಒಳಭಾಗಕ್ಕೆ ಹೊಂದಿಕೊಂಡಂತೆ ಇರುವ ಪ್ರದೇಶದಲ್ಲಿ ನಡೆದ ಉತ್ಖನನದಲ್ಲಿ ದೇವಾಲಯ ಸಂಕೀರ್ಣ ಒಂದರ ವಾಸ್ತು ಅವಶೇಷ, ಅದರೊಂದಿಗೆ ಸುಸಂಬದ್ಧ ರೀತಿಯಲ್ಲಿ ಜೋಡಿಸಿರುವ ಶಿಲಾನಿರ್ಮಿತ ಜಲವಾಹಕ, ಅದಕ್ಕೆ ಹೊಂದಿಕೊಂಡಂತೆ ಇರುವ ಅಷ್ಟೇನೂ ಆಳವಾಗಿಲ್ಲದ, ಚೌಕಾಕಾರದ ಕೊಳಗಳು ಬೆಳಕಿಗೆ ಬಂದಿವೆ. ದೇವಾಲಯ ಸಂಕೀರ್ಣದಲ್ಲಿ ಪೂರ್ವಾಭಿಮುಖವಾಗಿ ಒಂದು ದ್ವಿಕೂಟ ಮತ್ತು ಪಶ್ಚಿಮಾಭಿಮುಖವಾಗಿ ಒಂದು ಏಕಕೂಟ ದೇವಾಲಯಗಳಿವೆ.

ಅಧಿಷ್ಠಾನದ ವಜ್ರಪಟ್ಟ ಕುಮುದ ಭಾಗದವರೆಗೆ ಮಾತ್ರವೇ ಉಳಿದಿರುವ ದ್ವಿಕೂಟ ದೇವಾಲಯದ ತಲವಿನ್ಯಾಸದಲ್ಲಿ ಚೌಕಾಕಾರದ (ಸು. 7 × 7 ಮೀ.) ಒಂದು ಮಂಡಪ, ಅದರ ಉತ್ತರ, ದಕ್ಷಿಣ ಬದಿಗಳಲ್ಲಿ ಪರಸ್ಪರ ಎದುರಾಗಿ ತೆರೆದುಕೊಳ್ಳುವ ಚೌಕಾಕಾರದ (5 × 5 ಮೀ.) ಎರಡು ಗರ್ಭಗೃಹಗಳಿವೆ. ಮಂಡಪದ ಉತ್ತರ ಭಾಗ ಹಾಗೂ ಉತ್ತರದ ಗರ್ಭಗೃಹ ಬಹಳಷ್ಟು ಹಾಳಾಗಿವೆ. ಉತ್ತರದ ಗರ್ಭಗೃಹದಲ್ಲಿ ಇರುವ ಪೀಠದ ಮೇಲೆ ನಂದಿಯ ಶಿಲ್ಪವಿದ್ದರೆ, ದಕ್ಷಿಣದ ಗರ್ಭಗೃಹದಲ್ಲಿ ವಿಗ್ರಹವನ್ನು ಕೂರಿಸಲು ಮಾಡಿರುವ ಚೌಕಾಕಾರದ ಗರ್ತ(ಕುಳಿ)ವಿರುವ ಅಲಂಕಾರ ರಹಿತ ಪೀಠಮಾತ್ರವಿದ್ದು, ಬಹುಶಃ ಅದರ ಮೇಲೆ ಶಿವಲಿಂಗವಿದ್ದಿರಬಹುದೆಂದು ಊಹಿಸಬಹುದು. ಮಂಡಪದ ಮುಂದೆ ಪೂರ್ವದಲ್ಲಿ ಮೆಟ್ಟಿಲುಗಳಿಂದ ಕೂಡಿದ ಪ್ರವೇಶದ್ವಾರವಿದ್ದಿರಬೇಕು. ಸ್ಥಳದಲ್ಲಿಯೇ ದೊರೆತಿರುವ ಆನೆಯ ಶಿಲ್ಪವಿರುವ ಕಟಾಂಜನ ಭಾಗದಿಂದ ಬಹುಶಃ ಮೆಟ್ಟಿಲುಗಳ ಎರಡೂ ಬದಿಯುಲ್ಲಿ ಅಲಂಕೃತ ಆನೆಯ ಶಿಲ್ಪಗಳನ್ನು ಜೋಡಿಸಲಾಗಿತ್ತೆಂದೂ ಊಹಿಸಬಹುದು.

ದ್ವಿಕೂಟ ದೇವಾಲಯದ ಉತ್ತರದಲ್ಲಿ ಬೆಳಕಿಗೆ ಬಂದಿರುವ ಏಕಕೂಟ

ದೇವಾಲಯವೂ ಅಧಿಷ್ಠಾನದವರೆಗೆ ಮಾತ್ರವೇ ಉಳಿದಿದ್ದರೂ ಹೆಚ್ಚು ಸುಸ್ಥಿತಿಯಲ್ಲಿದೆ ಎನ್ನಬಹುದು ಇದರ ತಲವಿನ್ಯಾಸದಲ್ಲಿ ಚೌಕಾಕಾರದ ಗರ್ಭಗೃಹ ಮತ್ತು ಅದರ ಮುಂದಿನ ಮಂಡಪ ಮಾತ್ರ ಇವೆ. ಎರಡೂ ದೇವಾಲಯಗಳ ಗರ್ಭಗೃಹ, ಮಂಡಪಗಳ ವಿನ್ಯಾಸದಲ್ಲಿ ಭದ್ರ, ಉಪಭದ್ರ ರೀತಿಯ ಮುಂಚಾಚುವಿಕೆಯನ್ನೂ ಕಾಣಬಹುದು. ಏಕಕೂಟ ದೇವಾಲಯದ ಗರ್ಭಗೃಹದ ಬಡಗಣ ಗೋಡೆಯಿಂದ ಹೊರಬಂದಿರುವ ವಾರಿಮಾರ್ಗ(ಪ್ರನಾಳ)ವನ್ನು ಪಕ್ಕದಲ್ಲಿರುವ ಯೋನಿಪೀಠದ ಆಕಾರದಲ್ಲಿ ಕಂಡರಿಸಲಾಗಿರುವ ಜಲವಾಹಕಕ್ಕೆ ಜೋಡಿಸಿದೆ. ಜಲವಾಹಕವನ್ನು ಚೌಕಾಕಾರದ (2×2ಮೀ.) ಸಣ್ಣ ಕೊಳಕ್ಕೆ ಸೇರಿಸಲಾಗಿದೆ. (ಛಾಯಾಚಿತ್ರ 2) ಒರಟಾಗಿ ಕೆತ್ತಿರುವ ಕಲ್ಲುಗಳಿಂದ ಈ ಕೊಳವನ್ನು ನಿರ್ಮಿಸಲಾಗಿದ್ದು ಅದರ ಒಳ ಗೋಡೆ ಮತ್ತು ನೆಲವನ್ನು ಗಾರೆಯ ದಪ್ಪ ಪದರದಿಂದ ನಯಗೊಳಿಸಿರುವುದರ ಕುರುಹು ಅಲ್ಲಲ್ಲಿ ಕಂಡುಬರುತ್ತದೆ. ಕೊಳದ ಪಶ್ಚಿಮಕ್ಕೆ ಇನ್ನೊಂದು ಜಲವಾಹಕವಿದ್ದು, ಬಹುಶಃ ಆ ದಿಕ್ಕಿನಲ್ಲಿರಬಹುದಾದ ಮತ್ತೊಂದು ದೇವಾಲಯದಿಂದ ಅಭಿಷೇಕದ ಜಲವನ್ನು ಸಂಗ್ರಹಿಸಲು ಕಲ್ಪಿಸಿದ್ದ ಏರ್ಪಾಡನ್ನು ಸೂಚಿಸುತ್ತದೆ.[7] ಏಕಕೂಟ ದೇವಾಲಯದ ಪಶ್ಚಿಮ ಭಾಗದಲ್ಲಿಯೂ ಇಂತಹುದೇ ಚೌಕಾಕಾರದ (2×2ಮೀ. ಚೌಕ ಮತ್ತು 1.5 ಮೀ ಆಳ) ಕೊಳದ ಅವಶೇಷ ಬೆಳಕಿಗೆ ಬಂದಿದೆ.

ಪ್ರಸ್ತುತ ವೀರಗಲ್ಲನ್ನು ದ್ವಿಕೂಟ ದೇವಾಲಯದ ಉತ್ತರಕ್ಕೆ, ಆನೆಯ ಶಿಲ್ಪದ ಎಡಕ್ಕೆ, ಪೂರ್ವಾಭಿಮುಖವಾಗಿರುವಂತೆ ಸ್ಥಾಪಿಸಲಾಗಿದೆ. ಇದರ ಎಡಬಲ ಬದಿಗಳಲ್ಲಿ ಒಂದೊಂದರಂತೆ ಎರಡು ಪಿರಮಿಡಾಕಾರದ ನಿರ್ಮಾಣಗಳಿರುವುದು ಗಮನಾರ್ಹ (ಛಾಯಾಚಿತ್ರ 3; ನಕ್ಷೆ 1). ಬಲಗಡೆ ಇರುವ ನಿರ್ಮಿತಿಯಲ್ಲಿ ಕ್ರಮೇಣ ಕಿರಿದಾಗುವ ಐದು ಸ್ತರಗಳಲ್ಲಿರುವ ಪಿರಮಿಡ್ ಇದೆ. ಇದರ ಮೇಲ್ ಸ್ತರದ ಮಧ್ಯದಲ್ಲಿ ಚೌಕಾಕಾರದ ಕುಳಿ ಇದೆ. ಒಟ್ಟು 75 ಸೆಂ.ಮೀ. ಎತ್ತರದ ಈ ಪಿರಮಿಡ್ಡಿನ ಅತ್ಯಂತ ಕೆಳಗಣ ಫಲಕ 1.55×1.22 ಮೀ. ಅಳತೆಯದಾಗಿದ್ದರೆ, ಮೇಲಣ ಫಲಕವು 0.59×0.61 ಮೀ. ಅಳತೆಯದು. ಫಲಕಗಳ ಎತ್ತರ 11 ರಿಂದ 19 ಸೆಂ.ಮೀ. ನಷ್ಟಿದೆ. ಮೇಲಿನ ಫಲಕದಲ್ಲಿರುವ ಕುಳಿಯನ್ನು ವಿಗ್ರಹ ಇಲ್ಲವೇ ಕಲಶ ಅಥವಾ ಸ್ತೂಪಿಯಂತಹ ವಾಸ್ತುಭಾಗವನ್ನು ಜೋಡಿಸುವುದಕ್ಕಾಗಿಯೇ ಮಾಡಿದ್ದಿರಬೇಕು. ಅದೇ ರೀತಿ ವೀರಗಲ್ಲಿನ ಎಡಬದಿಯಲ್ಲಿರುವ ಪಿರಮಿಡಾಕಾರದ ನಿರ್ಮಿತಿಯ ಕೆಳಗಣ ಒಂದು ಫಲಕ ಮಾತ್ರ ದೊರಕಿದೆ. ಈ ಫಲಕವು 20 ಸೆಂ ಮೀ. ಎತ್ತರವಾಗಿದ್ದು 60×60 ಸೆಂ.ಮೀ. ಚೌಕಾಕಾರದಲ್ಲಿದೆ. ಮಧ್ಯದಲ್ಲಿ ಆಯತಾಕಾರದ ಕುಳಿ ಇದೆ. ಬಲಬದಿಯಲ್ಲಿರುವ ನಿರ್ಮಿತಿಯ ಮೂಲೆಗಳು ಚೂಪಾಗಿದ್ದರೆ, ಎಡಬದಿಯವನ್ನು ಅಲಂಕಾರಿಕವಾಗಿ ಕಂಡರಿಸಲಾಗಿವೆ.

ಉತ್ಖನನದ ಪರಿಣಾಮವಾಗಿ ಈ ಸಂಕೀರ್ಣದ ದೇವಾಲಯ, ಜಲಸಂಗ್ರಹಣೆ

ಗಾಗಿ ಯೋಜಿಸಲಾದ ನಿರ್ಮಿತಿ, ವೀರಗಲ್ಲು ಮತ್ತು ಅದರ ಬದಿಯ ಸಮಾಧಿಯಂತಹ ನಿರ್ಮಿತಿಗಳೆಲ್ಲ ಒಂದೇ ಸಮತಲದಲ್ಲಿ ಕಟ್ಟಲಾಗಿರುವ ವಿಷಯವೂ ಬೆಳಕಿಗೆ ಬಂದಿದ್ದು, ಈ ಎಲ್ಲವೂ ಒಂದೇಕಾಲದ ನಿರ್ಮಿತಿಯೆಂಬುದನ್ನು ಸೂಚಿಸುತ್ತದೆ. ಅಲ್ಲದೆ ಸರಳ ತಲವಿನ್ಯಾಸವುಳ್ಳ ಈ ಸಂಕೀರ್ಣದ ದೇವಾಲಯಗಳು ಕ್ರಿ. ಶ. 12ನೆಯ ಶತಮಾನದ ಕಡೆಯ ದಶಕಗಳಲ್ಲಿ ನಿರ್ಮಿತವಾದ ಹೊಯ್ಸಳ ಶೈಲಿಯ ನಿರಲಂಕೃತ ದೇವಾಲಯ ಮಾದರಿಗಳನ್ನೇ ಬಹುತೇಕ ಹೋಲುತ್ತವೆ.

ಇಲ್ಲಿ ಪರಿಶೀಲಿಸಲಾಗುತ್ತಿರುವ ವೀರಗಲ್ಲಿನಂತಹುದೇ ಇನ್ನೂ ಕೆಲವು ವೀರಗಲ್ಲುಗಳೂ ಇದೇ ಸ್ಥಳದಲ್ಲಿ ಅಂದರೆ ಕೆರೆಯ ಪಡುವಣ ದಂಡೆಯ ಮೇಲೆ–ದೊರಕಿವೆ.[8] ಆ ಕಾರಣ ಪ್ರಸ್ತುತ ಶಾಸನ, ವಾಸ್ತು ಅವಶೇಷಗಳು ಬೆಳಕಿಗೆ ಬಂದಿರುವ ಸ್ಥಳವು ಹೊಯ್ಸಳರ ಕಾಲದಲ್ಲಿ ಯೋಧರ ಇಲ್ಲವೇ ಸೇನಾಪ್ರಮುಖರ ಸಮಾಧಿ ಸ್ಮಾರಕ ಕಟ್ಟಡಗಳನ್ನು ನಿರ್ಮಿಸುವುದಕ್ಕಾಗಿಯೇ ನಿಗದಿತವಾಗಿದ್ದ ಸ್ಥಳವೆಂದು ಸಮರ್ಥವಾಗಿ ಊಹಿಸಬಹುದು. ಜೊತೆಗೆ ಕಿರಿದಾದ ಗಾತ್ರ, ಸರಳ ಅಲಂಕರಣವಿರುವ ಈ ದೇವಾಲಯಗಳು ಆ ಕಾಲದಲ್ಲಿ ರಾಜಧಾನಿ ಹಳೇಬೀಡು ಮತ್ತು ಸಾಮ್ರಾಜ್ಯದ ಇನ್ನಿತರ ಪ್ರದೇಶಗಳಲ್ಲಿ ನಿರ್ಮಿತವಾದ ಹಲವಾರು ದೇವಾಲಯಗಳಿಗಿಂತ ರಚನೆಯಲ್ಲಿ ಸ್ವಲ್ಪ ಭಿನ್ನವಾಗಿದ್ದು, ಉಳಿದವುಗಳಂತೆ ನಿರಂತರ ಪೂಜಾದಿಗಳಿಗಾಗಿ ಕಟ್ಟಲಾಗಿರುವಂತೆ ಕಂಡು ಬರುವುದಿಲ್ಲ. ಮತ್ತು ವೀರಗಲ್ಲಿನ ಪಾರ್ಶ್ವದಲ್ಲಿರುವ ಪಿರಮಿಡಾಕೃತಿಯ ನಿರ್ಮಿತಿಗಳು ಸಮಾಧಿಗಳಂತೆ ಕಂಡು ಬರುವುದೂ ಗಮನಾರ್ಹವಾದ್ದು. ಬಲಬದಿಯ ಐದು ಸ್ತರಗಳಲ್ಲಿರುವ ನಿರ್ಮಿತಿ ಲಕ್ಖಣರಾಹುತನಿಗೂ, ಎಡಬದಿಯದು ಆತನ ಪತ್ನಿ ಮಾಚವ್ವೆಗೂ ಸಂಬಂಧಿಸಿದವಾಗಿರಬೇಕು.

ಹೀಗೆ ಕೆರೆಯ ದಂಡೆಯ ಒಂದು ಪರಿಮಿತ ಪ್ರದೇಶದಲ್ಲಿ ದೊರೆಯುವ (ಬಹುತೇಕ ಮೂಲಸ್ಥಾನದಲ್ಲಿಯೇ ಇದ್ದಿರಬಹುದಾದ) ವೀರಗಲ್ಲುಗಳ ಸಮೂಹ; ಸರಳ ವಿನ್ಯಾಸದ ದೇವಾಲಯದ ದ್ವಾರದ ಬಳಿ ಪ್ರಮುಖವಾಗಿ ಕಾಣುವಂತೆ ನಿಲ್ಲಿಸಲಾದ ವೀರಗಲ್ಲು; ಅದರ ಬಳಿಯಲ್ಲಿನ ಸಮಾಧಿಯಂತಹ ನಿರ್ಮಿತಿ, ಅಭಿಷೇಕಾದಿ ಸಂಸ್ಕಾರಗಳಿಗೆ ಉಪಯೋಗವಾಗಿದ್ದ ಪವಿತ್ರಜಲದ ಸಂಗ್ರಹಣೆಗಾಗಿ ಮಾಡಿರುವ ವಿಶೇಷ ವ್ಯವಸ್ಥೆ–ಇವೆಲ್ಲವೂ ಈ ಪ್ರದೇಶವು ಸಮಾಧಿ ಸ್ಮಾರಕ ಕಟ್ಟಡಗಳ ನಿರ್ಮಾಣಕ್ಕಾಗಿ ಬಳಕೆಯಾಗಿದ್ದುದರ ಸಾಧ್ಯತೆಯನ್ನೇ ಹೆಚ್ಚು ಸಮರ್ಥಿಸುತ್ತವೆ. ಅಲ್ಲದೆ, ಈ ಸ್ಥಳವು ಕೋಟೆಗೋಡೆಗೆ ಹೊಂದಿಕೊಂಡಂತಿದ್ದು, ಹೊಯ್ಸಳೇಶ್ವರ ದೇವಾಲಯದಂತಹ ಧಾರ್ಮಿಕ ಕೇಂದ್ರ ಹಾಗೂ ಸಂಸ್ಕಾರಾದಿ ಕಾರ್ಯಗಳಿಗೆ ಅತ್ಯಂತ ಆವಶ್ಯಕವಾದ ನೀರಿನ ಆಸರೆ (ದೋರಸಮುದ್ರ ಕೆರೆ)ಗೆ ಅನತಿದೂರದಲ್ಲಿರುವುದೂ ಮೇಲಿನ ಊಹೆಯನ್ನು ಬಲಗೊಳಿಸುತ್ತದೆ.[9]

ಒಟ್ಟು ಕರ್ನಾಟಕಕ್ಕೇ ಸಂಬಂಧಿಸಿದಂತೆ, ಪ್ರಾಚೀನ ಕಾಲದಿಂದಲೂ ಒಂದು ನಿರ್ದಿಷ್ಟ, ಇಚ್ಛಿತ ಸ್ಥಳದಲ್ಲಿ ಇಂತಹ ಸಮಾಧಿ ಸ್ಮಾರಕ ಕಟ್ಟಡ, ಇಲ್ಲವೇ ವೀರಗಲ್ಲುಗಳನ್ನು ಸ್ಥಾಪಿಸುವ ಒಂದು ಪರಂಪರೆಯೇ ಬೆಳೆದು ಬಂದಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಬೃಹಚ್ಛಿಲಾಯುಗದ ಶಿಲಾನಿರ್ಮಿತ ಗೋರಿಗಳು ಕೆಲವು ವಿಶಿಷ್ಟ ಭೌಗೋಳಿಕ ಪರಿಸರದಲ್ಲಿಯೇ ಗುಂಪುಗುಂಪಾಗಿ ನೆಲೆಗೊಂಡಿರುವುದು ಈ ದೃಷ್ಟಿಯಿಂದ ವಿಶೇಷವಾಗಿ ಗಮನಾರ್ಹ. ಇತಿಹಾಸ ಯುಗದ ಆರಂಭ ಕಾಲದಲ್ಲಿಯೂ ಶಾಸನಾಧಾರಗಳನ್ನು ಸಮರ್ಥಿಸುವಂತಹ ಶಿಲ್ಪ ಇಲ್ಲವೇ ವಾಸ್ತು ಅವಶೇಷಗಳಿಂದ ಕೂಡಿರುವ ಇಂತಹ ಅನೇಕ ಸ್ಥಳಗಳನ್ನು ಗುರುತಿಸಲಾಗಿದೆ.[10] ಬಿಜಾಪುರ ಜಿಲ್ಲೆಯ ಪಟ್ಟದಕಲ್ಲಿನಿಂದ ಕೇವಲ 5.8ಮೀ. ಪಶ್ಚಿಮಕ್ಕಿರುವ ಭದ್ರನಾಯಕನ ಜಾಲೀಹಾಳದ ಬಳಿಯ (ಸ್ಥಳೀಯವಾಗಿ ಹುಲಿಗೆವ್ವನಕೊಳ್ಳ ಎಂದು ಕರೆಯಲಾಗುವ) ಸುಂದರ ಕಣಿವೆಯಲ್ಲಿ ಸಂಶೋಧಿಸಲಾಗಿರುವ[11] ಸರಳ ವಿನ್ಯಾಸದ ಹನ್ನೊಂದು ದೇವಾಲಯಗಳ ಒಂದು ಸಮೂಹದಲ್ಲಿ ಪ್ರಮುಖವಾಗಿಕಾಣುವ ಮೂರನ್ನು ಬಾದಾಮಿ ಚಾಲುಕ್ಯ ದೊರೆ ಇಮ್ಮಡಿ ವಿಕ್ರಮಾದಿತ್ಯ (ಕ್ರಿ. ಶ. 733–745) ಮತ್ತು ಆತನ ರಾಣಿಯರು ಲೋಕ ಮಹಾದೇವಿ ಹಾಗೂ ತ್ರೈಲೋಕ್ಯ ಮಹಾದೇವಿಯರ ಸಮಾಧಿ ಇಲ್ಲವೇ ಸ್ಮಾರಕ ಕಟ್ಟಡ ("ಕರಂಡದ ಪರದನ")ಗಳೆಂದು ಶಾಸನ ಹಾಗೂ ಇನ್ನಿತರ ಸಾಂದರ್ಭಿಕ ಆಧಾರಗಳ ಮೇಲೆ ವಿದ್ವಾಂಸರು ಗುರುತಿಸಿದ್ದಾರೆ.[12] ಅದೇ ರೀತಿಯಲ್ಲಿ ಹಳೇಬೀಡಿನಲ್ಲಿ ಸಂಶೋಧಿಸಲಾಗಿರುವ ಈ ಕಟ್ಟಡದ ಅವಶೇಷಗಳು ಮಧ್ಯಯುಗೀನ ಕರ್ನಾಟಕದಲ್ಲೂ ವಿಶೇಷ ಭೌಗೋಳಿಕ ಹಾಗೂ ಧಾರ್ಮಿಕ ಪರಿಸರವುಳ್ಳ ಸ್ಥಳದಲ್ಲಿ ಆ ಬಗೆಯ ಸಮಾಧಿ ಸ್ಮಾರಕ ನಿರ್ಮಿತಿಗಳನ್ನು ರಚಿಸುವ ಪರಂಪರೆಯ ಮುಂದುವರಿಕೆಯನ್ನು ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ದೋರಸಮುದ್ರ ಕೆರೆಯ ಪಶ್ಚಿಮ ದಂಡೆಯ ಮೇಲೆ ಇನ್ನೂ ಹೆಚ್ಚಿನ ವೈಜ್ಞಾನಿಕ ಉತ್ಖನನವನ್ನು ಕೈಗೊಂಡರೆ ಅದರಲ್ಲಿ ಬೆಳಕಿಗೆ ಬರಬಹುದಾದ ಕಟ್ಟಡಾವಶೇಷ ಮತ್ತು ಆ ಪರಿಸರದಲ್ಲಿ ದೊರೆಯುವ/ದೊರೆತಿರುವ ಎಲ್ಲ ವೀರಗಲ್ಲುಗಳ ಒಂದು ಸಮಗ್ರ ಹಾಗೂ ತುಲನಾತ್ಮಕ ಅಧ್ಯಯನದಿಂದ ಕರ್ನಾಟಕದಲ್ಲಿ ಬೆಳೆದು ಬಂದ ಇಂತಹ ಒಂದು ಪ್ರಾಚೀನ ಸಾಮಾಜಿಕ–ಧಾರ್ಮಿಕ ಪರಂಪರೆಗೆ ಸಂಬಂಧಿಸಿದಂತೆ ಹೆಚ್ಚು ಮೌಲಿಕವಾದ ಮಾಹಿತಿ ದೊರಕುವ ಸಾಧ್ಯತೆಯಿದೆಯೆಂದು ಧಾರಾಳವಾಗಿ ಹೇಳಬಹುದು.

**ಶಾಸನ ಪಾಠ[13]**

1. ಸ್ವಸ್ತಿ [IIX] ಶ್ರೀಮನ್ಮಹಾಮಣ್ಡಲೇಶ್ವರಂ ತ್ರಿಭುವನಮ
2. ಲ್ಲ ವಿಷ್ಣುವರ್ಧನ ಪ್ರತಾಪ ಹೊಯ್ಸಣ ನಾ (ನ) ರ–
3. ಸಿಂಹಣ ದೇವರು ದೋರಸಮುದ್ರದ ನೆಲದಿ [ವೀಡಿ]ನಲು ಸುಖ ಸಂ-

4. ಕಥಾ ವಿಣೊ (ನೊ)ೀ ದದಿಂ ರಾಜ್ಯಂಗೆಯ್ಯುತ್ತವಿರಲು
5. ನಂದ ಸಂವತ್ಸರದ ಕಾರ್ತ್ತಿಕ ಬಹುಳ ೧೪
6. ಬ್ರಹಾವಾರದಂದು ಲಖ್ಖಣ ರಾಹುತ ಮಾಚ
7. ವೆ (ವ್ವೆ) ಯುಂ ಸುರಲೋಕ ಪ್ರಾಪ್ತರಾದರು [IIX
8. ಅವರ ಮಕ್ಕಳು ಸಿರಿಯವ್ವೆ ಸುಗ್ಗವ್ವೆಯುಂ ಪ್ರರಾಕ (ಪರೋಕ್ಷ)
9. ವಿನಯುಮಂ ಮಾಡಿ ಕಲ್ಲ ನಿಲ್ಸಿದರು [IIX

## ಅಡಿ ಟಿಪ್ಪಣಿಗಳು ಮತ್ತು ಸಂದರ್ಭ ಗ್ರಂಥಗಳು

1. "ಇಂಡಿಯನ್ ಎಪಿಗ್ರಾಫಿಕಲ್ ಸೊಸೈಟಿ"ಯ 17ನೆಯ ವಾರ್ಷಿಕ ವಿದ್ವದ್ಗೋಷ್ಠಿಯಲ್ಲಿ (ಮೈಸೂರು, 1990 ಏಪ್ರಿಲ್ ತಿಂಗಳ 17–19) ಈ ಶಾಸನವನ್ನು ಕುರಿತ ಪ್ರಬಂಧವನ್ನು ಶ್ರೀಯುತ ಟಿ. ಎಂ. ಕೇಶವ, ಸಹಾಯಕ ಪುರಾತತ್ವಜ್ಞ, ಪ್ರಾಚ್ಯವಸ್ತುಸಂಗ್ರಹಾಲಯ, ಹಳೆಯಬೀಡು ಇವರೊಂದಿಗೆ ಮಂಡಿಸಲಾಗಿತ್ತು. ಪ್ರಸ್ತುತ ಲೇಖನ ಹೆಚ್ಚು ವಿವರಗಳನ್ನೊಳಗೊಂಡ ಅದರ ವಿಸ್ತೃತರೂಪ. ಇಲ್ಲಿ ಪ್ರಕಟಿಸಿರುವ ಛಾಯಾಚಿತ್ರಗಳು "ಭಾರತೀಯ ಪುರಾತತ್ವ ಸರ್ವೇಕ್ಷಣ"ದ ಕೃಪೆ.

2. ತ್ರಿಪಾಠಿ, ಆರ್.ಸಿ. (ಸಂ). ಇಂಡಿಯನ್ ಆರ್ಕಿಯಾಲಜಿ 1984–85 ಎ ರಿವ್ಯೂ" (ನವದೆಹಲಿ, 1987) ಪು. 31–32.

3. ಒಂದು ರಾಜವಂಶದಲ್ಲಿ ಒಂದೇ ಹೆಸರಿನ ಮೂವರು ಅರಸರ ಆಳಿಕೆಯಲ್ಲಿ ಅದೇ ಸಂವತ್ಸರ ಮತ್ತೆ ಮತ್ತೆ ಬರುವುದು ಬಹುಶಃ ಇದೊಂದೇ ಉದಾಹರಣೆ ಎನಿಸುತ್ತದೆ. ವಿಷ್ಣುವರ್ಧನನ ಮಗ ಮೊದಲನೆ ನರಸಿಂಹ (ಕ್ರಿ. ಶ. 1141–1173), ವೀರಬಲ್ಲಾಳನ ಮಗ ಇಮ್ಮಡಿ ನರಸಿಂಹ (ಕ್ರಿ. ಶ. 1220–1235) ಮತ್ತು ಸೋಮೇಶ್ವರನ ಮಗ ಮುಮ್ಮಡಿ ನರಸಿಂಹ (ಕ್ರಿ. ಶ. 1253–1292) ಇವರ ಆಳಿಕೆಯಲ್ಲಿ, ಅಂದರೆ ಅನುಕ್ರಮವಾಗಿ (ಕ್ರಿ. ಶ. 1172 (ಶಾ. ಶ. 1094), 1232 (ಶಾ. ಶ. 1154) ಮತ್ತು 1292 (ಶಾ. ಶ. 1214) ವರ್ಷಗಳಲ್ಲಿ, ನಂದನ ಸಂವತ್ಸರ ಬರುತ್ತದೆ. ಆದರೆ ತೇದಿಯ ಉಳಿದ ವಿವರ ಕ್ರಿ. ಶ. 1172ಕ್ಕೆ ಮಾತ್ರ ಸರಿಹೊಂದುತ್ತವೆ.

4. "ಪರೋಕ್ಷ ವಿನಯ"ದ ಬಗೆಗಿನ ವಿವರಗಳಿಗೆ ನೋಡಿ :
(ಅ) ಚಿದಾನಂದ ಮೂರ್ತಿ, ಎಂ. "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, (ಮೈಸೂರು, 1979), ಪು. 210, ಅಡಿಟಿಪ್ಪಣಿ 37 ;

ಮತ್ತು (ಆ) ಶೇಷಶಾಸ್ತ್ರಿ, ಆರ್, "ಕರ್ನಾಟಕದ ವೀರಗಲ್ಲುಗಳು" (ಬೆಂಗಳೂರು, 1983) ಪು. 75–76.

5. ಬಹುಶಃ ಲಖ್ಖಣ ರಾಹುತ ಕಾಳಗವೊಂದರಲ್ಲಿ ಮಡಿದಿದ್ದು, ಆತನ ಪತ್ನಿ ಮಾಚವ್ವೆ ಸಹಗಮನ ಮಾಡಿದ್ದಿರಬೇಕು ಎಂದು ಸಾಂದರ್ಭಿಕ ಆಧಾರಗಳಿಂದ ಊಹಿಸಬಹುದು.

6. ಅಡಿ ಟಿಪ್ಪಣಿ 2ರಲ್ಲಿನದೇ ಪ್ರಕಟಣೆ. ಅದರಲ್ಲಿ ಪ್ರಕಟವಾಗಿರುವ ಮಾಹಿತಿಗೆ ಪೂರಕವಾಗುವಂತೆ ಸ್ಥಳ ಪರಿಶೋಧನೆಯ ಮೂಲಕ ಮತ್ತಷ್ಟು ವಿವರ ಸಂಗ್ರಹಿಸಲು ನೆರವು ನೀಡಿದ ಶ್ರೀ ಟಿ. ಎಂ. ಕೇಶವ, ಸಹಾಯಕ ಪುರಾತತ್ವಜ್ಞ, ಪ್ರಾಚ್ಯವಸ್ತು ಸಂಗ್ರಹಾಲಯ, ಹಳೆಯ ಬೀಡು ಅವರಿಗೆ ಋಣಿಯಾಗಿದ್ದೇನೆ.

7. ಜಲಸಂಗ್ರಹಣೆಗಾಗಿ ಕಲ್ಪಿಸಿರುವ ಈ ವಿಶೇಷ ವ್ಯವಸ್ಥೆ "ಪರೋಕ್ಷ ವಿನಯ"ದ ಉಲ್ಲೇಖವಿರುವ ಕೆಲವಾದರೂ ಶಾಸನಗಳಲ್ಲಿ ಪ್ರಸ್ತಾಪವಿರುವ "ಜಳದಾನ ಕ್ರಿಯೆ"ಗೆ ಸಂಬಂಧಪಟ್ಟದ್ದಾಗಿರಬೇಕು. ಉದಾ. ಕ್ರಿ. ಶ. 1150ರ ಕೊರಗೋಡಿನ ಶಾಸನ (ಎ. ಕ. VIII, ಸೊರಬ 175).

8. ಇಂತಹ ಕೆಲವು ವೀರಗಲ್ಲುಗಳನ್ನು ಸಂರಕ್ಷಿಸುವ ಸಲುವಾಗಿ ಇತ್ತೀಚೆಗೆ ಹಳೆಯಬೀಡಿನಲ್ಲಿರುವ ಪ್ರಾಚ್ಯವಸ್ತು ಸಂಗ್ರಹಾಲಯಕ್ಕೆ ಸ್ಥಳಾಂತರಿಸಲಾಗಿದೆ. ಇನ್ನೂ ಕೆಲವು ಇದೇ ಸ್ಥಳದಲ್ಲಿ ಚೆದುರಿ ಬಿದ್ದಿವೆ.

9. ಸ್ಥಳೀಯರ ಹೇಳಿಕೆಯಂತೆ ಹಳೆಯಬೀಡಿನ ಇಂದಿನ "ಶೂಲದ ವನ" ಪ್ರದೇಶ ಹೊಯ್ಸಳರ ಕಾಲದಲ್ಲಿ ಬಹುಶಃ ರುದ್ರಭೂಮಿಯಾಗಿ ಬಳಕೆಯಾಗುತ್ತಿತ್ತು. ಅಲ್ಲಿಯೂ ಒಂದೆರಡು ವೀರಗಲ್ಲುಗಳಿದ್ದರೂ ಅದರ ಪರಿಸರದಲ್ಲಿ ಯಾವುದೇ ರೀತಿಯ ವಾಸ್ತು ಚಟುವಟಿಕೆಯ ಕುರುಹು ಕಂಡು ಬಂದಿಲ್ಲ. ಇಂದಿಗೂ ಹಳೆಯಬೀಡಿನಲ್ಲಿರುವ ಕೆಲವು ಮತಸ್ಥರ ರುದ್ರಭೂಮಿ ದೋರಸಮುದ್ರ ಕೆರೆಯ ಪಶ್ಚಿಮ ಭಾಗದಲ್ಲಿರುವುದೂ ಗಮನಾರ್ಹ.

10. ರಮೇಶ್, ಕೆ.ವಿ. "ಎ ಬ್ರಾಹ್ಮೀ ಇನ್‌ಸ್ಕ್ರಿಪ್ಷನ್ ಫ್ರಮ್ ಬೆಳವಡಗಿ" ಎಪಿಗ್ರಾಫಿಯಾ ಇಂಡಿಕಾ, ಸಂ. XXXVII, ಪು.131ff, ಮತ್ತು ಅವರದೇ "ಕರ್ನಾಟಕ ಶಾಸನ ಸಮೀಕ್ಷೆ" (ಬೆಂಗಳೂರು, 1971), ಪು. 38.

11. ಸುಂದರ, ಅ. "ಕೆಲವು ಈಚಿನ ಗಮನಾರ್ಹ ಪುರಾತತ್ವ ಶೋಧನೆಗಳು," ಕರ್ನಾಟಕ ಭಾರತಿ, ಸಂಪುಟ 9, ಸಂಚಿಕೆ 4, (ಧಾರವಾಡ, 1977), ಪು. 79–95.

12. (ಅ) ನಾಗರಾಜರಾವ್, ಎಂ. ಎಸ್. ಮತ್ತು ರಮೇಶ್, ಕೆ. ವಿ. "ಎ ರಾಯಲ್ ಮೆಮೋರಿಯಲ್ ಟು ಚಾಲುಕ್ಯ ವಿಕ್ರಮಾದಿತ್ಯ II": ಮಧು-ರೀಸೆಂಟ್ ರಿಸರ್ಚಸ್ ಇನ್ ಇಂಡಿಯನ್ ಆರ್ಕಿಯಾಲಜಿ ಅಂಡ್ ಆರ್ಟ್ ಹಿಸ್ಟರಿ" (ನವದೆಹಲಿ, 1981), ಪು. 175ff.

(ಆ) ರಮೇಶ್, ಕೆ. ವಿ. ಚಲುಕ್ಯಾಸ್ ಆಫ್ ವಾತಾಪಿ (ದೆಹಲಿ, 1984) ಪು. 165–66.

ಇದಲ್ಲದೆ ಬಾದಾಮಿ ಚಾಲುಕ್ಯ ಕಾಲದ ಮುಖ್ಯ ಧಾರ್ಮಿಕ ಹಾಗೂ ಕಲಾ ಕೇಂದ್ರಗಳಿಗೆ ಅನತಿದೂರದಲ್ಲಿ ವಿಶಿಷ್ಟ ಭೌಗೋಳಿಕ ಪರಿಸರದಲ್ಲಿರುವ ಅರಳಿ ತೀರ್ಥ, ಸಿದ್ಧನ ಕೊಳ್ಳ, ಮಹಾಕೂಟ ಮತ್ತು ಆಂಧ್ರಪ್ರದೇಶ (ಕರ್ನೂಲು ಜಿಲ್ಲೆ)ದಲ್ಲಿರುವ ಕಡಮರ ಕಾಲವ ಹಾಗೂ ಇನ್ನಿತರ ಸ್ಥಳಗಳಲ್ಲಿನ ಕಿರುದೇವಾಲಯ ಸಮೂಹಗಳನ್ನು ಸಹ ಸ್ಮಾರಕ ನಿರ್ಮಿತಿಗಳೆಂದು ಗುರುತಿಸುವ ಪ್ರಯತ್ನಗಳಾಗಿವೆ (ನೋಡಿ ಕೆ. ವಿ. ರಮೇಶ್ (1984) ಪು. 47–48 ; 98–99 ಇತ್ಯಾದಿ). ಅದೇ ರೀತಿ ಐಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲುಗಳಲ್ಲಿರುವ ಮುಖ್ಯ ದೇವಾಲಯದ ಸುತ್ತಮುತ್ತಲೂ ಇರುವ ಸರಳ ವಿನ್ಯಾಸದ ಅನೇಕ ದೇಗುಲಗಳ ವಿಶೇಷ ಅಧ್ಯಯನ ಕೈಗೊಂಡರೆ ಬಹುಶಃ ಬಾದಾಮಿ ಚಾಲುಕ್ಯರ ಕಾಲದಲ್ಲಿ ಪ್ರಚಲಿತವಿದ್ದ ಇಂತಹ ಒಂದು ಸಾಮಾಜಿಕ–ಧಾರ್ಮಿಕ ಪದ್ಧತಿಯ ಬಗೆಗೆ ಹೆಚ್ಚಿನ ಮಾಹಿತಿ ದೊರಕಬಹುದು.

13. ಮೂಲ ಶಾಸನ ಮತ್ತು ಛಾಯಾಚಿತ್ರಗಳನ್ನು ಆಧರಿಸಿ ತಯಾರಿಸಿರುವುದು.

— ೦ —

# ಅಂಬಲಗೆರೆಯ ಶಾಸನ*

— ಡಿ. ವಿ. ಪರಮಶಿವಮೂರ್ತಿ

ದೊಡ್ಡಬಳ್ಳಾಪುರ ತಾಲೂಕಿನ "ಅಂಬಲಗೆರೆ" ಎಂಬ ಸಣ್ಣ ಗ್ರಾಮದಲ್ಲಿ ಈ ಶಾಸನವಿದೆ. ಆ ಗ್ರಾಮದ ಆಂಜನೇಯ ದೇವಾಲಯದ ಗೋಡೆಬಳಿ ಇದನ್ನು ನಿಲ್ಲಿಸಲಾಗಿದ್ದು, ಈ ಶಾಸನದ ಅಗಲ ಸುಮಾರು 3½ಅಡಿ, ಎತ್ತರ ಸುಮಾರು 6ಅಡಿ ಇದೆ. ಅಕ್ಷರಗಳನ್ನು ಸ್ಫುಟವಾಗಿ ಕೆತ್ತಲಾಗಿದ್ದು, ಶಾಸನದ ಮೇಲ್ಭಾಗದ ಹೊರತಾಗಿ ಮಿಕ್ಕ ಭಾಗವು ಸುರಕ್ಷಿತವಾಗಿದೆ. ಮೇಲಿನ ಭಾಗದಲ್ಲಿ ಒಂದು ಸಂಸ್ಕೃತದ ಪ್ರಾರ್ಥನಾ ಶ್ಲೋಕವಿದ್ದು ಕೆಲವು ಅಕ್ಷರಗಳು ಮಾತ್ರ ಕಾಣುತ್ತವೆ. ಇದನ್ನು ಬಿಟ್ಟು ಶಾಸನದಲ್ಲಿ ಇಪ್ಪತ್ತು ಸಾಲು ಅಕ್ಷರಗಳಿವೆ. ಮೇಲ್ಭಾಗದಲ್ಲಿ ಶಂಖ, ಚಕ್ರ ಮತ್ತು ನಾಮವನ್ನು ಕೆತ್ತಲಾಗಿದೆ. ಈ ಶಾಸನ ವಿಜಯನಗರದ ಅಚ್ಯುತರಾಯನ ಕಾಲಕ್ಕೆ ಸೇರಿದ್ದು, ಇದುವರೆಗೂ ಎಲ್ಲೂ ಪ್ರಕಟವಾಗಿಲ್ಲ. ಅದರ ಪಾಠ ಈ ಕೆಳಕಂಡಂತೆ ಇದೆ.

## ಶಾಸನದ ಪಾಠ

1. ○ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೪೫೬
2. ○ ನೆಯ ಜಯಸಂವತ್ಸರದ ಶ್ರಾವಣ ಶುದ್ಧ ೧೨ ಬುದುವಾರದಲು ಶ್ರೀಮ
3. ○ ನ್ಮಹಾರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ಅಚ್ಯು
4. ○ ತರಾಯ ಮಹಾರಾಯರು ಪೃಥ್ವಿರಾಜ್ಯಂ ಗೈಉತಿರಲಾಗಿ ಅಚ್ಯು
5. ○ ತರಾಯ ಮಹಾರಾಯರ ನಿರೂಪದಿಂದ ಅಮರದ ತಿಂಮರಸರ ಮ
6. ○ ಕ್ಕಳು ಕರಣಿಕ ರಾಮಕೃಷ್ಣಯ್ಯ ರಂಗಪ್ಪಗಳು ಬಟ್ಟರಯ್ಯಗಳ ಸಿ
7. ○ ಶ್ಯರು ಅಂಬಲಿಗೆಱೆಯ ಮೊಕ್ತಗಾರ ಚಿಕ್ಕಣ್ಣದಾಸರಿಗೆ ಕೊಟ್ಟ ಧರ್ಮ ಶಾ
8. ○ ಸನದಾ ಕ್ರಮವೆಂತೆಂದರೆ ಸ್ವಾಮಿ ನಮಗೆ ನಾಯಕ ತನಕೆ ಪಾಲಿಸಿದ ಹು
9. ○ ಲುಕುಡಿನಾಡ ಹಣಬೆ ಸ್ಥಳಕೆ ಸಲುವ ಅಂಬಲಿಗೆಱೆ

* ಜುಲೈ 1990 ರಲ್ಲಿ ತುಮಕೂರಿನಲ್ಲಿ ನಡೆದ ಇತಿಹಾಸ ಕಾಂಗ್ರೆಸ್‌ನ IXನೇ ಅಧಿವೇಶನದಲ್ಲಿ ಮಂಡಿಸಿದ ಪ್ರಬಂಧ.

ಶಾಸನದ ಪ್ರತಿ ತೆಗೆಯುವಲ್ಲಿ ಮತ್ತು ಕೆಲವು ವಿವರ ಪಡೆವಲ್ಲಿ ನನ್ನ ಜೊತೆ ಶ್ರಮಿಸಿದ ಸಂಬಂಧಿಗಳಾದ ಅಂಬಲಗೆರೆಯ ಶ್ರೀ ಶಂಕರಪ್ಪನವರಿಗೆ ನಾನು ಋಣಿ.

10. ○ ಜಿರ್ನುದಾರವಾಗಿ ಸರ್ವಮಾನ್ಯವಾಗಿ ಶ್ರೀ ತಿರುವೆಂಗಳನಾತನ ಸಂನಿದಿಯ

11. ○ ಸಂಮುಕದಲಿ ದ್ವಾದಸಿ ಪುಣ್ಯಕಾಲದಲಿ ಸಹಿರಣ್ಯೋದಕ ದಾನ ದಾರಾ ಪೂ

12. ○ ರ್ವಕವಾಗಿ ದಂಮ ಸಹಾಯ ಸೇವಕಾ ವೃತ್ತಿಯಾಗಿ ಕೊಟ್ಟೆವಾಗಿ ಆ ಗ್ರಾಮಂಗ

13. ○ ಳಿಗೆ ಸಲುವ ಚತುಸ್ಸೀಮೆವೊಳಗಾದ ಕಾಣಿಕೆ ಕಡಾಯ ಸುಂಕ ಬಿಟ್ಟೆ ಬಿರಾ

14. ○ ಡ ನಿಧಿ ನಿಕ್ಷೇಪ ಆಗಾಮಿ ಸಿದ್ಧಸಾಧ್ಯ ಜಲಪಾಶಾಣ ಅಷ್ಟ ಭೋಗ ತೇಜ ಸಾ

15. ○ ಮ್ಯವನು ಆಗುಮಾಡಿಕೊಂಡು ತಿರುವೆಂಗಳನಾತನ ಪರುಶೆಗೆ ಹಸು ಮಕ್ಕಳಿಗೆ

16. ○ ಹಾಲು ಸಿಸುವಿಗೆ ಬೆಂಣೆಯನು ಎರಡು ಸೇವೆಯನು ಮಾಡಿಕೊಂಡು ಯಿರು

17. ○ ಹುದು ಎಂದು ಅಮರದ ತಿಂಮರಸರ ಮಕ್ಕಳು ರಂಗಪ್ಪಗಳು ಅಂಬಲಿ

18. ○ ಗೆಱೆಯ ಹಾಲಿ ಮೊಕ್ತಗಾರ ಚಿಕ್ಕಣ್ಣದಾಸರಿಗೆ ತ್ರಿವಾಚ ಉಕಾರ ವಾ

19. ○ ಗಿ ಯೀ ದಂಮಕೆ ತಪಿದವರು ವಾರಣಾಸಿಲಿ ಗೋವು ಬ್ರಾಹ್ಮರ ಕೊಂದ ಪಾಪ

20. ○ ಕೆ ಹೋಹರು.

ಶಾಸನದ ಕಾಲ "ಶಕವರುಷ ೧೪೫೬ ನೆಯ ಜಯ ಸಂವತ್ಸರದ ಶ್ರಾವಣ ಶುದ್ಧ ೧೨ ಬುದುವಾರ" ಎಂದಿದ್ದು, ಅದು ಕ್ರಿ. ಶ. 1534 ಜುಲೈ 22 (ಬುಧವಾರ)ಕ್ಕೆ ಸರಿಹೊಂದುತ್ತದೆ.[1] ಅಚ್ಯುತರಾಯನ ಹೇಳಿಕೆಯಂತೆ ಹಣಬೆ ಸ್ಥಳದ ನಾಯಕರಾದ ಅಮರದ ತಿಂಮರಸರು–ಮಕ್ಕಳಾದ ಕರಣಿಕ ರಾಮಕೃಷ್ಣಯ್ಯ, ರಂಗಪ್ಪ ಮತ್ತು ಭಟ್ಟರಯ್ಯಗಳ ಶಿಷ್ಯರು ಮೊಕ್ತಗಾರ (ಮೊಕ್ತೇಸರ) ನಾದ ಚಿಕ್ಕಣ್ಣ ದಾಸರಿಗೆ ಅಂಬಲಿಗೆರೆಯನ್ನು ದಾನ ನೀಡುತ್ತಾರೆ. ಈ ದಾನವನ್ನು ನೀಡಿರುವುದು ತಿರುವೆಂಗಳನ ಪರುಶೆ (ಜಾತ್ರೆ)ಯಲ್ಲಿ ಮಕ್ಕಳಿಗೆ ಹಾಲು ಮತ್ತು ಬೆಣ್ಣೆಯನ್ನು ಹಂಚುವುದಕ್ಕಾಗಿ.

---

1 ಇಂಡಿಯನ್ ಎಫಿಮರೀಸ್ ಸಂ. V. ಪುಟ. 271.

ಶಾಸನದಲ್ಲಿ ಉಲ್ಲೇಖವಾಗಿರುವ ಹುಲುಕಡಿನಾಡು, ಹಣಬೆ ಸ್ಥಳ ಈಗಲೂ ಇದೇ ಹೆಸರುಗಳಿಂದ ಪ್ರಚುರದಲ್ಲಿವೆ. ಅಂಬಲಿಗೆರೆ ಗ್ರಾಮಕ್ಕೆ ಇವು ಹತ್ತಿರದಲ್ಲೇ ಇದೆ.[2] ಅಮರದ ತಿಮ್ಮರಸ, ಕರಣಿಕ ರಾಮಕೃಷ್ಣಯ್ಯ, ರಂಗಪ್ಪ ಮತ್ತು ಭಟ್ಟರಯ್ಯಗಳ ಶಿಷ್ಯರ ಹೆಸರುಗಳು ನಮಗೆ ಬೇರೆ ಯಾವ ಶಾಸನಗಳಲ್ಲೂ ದೊರೆಯುವುದಿಲ್ಲ. ಈ ಶಾಸನದ ಕಾಲಕ್ಕೆ ಹುಲುಕಡಿನಾಡು ಇವರ ಆಧೀನದಲ್ಲಿ ಇತ್ತು ಎಂದು ಶಾಸನದಿಂದ ಸ್ಪಷ್ಟವಾಗಿ ತಿಳಿಯಬಹುದಾಗಿದೆ. ದಾನವನ್ನು ಪಡೆದ ಅಂಬಲಿಗೆರೆಯ ಮೊಕ್ತಗಾರ ಅಥವಾ ಮುಖ್ಯಸ್ಥನಾದ ಚಿಕ್ಕಣ್ಣದಾಸ ಈ ದಾನಕ್ಕಿಂತ ಏಳು ವರ್ಷಕ್ಕೆ ಮೊದಲು ಬೇರೆ ಬೇರೆ ಗ್ರಾಮಗಳನ್ನು ಮಾನ್ಯವಾಗಿ ಪಡೆದಿದ್ದಕ್ಕೆ ಶಾಸನಾಧಾರವಿದೆ. ಈ ಶಾಸನ ಕೃಷ್ಣದೇವರಾಯನ ಕಾಲದ್ದು. ಶಿವಗಂಗೆ, ಗೊಳೂರು, ಮಂಣ್ಣೆಯನ್ನು ದಾನ ಪಡೆದು[3] ನಂತರ ಅಚ್ಯುತರಾಯನ ಕಾಲದಲ್ಲಿ ಅಂಬಲಿಗೆರೆಯನ್ನೂ ದಾನ ಪಡೆದಿದ್ದಾನೆ.

ಇದೇ ಅಂಬಲಿಗೆರೆಯನ್ನು ವೀರಬಲ್ಲಾಳನು ಕ್ರಿ. ಶ. 1319ರಲ್ಲಿ ಪ್ರಭುದೇವ ಗೌಡ ಎಂಬವನಿಗೆ ತಿರುವೆಂಗಳನಿಗಾಗಿ ಹಾಲು ಮತ್ತು ಬೆಣ್ಣೆ ಸೇವೆಗೆ ಪುರುಷನಹಳ್ಳಿ[1] ಎಂಬ ಗ್ರಾಮದ ಜೊತೆಗೆ ದಾನ ನೀಡಿದ್ದಾನೆ.[2] ಇದರಿಂದ ಹೊಯ್ಸಳರ ಕಾಲದಿಂದಲೂ ತಿರುವೆಂಗಳನಿಗೆ ಹಾಲು, ಬೆಣ್ಣೆ ಸೇವೆಗಾಗಿಯೇ ಈ ಗ್ರಾಮ ಮೀಸಲಾಗಿತ್ತು ಎಂದು ತಿಳಿಯಬಹುದು.[3]

ಈ ಶಾಸನದಲ್ಲಿ ಉಕ್ತವಾಗಿರುವ ತಿರುವೆಂಗಳ ಎಲ್ಲರೂ ತಿಳಿದಿರುವಂತೆ ತಿರುಪತಿಯ ವೆಂಕಟ ಎಂದು ತಿಳಿದುಕೊಳ್ಳಬಹುದು. ಆದರೆ ಅಂಬಲಿಗೆರೆಗೆ ಸುಮಾರು 35 ಮೈಲಿ ದೂರದಲ್ಲಿ ಒಂದು ಪ್ರಸಿದ್ಧವಾದ ತಿರುವೆಂಗಳನಾಥನ ದೇವಾಲಯವಿದ್ದು, ಹಿಂದೆ ಅದು ಬಹುವಾಗಿ ದಾನಗಳನ್ನು ಪಡೆದ ಕ್ಷೇತ್ರವಾಗಿತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ.[4] ಇದೇ ಆಲಂಗಿರಿ ಅಥವಾ "ಅವಲಂಬಗಿರಿ". ಚಿಕ್ಕಣ್ಣದಾಸರಿಗೆ ಅಂಬಲಿಗೆರೆಯನ್ನು ದಾನ ನೀಡಿದ್ದು ಈ ದೇವಾಲಯದಲ್ಲಿನ ಜಾತ್ರೆಗೇ ಇರಬಹುದು. ಇಲ್ಲಿ ಜಾತ್ರೆ ನಡೆಯುತ್ತಿದ್ದುದಕ್ಕೆ ಆಧಾರವಿದೆ.[5] ಅಲ್ಲದೆ ಇಲ್ಲಿರುವ

---

2 ಹುಲುಕಡಿ ಪ್ರಸಿದ್ಧವಾದ ಧಾರ್ಮಿಕ ಸ್ಥಳವಾಗಿದ್ದು, ಅಲ್ಲಿ ಕೋಟಿ-ಕೊತ್ತಲಗಳು ಕಂಡುಬರುತ್ತವೆ. ಇವೆರಡೂ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲೇ ಇವೆ.

3 EC. IX. ನೆಲಮಂಗಲ–58. ಕಾಲ. 8–12–1527.

1 ಇದು ಅಂಬಲಗೆರೆಗೆ ಒಂದು ಕಿ. ಮೀ. ಅಂತರದಲ್ಲೇ ಇದೆ.

2 EC. IX. ನೆಲಮಂಗಲ–57. ಕಾಲ. ಕ್ರಿ. ಶ. 9–8–1319.

3 ಈ ಊರಿನ ಬೆಣ್ಣೆ ಈಗಲೂ ಪ್ರಸಿದ್ಧಿ ಪಡೆದಿದೆ !

4 E.C. X. ಚಿಂತಾಮಣಿ. 54, 55, 56, 57, 58, 59–60, 61.

5 EC. X ಚಿಂತಾಮಣಿ. 55.

ಶಾಸನಗಳಲ್ಲಿ ಹೆಚ್ಚಿನವು ವಿಜಯನಗರದ ಅರಸರಿಗೇ ಸೇರಿದವುಗಳಾಗಿವೆ. ಜಾತ್ರೆಕರಗ ಮುಂತಾದ ಕಡೆ ಹರಸಿಕೊಂಡವರು ಈಗಲೂ ಕೂಡ ಮಕ್ಕಳಿಗೆ ಹಾಲನ್ನು ಹಂಚುವ ಸಂಪ್ರದಾಯವಿದೆಯಂತೆ. ಬೆಣ್ಣೆ ದುಬಾರಿಯಾದುದರಿಂದ ಇದನ್ನು ನಿಲ್ಲಿಸಿರಬಹುದು.[6]

ಈ ಶಾಸನಗಳ ಆಧಾರದಿಂದ ಅಂಬಲಗೆರೆ ಗ್ರಾಮದಲ್ಲಿ ವೈಷ್ಣವರು ಇದ್ದರು, ಅದೂ ಒಳ್ಳೆಯ ಸ್ಥಾನದಲ್ಲಿ (ಮೊಕ್ತಗಾರರಾಗಿ) ಇದ್ದರು ಎಂದು ಹೇಳಬಹುದಾಗಿದೆ. ಆದರೆ ಇಂದು ಈ ಊರಿನಲ್ಲಿ ವೀರಶೈವ ಮತ್ತು ಕೆಳವರ್ಗದ ಜನರು ಮಾತ್ರ ಇದ್ದಾರೆ. ಅನ್ಯಧರ್ಮೀಯರು ಯಾರೂ ಇಲ್ಲ. ಏಕೆ ಎಂದು ಸರಿಯಾದ ಆಧಾರ ವಿಲ್ಲ. ಆದರೂ ಎರಡು ರೀತಿಯದಾಗಿ ಊಹಿಸಬಹುದು: ಸಾಮೂಹಿಕವಾಗಿ ಧರ್ಮಾಂತರಗೊಂಡಿರಬೇಕು ಇಲ್ಲವೇ ಅನ್ಯಧರ್ಮದವರು ವಲಸೆ ಹೋಗಿರಬೇಕು. ಇದು ಬರೀ ಊಹೆಯಷ್ಟೆ. ಸರಿಯಾದ ದಾಖಲೆಗಳಿಲ್ಲ. ಊರಿನಲ್ಲಿರುವ ಹನುಮಂತನ ದೇವಾಲಯಕ್ಕೆ ಇಂದಿಗೂ ಪೂಜೆಮಾಡುವವರು ವೀರಶೈವರಾಗಿದ್ದು, ಪೂಜೆಗಾಗಿ ಸುತ್ತಮುತ್ತಲ ಗ್ರಾಮದ ಎಲ್ಲಾ ಜಾತಿಯ ಜನರೂ ಬರುತ್ತಾರೆ. ಈ ದೇವರು ಕೆಲವು ಗ್ರಾಮದ ಜನರಿಗೆ "ಮನೆದೇವರು" ಕೂಡ ಆಗಿದೆ. ಊರಿನವರ ಪ್ರಕಾರ ಬೇರೆ ಧರ್ಮದವರಿಗೆ ಈ ಊರು "ಆಗಿಬರುವುದಿಲ್ಲ"ವಂತೆ.

— o —

6 ಹೊಸಕೋಟೆ, ಘಾಟಿ ಮುಂತಾದ ಕಡೆ ಈ ಪದ್ಧತಿಯಿದೆ ಎಂದು ತಿಳಿಸಿದವರು ಗುರುಗಳಾದ ಶ್ರೀ ದೇವರಕೊಂಡರೆಡ್ಡಿಯವರು.

# ಆರು ಅಪ್ರಕಟಿತ ಸ್ವರ ವಚನಗಳು

—(ಸಂ.) ಎಸ್. ಶಿವಣ್ಣ

## ನೀಲಗ್ರೀವಾಂಕಿತದ ಸ್ವರ ವಚನಗಳು

ರಾಗ : ಶಂಕರಾಭರಣ

ಎನ್ನ ಕಾಯುವೆ ಸೆಜ್ಜೆವನೆಯಲ್ಲದೆ ಬೇ ೞ
ಇನ್ನು ನಿಮಗೆ ಸೆಜ್ಜೆವನೆಯುಂಟೆ ದೇವ ? ॥ ಪಲ್ಲ ॥

ಇದೆ ಶಾಂತಿಸಲಿಲ ಮಜ್ಜನಕೆಱೆವರೆ ಗಂಧ-
ವಿದೆ ನಿಜವಸ್ತುವಕ್ಷತೆಯೞಹೊ (?)
ಇದೆ ಪುಷ್ಪ ನಿಜ ಸಹಸ್ರದಳ ಕಮಲ ಧ, ಪ
ಇದೆ ಸದ್ವಾಸನೆ ಸುಖ ನಿಜವಿದೆ ನಿಮಗೆ ॥ ೧ ॥

ಜ್ಞಾನಜ್ಯೋತಿಯೆ ದೀಪ ನಿರ್ಮಳವೆನಿಸುವ
ಧ್ಯಾನ ಮಹಾಮೃತ ನೈವೇದ್ಯವಿದಕೊ
ಏನೆಂಬೆ ಫಲ ಪದ ರಹಿತ ನಿರಾಸೆಯು
ತಾನೆ ತಾಂಬೂಲವಿಂತಿದೆ ನಿಜ ನಿಮಗೆ ॥ ೨ ॥

ಎಡೆದೆಱಹಿಲ್ಲದಾವಾಗ ಮಾನಸದಿಂದ
ಒಡರಿಸುವಷ್ಟವಿಧದ ಪೂಜೆಯೊಮ್ಮೆ
ಬಿಡದೆನ್ನೊಳಗೆಯಿಹು [ದ] ೞದು ನೀಲಗ್ರೀವ
ಕಡೆಯುಲಾವುದು ಪೂಜೆಯೆಂಬುದು ನಿಮಗೆ

## ಬುಕ್ಕಾಂಬುಧೀಶಾಂಕಿತ ಸ್ವರವಚನ

ಲಿಂಗ ಬಂದಾನೆ ಗುರು ಚರ ಲಿಂಗಯ್ಯ ಬಂದಾನೆ
ಮಂಗಳಾತ್ಮಕ ಮುಕ್ತಿ ದಯ ಬುಕ್ಕಾಂಬುಧಿ ಸಂಗಯ್ಯ ॥ ಪಲ್ಲ ॥

ಬಾಲಕರ ಲೀಲೆಯಲಿ ಭಕ್ತರ ಆಲಯದೊಳು ಪೊಕ್ಕು
ಪಾಲು ಸಕ್ಕರೆಗಳ ಸವಿವುತ ತ್ರಿಜಗ ಪಾಲಿಪ ಗುರುರಾಯ ॥ ೧ ॥

ಅಮ್ಮವ್ವೆಯ ಮೊಲೆಯ ಉಂಬುತ ಅಮ್ಮಮ್ಮ
ಎಮ್ಮಯ್ಯನು ದಮ್ಮಯ್ಯನು ಮುಕ್ತಿಯ ಮುಮ್ಮ ಉಳ್ಳ ಸಿರಿವಂತ
॥ ೨ ॥

---

ಕೃತಿ : ಬಿ. 1479, ಕ. ಅ. ಕೇಂ. ಬೆ. ವಿ. ವಿ. (ಹಾಳೆ : 50.)

ಆರಳೆಲೆ ಉರಿಗಣ್ಣು ಕೊಡಿಲಕೊರಳಪದಕ ಹಾರ
ಬೆರಳುಂಗುರ ಕಂಕಣ ಕಟಿಸೂತ್ರದವರ ಮೂರುತಿಗೊಲಿದ ॥ ೩ ॥

ಚೆಲ್ಲೆಗಂಗಳ ನೋಟ ಅಮೃತ ಚೆಲ್ಲುವ ಮುದ್ದು ಮೊಗ
ಗಲ್ಲದರೇಖೆಯು ವಲ್ಲಿಯು ಶೃಂಗಾರ ಲಲ್ಲೆಮಾತಿನ ಚೆದುರ ॥ ೪ ॥

ಕಿರುನಗೆ ನಗುವುತಲಿ ಮುಂಡೆಯು ಕಿರುಜಡೆ ಒಲಿವುತಲಿ
ಝುಣಝುಣರೆಂಬ ಪಾದದ ಗೆಜ್ಜೆಯು ಗುರು ಬುಕ್ಕಾಂಬುಧೀಶ ॥ ೫ ॥

## ೩. ಭಿಕ್ಷದ ಸೋಮೇಶಲಿಂಗಾಂಕಿತ ಸ್ವರವಚನ

ಆರಿಗೆ ಆರಿಲ್ಲ ಲಿಂಗವೆ ಮತ್ತೆ
ಸ್ಯಾರಾದರೇನಯ್ಯ ಲಿಂಗವೆ
ಮಾರಹರ ನಿಮ್ಮ ಕರುಣ ತಪ್ಪಿದ ಮ್ಯಾಲೆ
ದೂರಿಪ್ಪ ಸಾನಾದೆ ಲಿಂಗವೆ ॥ ೧ ॥

ತಂದೆ ತಾಯಿ ನೀನು ಲಿಂಗವೆ ಎನ್ನ
ಬಂಧು ಬಳಗ ನೀವು ಲಿಂಗವೆ
ಬಂದಂಥ ದುರಿತವ ಪರಿಹಾರ ಮಾಡಯ್ಯ
ಚಂದ್ರಶೇಖರ ಲಿಂಗವೆ ॥ ೨ ॥

ಮುನ್ನಮಾಡಿದಕರ್ಮ ಲಿಂಗವೆ
ಎನ್ನ ಬೆನ್ನಟ್ಟಿ ಬಿಡದ್ಸೈಯ್ಯ ಲಿಂಗವೆ
ಇನ್ನಾದರೆ ನಿಮ್ಮ ಕೃಪೆಯಿಟ್ಟು ಸಲಹೈಯ್ಯ
ಚನ್ನ ಚಿನ್ಮಯರೂಪ ಲಿಂಗವೆ ॥ ೩ ॥

ನೊಂದೆನು ಹಲವಂಗದಲ್ಲಿ ಲಿಂಗವೆ ಬಹಳ
ಬಂಧನ ಬಿಡಿಸೈಯು ಲಿಂಗವೆ
ಬಂದಂಥ ನೋವುಗಳ ಪರಿಹಾರ ಮಾಡಯ್ಯ
ಇಂದ್ರಪೂಜಿತ ಲಿಂಗವೆ ॥ ೪ ॥

ಆರಿಪಡುವಗ್ಗಳಿಕೆ ಲಿಂಗವೆ ಎನ್ನ
ಗುರಿಮಾ। [ಡದ]'ರಿಸೈಯು ಲಿಂಗವೆ
ಗುರುಪಾದ ಗತಿಯೆಂದು ನಂಬಿದ ಭಕ್ತರ
ಚರಣದೊಳಿರಿಸೈಯು ಲಿಂಗವೆ ॥ ೫ ॥

---

ಅಕರ. ಕ. 1253 (72 ಹಿಂ–73 ಮುಂ) ಕ ಅ ಸಂ.

ತೊಟ್ಟು ಹುಟ್ಟಿದ ಫಲವು ಲಿಂಗವೆ ಬಾಯಿ
ಬಿಟ್ಟರೆ ಸಲ್ಲವೇನೊ ಲಿಂಗವೆ
ಸಿಟ್ಟಲಿ ಶಿವನ ಬೈದರೆ ಆ ಪಾಪ ಬೆ-
ನ್ನಟ್ಟಿ ಬಿಡದೈಯ್ಯ ಲಿಂಗವೆ ॥ ೬ ॥

ಅಡಿಯಲೋದರೆ ಇಲ್ಲ ಲಿಂಗವೆ ಮೇಲೆ
ಹಿಡಿಲಿಕ್ಕೆ ಕೊಂಬಿಲ್ಲ ಲಿಂಗವೆ
ನಡುಸಮುದ್ರದೊಳು ಹಡಗು ಮುಳುಗದಂತೆ
ತಡಿಯ ಸೇರಿಸಯ್ಯ ಲಿಂಗವೆ ॥ ೭ ॥

ಮನವೆ ಮಜ್ಜನಸಾಲೆ ಲಿಂಗವೆ ಎನ್ನ
ತನುವೆ ಧೂಪಾರ್ತಿಯು ಲಿಂಗವೆ
ಮನದೊಳಗಿರುವಂಥ ಎಳೆಯ ಹೊಂಬಾಳೆಯ
ನಿನಗೆ ತಂದರ್ಪಿಸುವೆ ಲಿಂಗವೆ ॥ ೮ ॥

ಗಂಧಾಕ್ಷತ ಪುಷ್ಪ ಲಿಂಗವೆ ನಾವು
ತಂದೀವಿ ಪುಷ್ಪವು ಲಿಂಗವೆ ಎಂದಿ-
ನಂದದಿ ನಿಮಗೆ ತಂದು ಅರ್ಪಿಸುವೆ
ತಂದೆಯಾಗಿ ಸಲಹೈಯ ಲಿಂಗವೆ ॥ ೯ ॥

ಕೋಳಿಕೂಗದಮುನ್ನ ಲಿಂಗವೆ ಇನ್ನು ಮಾನವ-
ರೇಳದ ಮುನ್ನ ಲಿಂಗವೆ
ಏಳೆಂಟು ವ್ಯಾಳ್ಯದಲ್ಲಿ ಶಿವಪೂಜೆ ಮಾಡುವರ
ಆಳಿನ ಆಳಾಗಿಯಿರಿಸೈಯ ಲಿಂಗವೆ ॥ ೧೦ ॥

ಇಕ್ಷುಚಾಪನ[1] [ಗೆ] [1]ಲಿದ ಲಿಂಗವೆ ಎನ್ನ
ರಕ್ಷಿಸು ಅನುದಿನ ಲಿಂಗವೆ
ಅಕ್ಷ [ಯ] ಪದ [2][ವೀನ][2] ಮಹಂತ ಮಲ್ಲೇಶ್ವರ
ಭಿಕ್ಷದ ಸೋಮೇಶಲಿಂಗವೆ ॥ ೧೧ ॥

---

೧ ಡಿ ಇ ೧
ಕೃಪೆ : ಕಾಗದ ಪ್ರತಿ (ವಚನ ವಾಙ್ಮಯ ಭಾಂಡಾರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.)

೧ ಗೊ ೧ ೨ ವಿಯ ೨

## ೪. ಶಾಂತವೀರೇಶ್ವರಾಂಕಿತ ಸ್ವರವಚನ

ಭಿಕ್ಷವನೆ ಬೇಡುಂಬ ಮೋಕ್ಷಸುಖವನೆ ಕೊಟ್ಟು
ರಕ್ಷಿಸೆನ್ನನು ದಯಾಲೋಲ ದಾನಕ್ಷ (?) ‖ ಪಲ್ಲ ‖

ಅಂಗಸುಖವೆಲ್ಲ ಶಿವಲಿಂಗ ಸುಖವೆಂದರಿದು
ಮಂಗಳಾತ್ಮಕನಾಗಿ ಹರಭಕ್ತರ
ಅಂಗಳಕೆ ಹೋಗಿ ಘನಲಿಂಗಕರ್ಪಿ[ತ] ಯೆಂದು
ಹಿಂಗದಾನಂದದಿಂದಿಹಪರದೊಳು ‖ ೧ ‖

ಕರಚೆಲ್ವ ತಾಯಿಗಳ ಅಕ್ಕಗಳ ಮನೆಯಲ್ಲಿ ಭಿಕ್ಷ
ಹರಿಣಲೋಚನದ ಚಂದಿರವ[ದ]ನದ
ಪರಮಪಾವನ ಶಾಂತೆಯರ ಲಿಂಗವಂತೆಯರ
ವರಪುಣ್ಯಗೃಹದೊಳು ಭಿಕ್ಷವೆಂದು ‖ ೨ ‖

ಅಕ್ಕನಾಗಮ್ಮ ನೀಲಮ್ಮ ಚಂಗಲೆ ಚೋಳಿ
[1][ಯು][1] ಕ್ಕ ಮುಕ್ತಾಯಿಗಳ ಮಂದಿರದೊಳು
ಮುಕ್ಕಣ್ಣ ಶಾಂತವೀರೇಶ್ವರಗೆ ಭಿಕ್ಷವನು ಸ
ತ್ಯಕ್ಕಗಳ ಸದನದೊಳು ಭಿಕ್ಷವೆಂದು ‖ ೩ ‖

## ೫. ಯತಿಪುರ ಸಿದ್ಧೇಶಾಂಕಿತದ ಸ್ವರವಚನ

ಬಸವಪುರಾಣವನುಸುರಿದ ಕವಿಗಳ
ಪೆಸರ್ಗೊಂಬುವೆನಾನಂದದಲಿ
ಪಶುಪ ಮಹಾರ್ಣವ ಋಷಿಗಳ ಪದಸಾ
ರಸಗಳಿಗೆರಗುವೆ ಛಂದದಲಿ ‖ ೧ ‖

ಬಸವಪುರಾಣವನಾಂಧ್ರದಿ ರಚಿಸಿದ-
ನಸಮ ಸೋಮನಾಥೇಂದ್ರ ಕವಿ
ಕುಶಲ ಭೀಮಕವಿ ಷಟ್ಪದಿ [1][ಯಿ][1] ನಿ
ರ್ಮಿಸಿದ ಕುಕವಿಕುಲ ಕುಧರ ಪವಿ ‖ ೨ ‖

---

೧ ಅ ೧
ಆಕರ. [ಓ] 1714/19 (ಕ. ಅ. ಕೇಂದ್ರ) ಬೆಂ. ವಿ. ವಿ.
೧ ಯು ೧

ಸೂರಿಗಳಿಗೆ ಸವಿ ಸೂಱೆಗೊಡುವ ಸುಖ
ಸಾರ ಸನ್ಮತರೊಳೊಲಿದು
ಧೀರ ಶಂಕರಾರಾಧ್ಯ ಕವೀಶ್ವರ
ಪೂರ ಪೇಳ್ದ ಕವಿತೆಯ ನಲಿದು ॥ ೩ ॥

ಬಾಲಚಂದ್ರನಗರಾಲಯ ಶಿವ
ಮೌಲಿ ಷಡಕ್ಷರಿವರನಂದು
ಮೇಲೆನಿಸಿದ ವಸ್ತುಕದಿಂ ವಿರಚಿಸೆ
²[ನೊಲ್ದು]² ನಲಿಯೆ ಪಂಡಿತ ವೃಂದ ॥ ೪ ॥

ಚತುರ್ವಿಧ ಸುಪುರಾಣಗಳಿಗೆ ಶ್ರುತಿ ಸ-
ವ್ಮೃತಿಯುಹ ಗ್ರಂಥಾರ್ಥವ ನಯದಿ
ಚತುರ ಬಸವಲಿಂಗಾಖ್ಯರು ಪೇಳ್ದರು
ಯತಿಪುರ ಸಿದ್ಧೇಶನ ದಯದಿ ॥ ೫ ॥

### ೬. ಕೋಟೆದ ಸಿದ್ಧಲಿಂಗೆತಿನಾಮಾಂಕಿತ ಸ್ವರವಚನ

ಶ್ರೀ ಗುರುರಾಯನ ಪಾದವ ನೆಱೆ ನಂಬಿ
ಭೋಗ [ರಹಿತ] ನಾಗು ಕೋಗಿಲೆ ಕೋಗಿಲೆ ॥ ಪಲ್ಲ ॥

ಹಾನಿ ಬಹುದು ಮಾನಿನಿಯರ ಸಂಗವ
ಧ್ಯಾನಿಸದಿರು ಕಂಡ ಕೋಗಿಲೆ ಕೋಗಿಲೆ
ಕಾನನದೊಳು ಕಂಗೆಟ್ಟು ನೃಪನ ಬಲೆ-
ಗಾನೆ ಸಿಕ್ಕಿದಂತೆ ಕೋಗಿಲೆ ಕೋಗಿಲೆ ॥ ೧ ॥

ಕನ್ನೆವೆಣ್ಣಿನ ಕಡೆಗಣ್ಣಿನ ನೋಟಕೆ-
ನಿನ್ನೇಕೆ ಮನಸೋತೆ ಕೋಗಿಲೆ ಕೋಗಿಲೆ
ಚೆನ್ನ ಸಂಪಿಗೆಯರಳಲಿ ಬಿದ್ದು ಜಿನುಗುವ
ಹೊನ್ನದುಂಬಿಯಂತೆ ಕೋಗಿಲೆ ಕೋಗಿಲೆ ॥ ೨ ॥

ಮಂಟಿಕೆಗಾಲನಲ್ಲಾಡಿಸಿ ಪುಬ್ಬಿಂದ
ಗಂಟಿಕ್ಕಿ ಕರದರು ಕೋಗಿಲೆ ಕೋಗಿಲೆ
ಗಂಟೆಯ ಧ್ವನಿಯನಾಲಿಸದ ಹುಲ್ಲೆಗೆ ಪ್ರಾಣ-
ಕಂಟಕ ತಪ್ಪದು ಕೋಗಿಲೆ ಕೋಗಿಲೆ ॥ ೩ ॥

---

೨ ಮೇಲ ೨

ಮಾತನಾಡಿ ಮನುವನು ಸೂಚಿಗೊಂಬರಿ-
ನ್ನೇತಕೆ ಮನಸೋತೆ ಕೋಗಿಲೆ ಕೋಗಿಲೆ
ಜ್ಯೋತಿಯ ಬೆಳಗ ಕಾಮಿಸಿದ ಪತಂಗ
ಸಾ ತೆರನಹೆ ಕಂಡ ಕೋಗಿಲೆ ಕೋಗಿಲೆ ॥ ೪ ॥

ಕಾಯದಿಚ್ಛೆಗೆ ಕರಣಂಗಳನೆಲ್ಲವು
ನೋಯಿಸದಿರು ಕಂಡ ಕೋಗಿಲೆ ಕೋಗಿಲೆ
ವಾಯಾರದಿಂದೆ ತೋಂಟದ ಸಿದ್ಧಲಿಂಗೆಶಿ-
ರಾಯನ ನೆನೆ ಕಂಡ ಕೋಗಿಲೆ ಕೋಗಿಲೆ ॥ ೫ ॥

— ೦ —

ಆಧಾರ : 1253 (70 ಮುಂ) ವ. ಮಾ. ಧಾ. (ಧಾರವಾಡ)

# ಪಂಪ ಭಾರತದ ಕೆಲವು ಪದ್ಯಗಳು

—ಬಿ. ಎಸ್. ರಾಮಪ್ರಸಾದ್

ಪ್ರಥಮಾಶ್ವಾಸಂ; ಪದ್ಯ ೨೯.

ಸುರಭಿದೇವತೆಯೆಂಬ ಕಾಪಿನೆ ಮಾಣ್ದುದೇಱುವುದೊಂದದೆಂ
ದಿರದೆ ಮಾಣ್ದುದು ದೇವವಾರಣವೇೞ್ ಉಂಟವು ಪೋದೊಡಾ
ಖರ ಕರಂಗರಿದೆಂದೆ ಮಾಣ್ದರೆ ಮಾಣ್ದುವಾ ಹರಿ ನೀನೆ ಪೇ
ೞಿರಿಯವೆಂದಿವು ಭದ್ರದೇವರ ಚಾಗದೊಳ್ಪೊಱಗಾದುವೇ ।

ಬದ್ದೆಗನ ದಾನದ ಹಿರಿಮೆಯನ್ನು ವರ್ಣಿಸುವ ಈ ಪದ್ಯದ ತಾತ್ಪರ್ಯ ತಿಳಿಯುವಂತಿಲ್ಲ ಎಂದು ಡಿ.ಎಲ್.ಎನ್. ಅವರು ತಮ್ಮ ಪಂಪ ಭಾರತ ದೀಪಿಕೆಯಲ್ಲಿ ಹೇಳಿದ್ದಾರೆ. ಪದ್ಯದಲ್ಲಿ ಬರುವ "ಕಾಪಿನೆ" ಎಂಬ ಪದದ ಸ್ಥಾನದಲ್ಲಿ, ಪಂಪ ಭಾರತದ ಪ್ರಥಮ ಮುದ್ರಣದ (ಸಾಹಿತ್ಯ ಪರಿಷತ್ತು) ಸಂಪಾದಕರು ಪಾಠಾಂತರದಲ್ಲಿ ತೋರಿಸಿರುವ ಪದ್ಯದಲ್ಲಿನ "ಗೋಸಣೆ" ಎಂಬ ಪದರೂಪ ಸ್ವೀಕಾರಾರ್ಹ. ಉಳಿದ ವಸ್ತುಗಳ ಸ್ವರೂಪ ಖಚಿತವಾಗಿ ತಿಳಿಯುವಂತಿಲ್ಲ ಎಂದಿದ್ದಾರೆ. ಸಾಹಿತ್ಯ ಪರಿಷತ್ತಿನ ಆವೃತ್ತಿಯ ಸಂಪಾದಕರು ಸ್ವೀಕರಿಸಿರುವ ಪದ್ಯದ ಪಾಠವೇ ಸಮರ್ಪಕವಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ. ಮೇಲಿನ ಪದ್ಯಕ್ಕೆ ಅರ್ಥ ಹೇಳುವುದು ಕಷ್ಟಸಾಧ್ಯ. ಪಾಠಾಂತರದಲ್ಲಿರುವ ಪದ್ಯಕ್ಕೆ ಅರ್ಥ ಹೇಳುವುದು ಬಹುಶಃ ಅಸಾಧ್ಯ.

ಮೇಲಿನ ಪದ್ಯದ ಅರ್ಥವನ್ನು ತಿಳಿದುಕೊಳ್ಳಲು ಅಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ "ಮಾಣ್ದುದು" ಎಂಬ ನಿಷೇಧಾರ್ಥಕ ಪದವು ನೆರವು ನೀಡುತ್ತದೆ. ಹಾಗೆಯೇ "ಕಾಪಿನೆ" ಎಂಬ ಪದ ರೂಪವೂ ಕುತೂಹಲಕರವಾದುದಾಗಿದೆ. "ಕಾಪು" ಪದಕ್ಕೆ ಕಾವಲು, ರಕ್ಷಣೆ, ಪಹರೆ ಎಂಬರ್ಥಗಳಿರುವುದು ಸರ್ವವಿದಿತ. ಈ ಪದ ರೂಪಕ್ಕೆ ತೃತೀಯಾ ವಿಭಕ್ತಿ ಪ್ರತ್ಯಯವಾಗಿ "ಎ" ಕಾರ ಸೇರಿರುವುದೂ, ಹಲವು ವಿದ್ವಾಂಸರನ್ನೂ ಪಂಪ ಭಾರತದ ಪ್ರತಿಕಾರರನ್ನೂ ದಾರಿ ತಪ್ಪಿಸಿರುವಂತೆ ತೋರುತ್ತದೆ. "ಇಮಿಂದ ಮಿಂದೆ" ಇವು ತೃತೀಯಾ ವಿಭಕ್ತಿ ಪ್ರತ್ಯಯಗಳು. ಆದರೆ ಈ ಮೂರೂ ಪ್ರತ್ಯಯಗಳಿಗೆ "ಎಕಾರಮೊಂದೆ ಸಮುಚಿಮಾದೇಶಂ" (ಸೂತ್ರ ೧೧೭, ಡಿ. ಎಲ್. ಎನ್. ಆವೃತ್ತಿ) ಎಂದೂ ಕೇಶಿರಾಜನು ಹೇಳಿದ್ದಾನೆ. ಉಕಾರಾಂತ ಪ್ರಕೃತಿಗಳಿಗೆ ತೃತೀಯಾ ವಿಭಕ್ತಿ ಪ್ರತ್ಯಯವೇ ಮೊದಲಾದ ಪ್ರತ್ಯಯಗಳು ಪರವಾದಾಗ ಇನಾಗಮವು ಕಾಣಿಸಿಕೊಳ್ಳುವುದು ಸ್ವಲ್ಪ ಅಪೂರ್ವ. ಈ ವಿಚಾರಗಳ ಹಿನ್ನೆಲೆಯಲ್ಲಿ ಪದ್ಯದ ಅರ್ಥ ಮತ್ತು ತಾತ್ಪರ್ಯಗಳನ್ನು ಹೀಗೆ ವಿವರಿಸಬಹುದಾಗಿದೆ :

"ಸುರಭಿ ದೇವತೆಯೆಂಬ ಕಾಪಿನೆ ಮಾಣ್ದುದು"=ಕಾಮಧೇನುವು ದೇವತೆಯೆಂಬ ರಕ್ಷಣೆಯಿರುವುದರಿಂದ ದಾನ ಕೊಡುವ ವಸ್ತುವಲ್ಲ ಎಂದಾಯಿತು. "ಏರುವುದೊಂದದೆಂದಿರದೆ ಮಾಣ್ದುದು ದೇವ ವಾರಣವು"=ಇಂದ್ರನ ಆನೆ ಐರಾವತವು ಸಂಚರಿಸಲು ಇರುವುದು ಒಂದೇ ಎಂಬ ಕಾರಣದಿಂದ ದಾನ ಕೊಡಲು ತಕ್ಕುದಲ್ಲ ಎನಿಸಿದೆ. "ಏಟ್ ಉಂಟವು ಪೋದೊಡಾ ಖರಕರಂಗರಿದೆಂದೆ ಮಾಣ್ದರೆ ಮಾಣ್ದವಾಹರಿ"=ಆ ಕುದುರೆಗಳು ಅವು ಏಳೇ ಇವೆ. (ಸೂರ್ಯನ ಸಪ್ತಾಶ್ವಗಳು) ಅವು ಹೋದರೆ ಸೂರ್ಯನಿಗೆ (ಸಂಚರಿಸುವುದು) ಅಸಾಧ್ಯ ಎಂಬ ಕಾರಣದಿಂದ ಆ ಕುದುರೆಗಳು ದಾನಕ್ಕೆ ತಕ್ಕುವಲ್ಲ ಎನಿಸಿದುವು. "ನೀನೆ ಪೇಟ್ ಅರಿಯುವೆಂದಿವು"=ನೀನೆ ಹೇಳು ಅಪೂರ್ವ ವಸ್ತುಗಳಾದ ಇವು, "ಭದ್ರ ದೇವರ ಚಾಗದೊಳ್ಪೊಱಗಾದವೇ"=ಭದ್ರದೇವನ ತ್ಯಾಗದಲ್ಲಿ ಹೊರಗಾದುವೋ? ಇಲ್ಲ ಎಂದು ಭಾವ. ಕಾಮಧೇನುವಾಗಲಿ, ಐರಾವತವಾಗಲಿ, ಸೂರ್ಯನ ಸಪ್ತಾಶ್ವಗಳೇ ಆಗಲಿ ಬದ್ದೆಗನ ಬಳಿಯಿದ್ದಿದ್ದರೆ ದಾನಕ್ಕೆ ಹೊರತಾದ ವಸ್ತುಗಳಾಗುತ್ತಿರಲಿಲ್ಲ ಎಂದು ಒಟ್ಟು ಅರ್ಥ.

ಪ್ರಥಮಾಶ್ವಾಸಂ ; ಪದ್ಯ ೬೦

ಕಮಲೋದ್ಭವನಮಳಿನ ಹೃ
ತ್ಕಮಲದೊಳೊಗೆದರ್ ಸುರೇಂದ್ರ ಧಾರಕರಾವಾ ।
ಗಮುಳರ್ ನೆಗಟ್ದರ್ ಪುಳ
ಹ ಮರೀಚ್ಯತ್ರ್ಯಂಗಿರಃ ಪುಳಸ್ತ್ಯ ಕ್ರತುಗಳ್ ॥

ಈ ಪದ್ಯದ ತಾತ್ಪರ್ಯವನ್ನು ಬರೆಯುವಾಗ ಡಿ. ಎಲ್. ಎನ್. ಅವರು "ಸುರೇಂದ್ರಧಾರಕರ್" ಪದ್ಯಕ್ಕೆ "ಶ್ರೇಷ್ಠವಾದ ನೀರಿನ ಕಮಂಡಲವನ್ನು ಹಿಡಿದುಕೊಂಡ" ಎಂಬ ಅರ್ಥವನ್ನು ಹೇಳಿ ಅದು ಸಂಶಯಾಸ್ಪದವಾದದ್ದು ಎಂದೂ ಸೂಚಿಸಿದ್ದಾರೆ. "ಧಾರಕ" ಪದಕ್ಕೆ ಕಿಟಲ್ ನಿಘಂಟಿನಲ್ಲಿ 'Containing' ಎಂಬ ಅರ್ಥ ಕೊಟ್ಟಿದೆ. ಮೇಲಿನ ಪದಕ್ಕೆ "ಇಂದ್ರನನ್ನೂ ಧರಿಸಬಲ್ಲ ನಿಯಂತ್ರಿಸಬಲ್ಲ ಶಕ್ತಿಯುಳ್ಳವರು" ತಮ್ಮ ತಪಶ್ಶಕ್ತಿಯಿಂದ "ಇಂದ್ರನಿಗೆ ಆಧಾರವಾಗಿರುವವರು" ಎಂದು ನೇರವಾದ ಅರ್ಥವನ್ನೇ ಹೇಳಬಹುದಾಗಿದೆ. "ಧಾರಕ" ಪದವನ್ನು ಅತ್ಯಂತ ಉಚಿತವೂ ಮನೋಜ್ಞವೂ ಆದ ರೀತಿಯಲ್ಲಿ ಪಂಪನು ಪ್ರಯೋಗಿಸಿದ್ದಾನೆ.

ಪ್ರಥಮಾಶ್ವಾಸಂ ; ಪದ್ಯ ೬೩

ಆ ಸೋಮವಂಶಜರ್ ಪಲ
ರಾ ಸುಕರಂ ಬೆರಸು ನೆಗಟ್ದ ಜಸದಿಂ ಜಗಮಂ ।
ಬಾಸಣಿಸಿ ಪೋದೊಡಧಿಕ ವಿ
ಳಾಸಂ ದೌಷ್ಯಂತಿ ಭರತನೆಂಬಂ ನೆಗಟ್ದಂ ॥

ಈ ಪದ್ಯಕ್ಕೆ ಸಂಬಂಧಿಸಿದಂತೆ ವಿಚಾರ ಮಾಡಬೇಕಾಗಿರುವುದು ಡಿ.ಎಲ್.ಎಸ್. ಅವರು ಗುರುತಿಸಿರುವ "ಆಸುಕರ" ಪದವನ್ನು ಕುರಿತು. ಅವರು ಹೇಳುತ್ತಾರೆ: "ಇಲ್ಲಿ ಆಸುಕರಂ ಎಂಬುದರ ಅರ್ಥ ಚಿಂತನೀಯ. ಇದಕ್ಕೆ ಅತಿಶಯ ಎಂಬರ್ಥ ವನ್ನು ಕೊಟ್ಟಿದೆ (ಪಂಪಭಾರತ ನಿಘಂಟು). ಸಂಸ್ಕೃತದ "ಆಶು" = ಶೀಘ್ರ, ತ್ವರಿತ ಎಂಬುದು ಪ್ರಾಕೃತದಲ್ಲಿ ಆಸು ಆಗುತ್ತದೆ; ಆಸುಕಾರ ಎಂಬುದೊಂದು ಶಬ್ದ ಪ್ರಾಕೃತದಲ್ಲುಂಟು; ಅದಕ್ಕೆ ಹಿಂಸೆ, ಹೊಡೆಯುವುದು, ಮರಣ ಕಾರಣ ಎಂಬರ್ಥ ಗಳಿವೆ; ಇವು ಪ್ರಕೃತ ಸಂದರ್ಭಕ್ಕೆ ಹೊಂದುವುದಿಲ್ಲ. "ಕೇಸುರಿ ಸೂಸೆ ತನ್ನ ಮೊಗದಿಂ ಕಿಡಿ ಬೀಱೆ ತನ್ನ ಕಣ್ಗಳಿಂದಾಸುರಮಾಗೆ ದಾಡೆಗಳೊಡಲ್ ಬಳೆ ದಂಬರಮಂ ತಱುಂಬೆ ತನ್ನಾಸುಕರಂ ಕರಂ ದೆಸೆಗಮರ್ಪಿಸೆ...." ಎಂಬ ನಾಗಚಂದ್ರನ ಪ್ರಯೋಗದಲ್ಲಿ (ಪಂಪ ರಾಮಾಯಣ; ೧೧-೧೦೭) ಆಸುಕರಂ ಎಂಬುದು ಭಯಂಕರ ಕಾರ್ಯ ನಿರ್ದೇಶಕವೆಂದು ತೋರುತ್ತದೆ; ತೀವ್ರತ್ವ ರಭಸ, ಪ್ರತಾಪ ಇತ್ಯಾದಿ ಅರ್ಥವಾಗಬಹುದು." (ಪಂಪ ಭಾರತ ದೀಪಿಕೆ-೨೩.)

ಆಸುಕರ ಪದಕ್ಕೆ ಡಿ. ಎಲ್. ಎಸ್. ಅವರು ಹೇಳುವ ಯಾವ ಅರ್ಥಗಳೂ ಪ್ರಕೃತ ಪದ್ಯದ ಸಂದರ್ಭಕ್ಕೆ ಹೊಂದಿಕೊಳ್ಳುವುದಿಲ್ಲ. ಮೇಲೆ ಉದಾಹರಿಸಿರುವ ಪದ್ಯದಲ್ಲಿರುವ ಪದವು ಆಸುಕರ ಅಲ್ಲ ಸುಕರ ಎಂದು ನನ್ನ ಅಭಿಪ್ರಾಯ. ಇಲ್ಲಿ ಪಲರ್+ಆ+ಸುಕರಂ ಬೆರಸು ಎಂಬ ಪದವಿಭಾಗ ವಿಹಿತವಾದುದು. ಕರ ಪದಕ್ಕೆ ಕಿರಣ ಎಂಬರ್ಥವೂ ಇದೆಯಷ್ಟೆ. ಸುಕರ ಪದಕ್ಕೆ ಶೋಭಾಯಮಾನವಾದ ಕಿರಣಗಳು ಎಂಬ ಅರ್ಥ ಹೇಳಬಹುದು. ಕೀರ್ತಿ ಬೆಳ್ಳಗಿರುತ್ತದೆ. ಅಪಕೀರ್ತಿ ಕಪ್ಪಗಿರುತ್ತದೆ ಎಂಬ ಕವಿ ಸಮಯವೂ ಇದೆ. ಈ ವಿಚಾರಗಳ ಹಿನ್ನೆಲೆಯಲ್ಲಿ ಪದ್ಯಕ್ಕೆ ಹೀಗೆ ಅರ್ಥ ಹೇಳಬಹುದು: "ಚಂದ್ರವಂಶದಲ್ಲಿ ಹುಟ್ಟಿದ ಹಲವರು ಆ (ಚಂದ್ರನ) ಮನೋಹರವಾದ ಕಾಂತಿಯೊಂದಿಗೆ ಕೂಡಿದ ಕೀರ್ತಿಯು ಜಗತ್ತನ್ನು ಆವರಿಸುವಂತೆ (ರಾಜ್ಯಭಾರ) ಮಾಡಿ ಹೋದರು. (ಅದೇ ವಂಶದಲ್ಲಿ) ದುಷ್ಯಂತನ ಮಗನಾದ ಭರತನೆಂಬವನು ಹುಟ್ಟಿದನು.

ಆಸುಕರ ಪದದ ಅರ್ಥವನ್ನು ಕುರಿತು ವಿಚಾರ ಮಾಡುವಾಗ ಡಿ.ಎಲ್.ಎಸ್. ಅವರು ಉದಾಹರಿಸಿರುವ ಪಂಪ ರಾಮಾಯಣದ ಪದ್ಯವು ಈ ಕೃತಿಯ ಸಂಗ್ರಹ ಆವೃತ್ತಿಯಲ್ಲಿಯೂ ಸೇರ್ಪಡೆಯಾಗಿವೆ (೬-೩೭). ಶಬ್ದಕೋಶದಲ್ಲಿ ಈಪದವು ಆಶುಕರ ಎಂಬ ಸಂಸ್ಕೃತ ಪದದಿಂದ ಬಂದಿರಬಹುದೆಂದು ಸೂಚಿಸಿದೆ (ಪು. ೧೬೮). ಸಂಸ್ಕೃತ ಭಾಷೆಯಲ್ಲಿ "ಆಶು" ಪದವಿದೆ. "ಸಂಸ್ಕೃತ ನಿಘಂಟುಗಳಲ್ಲಿ ಈ ಪದ ಬೇರೆ ಬೇರೆ ಪದ ಗಳೊಂದಿಗೆ ಸೇರಿ ಪಡೆದುಕೊಳ್ಳುವ ಹಲವಾರು ಸಮಸ್ತ ರೂಪಗಳನ್ನು ಕೊಡ ಲಾಗಿದೆ. ಆದರೆ ಮಾನಿಯರ್ ವಿಲಿಯಂಸ್, ಆಪ್ಟೆ ಮತ್ತು ಶ್ರೀನಿವಾಸ ಗೋಪಾಲಾಚಾರ್ಯ ಇವರ ಸಂಸ್ಕೃತ ನಿಘಂಟುಗಳಲ್ಲಿ ಆಶುಕರ ಅಥವಾ ಆಶುಕರ

ರೂಪಗಳು ಕಾಣುವುದಿಲ್ಲ. ಸಂಸ್ಕೃತ ಭಾಷೆಯನ್ನು ಬಲ್ಲವರ ಅಭಿಪ್ರಾಯದಲ್ಲಿ ಅಶುಕರ ಪದವು ಸಾಮಾನ್ಯವಾಗಿ ಬಳಕೆಯಲ್ಲಿರುವ ಪದವಂತೂ ಅಲ್ಲ. ಸಂಸ್ಕೃತ ನಿಘಂಟುಗಳಲ್ಲಿ ಆಸುಕಾರಿನ್ ಎಂಬ ಪದರೂಪವಿದೆ. ಚಟುವಟಿಕೆಯುಳ್ಳವನು ಎಂದು ಈ ಪದದ ಅರ್ಥ. ಆಸುಕಾರ ಪ್ರಾಕೃತ ಪದಕ್ಕೆ ಡಿ. ಎಲ್. ಎನ್. ಅವರು ಕೊಟ್ಟಿರುವ ಅರ್ಥಗಳನ್ನು ಗಮನಿಸಿದರೆ ಈ ಪದದ ಮೂಲ ಸಂಸ್ಕೃತದ ಆಶು ಪದ ಎಂದು ಒಪ್ಪುವುದು ಕಷ್ಟ. ಪ್ರಾಕೃತ ಪದದ ಮೂಲವನ್ನು ಬೇರೆ ಆಕರಗಳಲ್ಲಿಯೇ ಹುಡುಕಬೇಕಾಗಬಹುದು. ಅಸುಕರ ಕನ್ನಡ ಪದವು ಪ್ರಾಕೃತದ ಮೂಲಕ ಬಂದಿರ ಬಹುದು ಎಂದು ವಾದಿಸುವುದಕ್ಕೆ ಎರಡೂ ಭಾಷೆಗಳಲ್ಲಿ ಪದಗಳಿಗಿರುವ ಸಂಪೂರ್ಣ ವಿಭಿನ್ನಾರ್ಥಗಳು ಅಡ್ಡಿಯಾಗಿ ನಿಲ್ಲುತ್ತವೆ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ನಿಘಂಟಿನ ಪ್ರಥಮ ಸಂಪುಟದಲ್ಲಿ ಅಸುಕರ ಪದವನ್ನು ಸೇರಿಸಿ ಆಧಿಕ್ಯ, ತೀವ್ರತೆ, ಅತಿಶಯ ಎಂಬ ಅರ್ಥಗಳನ್ನು ನೀಡ ಲಾಗಿದೆ. ಈಗಾಗಲೇ ಉದಾಹರಿಸಲಾಗಿರುವ ಎರಡು ಪದ್ಯಗಳಲ್ಲದೆ ಪಂಪ ಭಾರತದ ಮತ್ತೊಂದು ಪದ್ಯವನ್ನು ಈ ಪದಕ್ಕೆ ಆಕರವಾಗಿ ಸೂಚಿಸಲಾಗಿದೆ. ಪದ್ಯ ಈ ರೀತಿಯಿದೆ. ಆಶ್ವಾಸ–೧೧, ಪದ್ಯ ೫೭

ಆ ಸಕಳ ಧರಾಧೀಶರ್
ಬೀಸುವ ಕುಂಚಮನೆ ಪಾರ್ದು ಬೀಸಲೊಡಂ ಕೆ
ಯ್ವೀಸಲೊಡಮಜ಼ಿದು ತಾಗಿದು
ವಾಸುಕರಂ ಬೆರಸು ತಡೆಯದುಭಯಬಲಂಗಳ್

ಡಿ. ಎಲ್. ಎನ್. ಅವರು ಪದ್ಯಕ್ಕೆ ಈ ರೀತಿ ವ್ಯಾಖ್ಯಾನಿಸಿದ್ದಾರೆ. "ಆ ಎಲ್ಲ ರಾಜರ ಬೀಸುವ ಚವರಿಗಳನ್ನೇ ನೋಡಿ, ಬೀಸಿದ ಕೂಡಲೇ, ತೋಳುಗಳನ್ನು ಬೀಸಿದ ಕೂಡಲೆ ಎರಡು ಸೈನ್ಯಗಳೂ ತಿಳಿದು ತಡಮಾಡದೆ, ತೀವ್ರತೆಯಿಂದ ಕೂಡಿ (ಅಸುಕರಂ ಬೆರಸು) ಸಂಘಟ್ಟಿಸಿದುವು. ಮುಖಾಮುಖಿಯಾಗಿರುವ ಎರಡು ಸೈನ್ಯ ಗಳು ನಾಯಕರ ಕೈ ಸಂಜ್ಞೆಯೊಂದಿಗೆ ಯುದ್ಧ ಪ್ರಾರಂಭಿಸುವ ಸನ್ನಿವೇಶದ ವರ್ಣನೆ ಯಿದು. ಈ ಸಂದರ್ಭದಲ್ಲಿ ಕೂಡ ಪದ ವಿಭಾಗ ಸುಕರಂ ಬೆರಸು ಎಂದೇ ಆಗ ಬೇಕೆಂಬುದು ನನ್ನ ಅಭಿಪ್ರಾಯ. ಈ ಸಂದರ್ಭದಲ್ಲಿ ಸುಕರ ಪದಕ್ಕೆ ಸುಂದರವಾದ ಕೈಗಳು ಎಂದು ಅರ್ಥ ಹೇಳಬಹುದು. ಕೈಗಳಲ್ಲಿ ಸುಂದರವಾಗಿರುವುದೇನು ? ಎಂದರೆ ಅವುಗಳ ಚಲನೆ. ಯುದ್ಧ ಪ್ರಾರಂಭಿಸುವಂತೆ ಕೈ ಸನ್ನೆ ಮಾಡುವ ಸೇನಾ ನಾಯಕರುಗಳು ಶಿಸ್ತಿನಿಂದ ಲಯಬದ್ಧವಾಗಿ ಕೈ ಬೀಸುತ್ತಾರೆಯೇ ಹೊರತು ಮನ ಬಂದಂತಲ್ಲ. ಸ್ವತಃ ಯೋಧನಾಗಿದ್ದ ಪಂಪನು, ಸೈನ್ಯಗಳು ಆಜ್ಞೆಯನ್ನು ನಿರೀಕ್ಷಿಸುತ್ತ ಕಾದಿದ್ದು, ಬೀಸಿದ ಕೈಗಳ ಚಲನೆಯೊಂದಿಗೆ ಹೊಂದಿಕೊಂಡು (ಬೆರಸು) ಯುದ್ಧಕ್ಕೆ ನುಗ್ಗಿದುದನ್ನು ಇಲ್ಲಿ ವರ್ಣಿಸಿದ್ದಾನೆ. ಪಂಪ ರಾಮಾಯಣದ ಪದ್ಯದಲ್ಲಿ

ಕಾಣಿಸುವ ಪದರೂಪ ಕೂಡ "ಅಸುಕರ"ವೆ ಎಂಬುದು ವಿವಾದಾಸ್ಪದ. ಕೋಪೋದ್ರಿಕ್ತಳಾದ ಮಂಡೋದರಿಯು ಆಂಜನೇಯನನ್ನು ಅಪ್ಪಳಿಸಲು ಕೈಯೆತ್ತುವ ಸನ್ನಿವೇಶವು ಈ ಪದ್ಯದಲ್ಲಿ ಚಿತ್ರಿತವಾಗಿದೆ. ಇಲ್ಲಿಯೂ "ಕರಂ" ಪದರೂಪವಿದ್ದು ಬದಲಾಗುತ್ತಿರುವ ಮಂಡೋದರಿ ದೈಹಿಕ ರೂಪದ ವರ್ಣನೆಯಲ್ಲಿ ಅವಳ ತೋಳುಗಳನ್ನು ಸೂಚಿಸುತ್ತಿರಬಹುದೇ ಎಂದು ಅನುಮಾನಿಸಲು ಅವಕಾಶಗಳಿವೆ.

ಅಸುಕರ ಪದಕ್ಕೆ ನಿಘಂಟಿನಲ್ಲಿ ಸೂಚಿಸಿರುವ ಈ ಮೂರು ಆಕರಗಳಲ್ಲದೆ ಬೇರೆ ಆಕರಗಳಿಲ್ಲದಿದ್ದರೆ ನಿಘಂಟುವಿನಲ್ಲಿ ಈ ಪದದ ಸೇರ್ಪಡೆಯೇ ಪ್ರಶ್ನಾರ್ಹವಾದುದಾಗುತ್ತದೆ.

ದ್ವಿತೀಯಾಶ್ವಾಸಂ ; ಪದ್ಯ ೨೭.

> ಕೞಿದವರ್ಗೞ್ವುದೞ್ತೊಡವಱೞ್ವುಡಮಂತವರಿಂ ಬೞಿಕ್ಕೆ ತಾ
> ಮುೞಿವೊಡಮೇೞರಂತವರಣಂ ತಮಗಂ ಬರ್ದುಕಿಲ್ಲ ಧರ್ಮಮಂ
> ಗೞಿಯಿಸಿಕೊಳ್ವುದೊಂದೆ ಚದುರಿಂತುಟು ಸಂಸೃತಿ ಧರ್ಮಮೇಕೆ ಬಾ
> ಯೞಿವುದಿದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ

ತುಂಬ ಸುಂದರವಾದ ಈ ಪದ್ಯವು ಪಂಪ ಭಾರತ ಮತ್ತು ಆದಿಪುರಾಣಗಳೆರಡರಲ್ಲೂ ಬರುವುದರಿಂದ ಪಂಪನಿಗೂ ತುಂಬ ಪ್ರಿಯವಾಗಿದ್ದಿರಬೇಕೆಂದು ಡಿ. ಎಲ್. ಎನ್. ಅವರು ಹೇಳಿದ್ದಾರೆ. ಅವರು ಪದ್ಯಕ್ಕೆ ಹೇಳುವ ಅರ್ಥ ಈ ರೀತಿಯಿದೆ: "ಅತ್ತರೆ ಸತ್ತವರು ಏಳುವ ಪಕ್ಷದಲ್ಲಿ ಸತ್ತವರಿಗೆ ಅಳುವುದು, ಹಾಗೆ ಅವರ ಅನಂತರ ತಾವು ಉಳಿದುಕೊಳ್ಳುವ ಪಕ್ಷದಲ್ಲಿ ಅಳುವುದು ಎಂಬ ಅಧ್ಯಾಹಾರ; ಹಾಗೆ ಸತ್ತವರು ಏಳುವುದಿಲ್ಲ ತಮಗೂ ಬಾಳುವೆಯಿಲ್ಲ, ಧರ್ಮವನ್ನು ಸೇರುವ ಹಾಗೆ ಮಾಡಿಕೊಳ್ಳುವುದೊಂದೆ ಜಾಣತನ; ಹುಟ್ಟು ಸಾವುಗಳಿಗೆ ಸಂಬಂಧಿಸಿದ ಧರ್ಮವು ಹೀಗೆ ಉಂಟು; ಇದು ಏಕೆ ಚಿಂತಿಸುವುದು, ಏಕೆ ವ್ಯಥೆ ಪಡುವುದು."

ವಿಚಾರ ಮಾಡಬೇಕಾಗಿರುವುದು "ತಾಮುೞಿವೊಡಮೇೞರಂತವರಣಂ ತಮಗಂ ಬರ್ದುಕಿಲ್ಲ" ಎಂಬ ಭಾಗದ ಅರ್ಥವನ್ನು ಕುರಿತು ಈ ಭಾಗಕ್ಕೆ ಸಾಂಪ್ರದಾಯಿಕವಾಗಿ ಹೇಳಿಕೊಂಡು ಬಂದಿರುವ "ತಾವು ಉಳಿದುಕೊಳ್ಳುವ ಪಕ್ಷದಲ್ಲಿ ಅಳುವುದು" ಎಂಬ ಅರ್ಥಕ್ಕಿಂತಲೂ, ಜೀವವನ್ನು ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಸತ್ತವರಿಗಾಗಿ ಅತ್ತೂ ಅತ್ತೂ ತಾವೂ ಜೀವವನ್ನು ಬಿಟ್ಟರೂ ಅವರೇನೂ ಏಳುವಂತಿಲ್ಲ ತಮಗೂ ಬದುಕಿಲ್ಲದಂತಾಗುತ್ತದೆ; ಎಂದು ಅರ್ಥ ಹೇಳುವುದು ಹೆಚ್ಚು ಉಚಿತವಾಗಿರುವುದೆಂದು ತೋರುತ್ತದೆ.

ದ್ವಾದಶಾಶ್ವಾಸಂ ; ಪದ್ಯ ೫೬

ನುಡಿವುದಂ ಪತಿಭಕ್ತಿಯ ಪೆಂಪಿಂನೀಂ ನುಡಿದೈ ಪೆಱತಂದದಿಂ
ನುಡಿದೆಯಲ್ತೆ ಮದಾಯ ಮಮೋಘಂ ಸೂಱೆವಡೆಯಲ್ಕೆನಗಕ್ಕುಮಿ
ನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗ ಮಹೀಪತೀ

ಕರ್ಣನು ಕೌರವ ಸೈನ್ಯದ ಸೇನಾಧಿಪತಿಯಾಗಿ ಅಧಿಕಾರ ವಹಿಸಿಕೊಂಡನಂತರ, ಭೀಷ್ಮನ ಬಳಿಗೆ ಬರುತ್ತಾನೆ. ಯುದ್ಧದ ಆರಂಭದಲ್ಲಿ ಭೀಷ್ಮನ ಬಗೆಗೆ ತಾನು ಆಡಿದ ಮಾತುಗಳಿಗೆ ಪಶ್ಚಾತ್ತಾಪ ಪಟ್ಟು, ಭೀಷ್ಮನ ಕ್ಷಮೆ ಕೇಳುತ್ತಾನೆ. ಆಗ ಕರ್ಣನನ್ನು ಸಮಾಧಾನ ಪಡಿಸುತ್ತಾ ಭೀಷ್ಮನು ಈ ಮೇಲಿನ ಮಾತುಗಳನ್ನು ಹೇಳುತ್ತಾನೆ. ಪದ್ಯದ ಒಟ್ಟು ಅರ್ಥ ಸ್ಪಷ್ಟವಾಗಿದೆ. ಆದರೆ "ಮದಾಯಮಮೋಘಂ ಸೂಟ್ಟೆಡೆಯಲ್ಕೆನಗಕ್ಕುಮಿನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೇ" ಎಂಬ ಮಾತುಗಳ ಅರ್ಥವನ್ನು ಕುರಿತಂತೆ ಭಿನ್ನಾಭಿಪ್ರಾಯವಿದೆ. "ನನ್ನ ಸಾಮರ್ಥ್ಯವು ವ್ಯರ್ಥವಲ್ಲದ್ದು ; ಸರದಿಯನ್ನು ಪಡೆಯುವುದಕ್ಕೆ ಆಗುತ್ತದೆ ಎಂದು ಹೇಳಿದೆನು ; ಅದೇನು ತಪ್ಪಾಯಿತೆ" ಎಂಬ ಅರ್ಥವನ್ನು ಹೇಳುವ ಡಿ. ಎಲ್. ಎನ್. ಅವರು "ಹೀಗೆಂದು ಭೀಷ್ಮ ತನ್ನನ್ನು ತಾನೇ ಹೊಗಳಿಕೊಳ್ಳುವನೆ?" "ಆಯ ಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥ ಕಾಣುವುದಿಲ್ಲ" ಎಂಬ ಸಂಶಯಗಳನ್ನೂ ಸೂಚಿಸಿದ್ದಾರೆ. ಈ ಸಂದರ್ಭದಲ್ಲಿ ಭೀಷ್ಮನು ತನ್ನ ಸಾಮರ್ಥ್ಯವನ್ನು ಕುರಿತು ಹೇಳಿಕೊಳ್ಳುತ್ತಿಲ್ಲ. ಕರ್ಣನು ಆಡಿದ್ದ ಮಾತುಗಳನ್ನೇ ಅವನಿಗೆ ನೆನಪು ಮಾಡಿಕೊಟ್ಟು ಆ ಮಾತುಗಳಲ್ಲಿ ಆಕ್ಷೇಪಿಸುವಂತಹುದೇನೂ ಇರಲಿಲ್ಲವೆಂದು ಹೇಳುತ್ತಿದ್ದಾನೆ ಎಂದು ಎಸ್.ವಿ. ಪರಮೇಶ್ವರ ಭಟ್ಟರ ಅಭಿಪ್ರಾಯ. "ನನ್ನ ಆಯ ವ್ಯರ್ಥರಹಿತವಾದದ್ದು. ನನಗೆ ಯುದ್ಧ ಮಾಡುವ ಅವಕಾಶಗಳು ಬೇಕು ಎಂದೆ. ಅದು ಎಂದದ್ದು ತಪ್ಪಾಯಿತೆ." (ಪಂಪನು ಬೆಳಗಿರುವ ಲೌಕಿಕದ ಒಂದು ಚಿತ್ರ–ವಿಮರ್ಶೆಯ ದಾರಿ–ಭಾಗ–೧, ಪುಟ ೪೫) ಎಂದು ಈ ಭಾಗಕ್ಕೆ ಅವರು ವ್ಯಾಖ್ಯಾನ ಮಾಡುತ್ತಾರೆ. ಮುಳಿಯ ತಿಮ್ಮಪ್ಪಯ್ಯನವರು ಯಾವ ಆಧಾರವೂ ಇಲ್ಲದೆ ಪದ್ಯದ ಪಾಠವನ್ನೇ ಮಾರ್ಪಡಿಸಿಬಿಡುತ್ತಾರೆ. "ನಾನಾದರೂ 'ಸೂಟ್ಟೆಡೆಯಲ್ಕಿನಗಕ್ಕುಮಿನ್ನೆಡೆಯೊಳ್' ಎಂದಷ್ಟೇ ಹೇಳಿದೆನಲ್ಲದೆ ಬೇಸರಿಸಲಿಲ್ಲ. "ಅದೇಂ ತಪ್ಪಾದುದೇ" ಎಂದನು." (ನಾಡೋಜಪಂಪ, ದ್ವಿ. ಆ. ಪು. ೪೨೧).

ಆಯ ಪದಕ್ಕೆ ಬೇರೆ ಬೇರೆ ಅರ್ಥಗಳಿವೆಯಾದರೂ ಈ ಪದ್ಯದ ಸಂದರ್ಭದಲ್ಲಿ ಸಾಮರ್ಥ್ಯ ಎಂಬ ಅರ್ಥವನ್ನು ಹೊರತುಪಡಿಸಿ ಇನ್ನಾವ ಅರ್ಥವೂ ಹೊಂದಿಕೊಳ್ಳುವುದಿಲ್ಲ. ಆದ್ದರಿಂದ ಈ ಭಾಗಕ್ಕೆ ಡಿ. ಎಲ್. ಎನ್. ಅವರು ಹೇಳುವ ಅರ್ಥವೇ ಒಟ್ಟಾರೆ ಸರಿಯಾದುದಾಗಿದೆ. ಹಾಗಾದರೆ ಅವರು ಎತ್ತಿರುವ ಸಂಶಯಕ್ಕೆ ಯಾವು

ದಾದರೂ ಸಮಾಧಾನವನ್ನು ಸೂಚಿಸಬಹುದೆ? ಮರಣಾಸನ್ನ ಸ್ಥಿತಿಯಲ್ಲಿ ಭೀಷ್ಮನು ತನ್ನ ಶಕ್ತಿ ಸಾಮರ್ಥ್ಯಗಳನ್ನು ಕುರಿತು ಹೇಳಿಕೊಳ್ಳುತ್ತಿಲ್ಲ. ಹಿಂದೆ ತನಗೂ ಕರ್ಣನಿಗೂ ನಡೆದ ಮಾತುಕತೆಗಳನ್ನು ಸ್ಮರಿಸಿಕೊಳ್ಳುತ್ತಿದ್ದಾನೆ. ಸೇನಾಧಿಪತಿಯಾಗಿ ಅಭಿಷಿಕ್ತನಾಗಿದ್ದ ಭೀಷ್ಮನ ಅರ್ಹತೆಗಳನ್ನು ತುಂಬಿದ ಸಭೆಯಲ್ಲಿ ಕರ್ಣನು ಪ್ರಶ್ನಿಸಿದಾಗ ತನ್ನ ಶಕ್ತಿ ಸಾಮರ್ಥ್ಯಗಳನ್ನು ಕುರಿತು ಪ್ರತಿಜ್ಞಾಪೂರ್ವಕವಾಗಿ ಹೇಳಿಕೊಳ್ಳುವುದು ಭೀಷ್ಮನಿಗೆ ಅನಿವಾರ್ಯವಾಗುತ್ತದೆಯಷ್ಟೆ. ಆದರೆ ಹಾಗೆ ಪ್ರತಿಜ್ಞೆ ಮಾಡುವಾಗಲೂ ತಾನು ಯುದ್ಧದಲ್ಲಿ ಗೆಲ್ಲಲಾರೆ ಎಂಬುದೂ ಅವನಿಗೆ ತಿಳಿದಿತ್ತು ಅದನ್ನು ಹೇಳಿಯೂ ಇದ್ದ. ಅದನ್ನೆ ಕರ್ಣನಿಗೆ ಮತ್ತೆ ನೆನಪು ಮಾಡಿಕೊಡುತ್ತಿದ್ದಾನೆ. "ನನ್ನ ಶಕ್ತಿ ಸಾಮರ್ಥ್ಯಗಳು ಅತಿಶಯವಾದುವೇ, ಆದರೂ ಯುದ್ಧದಲ್ಲಿ ಹೋರಾಡುವ ಅವಕಾಶವನ್ನಷ್ಟೇ ಪಡೆಯಬಲ್ಲೆ ಎಂದು ಹೇಳಿದ್ದೆನಲ್ಲವೇ? ಅದು ತಪ್ಪಾಗಲಿಲ್ಲ ಅಲ್ಲವೇ" ಎಂದು ಯಾವ ಆಕ್ರೋಶವೂ ಇಲ್ಲದೆ, ಸಮಾಧಾನ ಚಿತ್ತದಿಂದ ಭೀಷ್ಮ ಹೇಳುತ್ತಿರುವ ಈ ಮಾತುಗಳು ಸಂದರ್ಭಕ್ಕೆ ಉಚಿತವಾಗಿಯೇ ಇವೆ.

— o —

# ಪಂಪ ಭಾರತದ ಒಂದು ಪದ್ಯ
(ವಿವರಣೆ)

—ಕೆ. ಎಸ್. ಮಧುಸೂದನ

## 1.1. ಪದ್ಯ

ತೊಡರ್ದಮರ್ದ ಬಾಳವಣ್ಣದ
ತುಡುಗೆ ಪಳಂಚಲೆವ ಪಂಚಜಡೆ ನೊಸಲೊಳೊಡಂ
ಬಡುವರಳೆಲೆಯುವಱಿಂ ಚೆ
ಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (೨-೪)

## 1.2. ಸಂದರ್ಭ :

ಮಗುವಾಗಿದ್ದ ಧರ್ಮರಾಯನ ಬಾಲಲೀಲೆಯನ್ನು ವರ್ಣಿಸುವ ಸಂದರ್ಭದಲ್ಲಿ ಈ ಪದ್ಯ ಬರುತ್ತದೆ.

2.1. ಡಾ|| ಡಿ. ಎಲ್. ಎನ್. ಅವರು ಈ ಪದ್ಯವನ್ನು ಕುರಿತು ಪಂಪ ಭಾರತ ದೀಪಿಕೆಯಲ್ಲಿ ಹೀಗೆ ಬರೆದಿದ್ದಾರೆ.

ಧರ್ಮಾತ್ಮಜನಾ ಬಾಳಕೇಳಿ–ಧರ್ಮರಾಜನ ಬಾಲಕ್ರೀಡೆಯು, ತೊಡರ್ದಮರ್ದ–ಚೆನ್ನಾಗಿ ಸೇರಿಕೊಂಡ, ಬಾಳವಣ್ಣದ–ಕತ್ತಿಯ ಬಣ್ಣದ, ಎಂದರೆ ನೀಲಿ ಬಣ್ಣದ, ತುಡುಗೆ–ಉಡುಪು, ಪಳಂಚಲೆವ ಪಂಚಜಡೆ–ಬೆನ್ನಿಗೆ ಅಪ್ಪಳಿಸಿ ಅಲ್ಲಾಡುತಿರುವ ಅಯ್ದು ಜಡೆಗಳು; ನೊಸಲೊಳ್–ಹಣೆಯಲ್ಲಿ, ಒಡಂಬಡುವ–ಒಪ್ಪಿರುವ, ಅರಳೆಲೆ–ಅರಳೆಲೆ ಆಕಾರದ ಪದಕ, ಇವಱಿಂ–ಇವುಗಳಿಂದ, ಚೆಲ್ವಿಡಿದಿರ್ದುದು–ಚೆಲುವಿಕೆಯು ಪೂರ್ಣವಾಗಿತ್ತು. ಬಾಳಬಣ್ಣ : "ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಂ" ಎಂಬ ಪ್ರಯೋಗ (ಪಂಪ. ಭಾ. ೭–೭೧)ವುಂಟು. ಅರಳೆಲೆ ಒಂದು ಮಕ್ಕಳ ಆಭರಣ. "ಪಳಂಚು–ಸಂಘಟ್ಟನೇ."

2.2. ಪರಿಷತ್ತಿನ ಗದ್ಯಾನುವಾದದಲ್ಲಿ ಶ್ರೀ ಎನ್. ಅನಂತರಂಗಾಚಾರ್ ಅವರು ಡಾ|| ಡಿ. ಎಲ್. ಎನ್. ಅವರು ಹೇಳಿರುವುದನ್ನೇ ಸ್ವೀಕರಿಸಿ ಹೊಸಗನ್ನಡದಲ್ಲಿ ಸಾರಾಂಶ ಕೊಟ್ಟಿರುತ್ತಾರೆ.

3.1. ಡಾ|| ಡಿ. ಎಲ್. ಎನ್.ಅವರು ಈ ಪದ್ಯವನ್ನು ಅನ್ವಯ ಮಾಡಿರುವ ಕ್ರಮ ಮತ್ತು ಕೆಲವು ಪದಗಳಿಗೆ ನೀಡಿರುವ ಅರ್ಥ ಸಮರ್ಪಕವಾಗಿಲ್ಲ.

4.1. ಈ ಪದ್ಯದ ಸರಿಯಾದ ಅನ್ವಯ ಕ್ರಮ :

ಆ ಧರ್ಮಾತ್ಮಜನ
1. ಬಾಳಕೇಳಿ
2. ತೊಡರ್ದು ಅವುರ್ದ ಬಾಳವಣ್ಣದ ತುಡುಗೆ
 ಅ) ಪಳಂಚಿ ಅಲೆವ ಪಂಚಜಡೆ
 ಆ) ನೊಸಲೊಳ್ ಒಡಂಬಡುವ ಅರಳೆಲೆ } ಇವಱಿಂ } ಚೆಲ್ವಿಡಿದಿರ್ದುದು

4.2. ಈ ಪದ್ಯದ ಮೂರು ಪದಗಳ ಅರ್ಥ :

1. ಬಾಳವಣ್ಣ 2. ತುಡುಗೆ 3. ಪಂಚಜಡೆ

1. ಬಾಳವಣ್ಣ : (ಅ) ಬಾಳವಣ್ಣ ಎಂಬುದಕ್ಕೆ ಡಾ|| ಡಿ.ಎಲ್.ಎನ್. ಅವರು ಕತ್ತಿಯ ಬಣ್ಣ ಎಂದರೆ ನೀಲಿಯ ಬಣ್ಣ ಎಂದು ಅರ್ಥ ಕೊಟ್ಟಿದ್ದಾರೆ (2.1) ನೋಡಿ. ಅವರು ಇಲ್ಲಿ ಬಾಳ ಎನ್ನುವಲ್ಲಿ ಕುಳ "ಳ" ಕಾರವನ್ನು ಸ್ವೀಕರಿಸಿ ಕತ್ತಿ ಎಂಬ ಅರ್ಥನಿರ್ಣಯಕ್ಕೆ ಬಂದಿದ್ದಾರೆ.

(ಆ) ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಪಂಪಭಾರತಂ ಕೊನೆಯಲ್ಲಿನ "ಕ್ಲಿಷ್ಟಪದಗಳ ನಿಘಂಟು"ವಿನಲ್ಲಿ "ಬಾಳವಣ್ಣ" ಪದಕ್ಕೆ ಅರ್ಥ ಕೊಟ್ಟಿಲ್ಲ; ಈ ಪದ್ಯದ ಸಂಖ್ಯೆಯನ್ನು ಸೂಚಿಸಿ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿದ್ದಾರೆ.

(ಇ) ವಾಸ್ತವವಾಗಿ "ಬಾಳವಣ್ಣ" ಎಂಬ ಪದದಲ್ಲಿರುವುದು ಕ್ಷಳ, ಕುಳವಲ್ಲ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ "ಬಾಳವಣ್ಣ" ಪದವು ಸಂಸ್ಕೃತ ಪದವಾದ "ಬಾಲವರ್ಣ"ದ ತದ್ಭವ ರೂಪ.

ಕವಿ ಇಲ್ಲಿ ಕ್ಷಳ ಬಳಸಿರುವುದಕ್ಕೆ ಎರಡು ಕಾರಣಗಳಿವೆ.

ಒಂದು—ಪಂಪ ಅನೇಕ ಎಡೆಗಳಲ್ಲಿ ಕ್ಷಳ ಬಳಸಿದ್ದಾನೆ. ಇದೇ ಪದ್ಯದ ಕೊನೆಯ ಸಾಲಿನ "ಬಾಳಕೇಳಿ" ಗಮನಿಸಿ.

ಎರಡು – ಆ "ಬಾಳಕೇಳಿ" ಪದಕ್ಕೆ ಅನುಪ್ರಾಸವಾಗಿ "ಬಾಳವಣ್ಣ" ಬಳಸಿದ್ದಾನೆ. ಆದ್ದರಿಂದ ಇಲ್ಲಿ ಬಾಳವಣ್ಣ ಎಂದರೆ ಕತ್ತಿಯ ಬಣ್ಣ, ನೀಲಿಯ ಬಣ್ಣ ಅಲ್ಲ. ಅದು ಬಾಲವರ್ಣ. (ಗೌರವರ್ಣ ಎಂಬ ಪದ ಗಮನಿಸಿ). ಬಾಲವರ್ಣ ಎಂದರೆ ತಿಳಿಯಾದ ಬಣ್ಣ, ಮುದನೀಡುವ ಬಣ್ಣ, light colour ಕಿಟೆಲ್ ಕೋಶದಲ್ಲಿ "[ಬಾಳವಣ್ಣ–ಬಣ್ಣ. tender colour, pleasing colour. ತೊಡರ್ದ ವುರ್ದ ಬಾಳವಣ್ಣದ ತುಡುಗೆ Pb. 2, 4]" ಎಂಬ ವಿವರಣೆ ಬಾಳ bala. 1. Tbh of ವಾಲ (Smd. 342). ಶೀರ್ಷಿಕೆಯ ಅಡಿಯಲ್ಲಿ ಬಂದಿರುವುದು ಗಮನಾರ್ಹ.

2. ತುಡುಗೆ : ಈ ಪದ್ಯದ ಅರ್ಥ ಕೊಡುವಾಗ ಈ ಪದಕ್ಕೆ ಡಾ|| ಡಿ. ಎಲ್. ಎನ್.ಅವರು ಉಡುವು ಎಂದು ಅರ್ಥ ನೀಡಿದ್ದಾರೆ. (2.1 ನೋಡಿ) ಆದರೆ ತುಡುಗೆ ಎಂದರೆ ಇಲ್ಲಿ "ಆಭರಣ" ಎಂಬ ಅರ್ಥವನ್ನು ಗ್ರಹಿಸಬೇಕು. ಇಲ್ಲಿ ಪಂಪ ಧರ್ಮರಾಯ ಧರಿಸಿದ್ದ ಆಭರಣಗಳನ್ನು ಕುರಿತು ಹೇಳುತ್ತಿದ್ದಾನೆ.

3. ಪಂಚಜಡೆ : ಡಾ|| ಡಿ. ಎಲ್. ಎನ್.ಅವರು ಈ ಪದಕ್ಕೆ ಅಯ್ದು ಜಡೆಗಳು ಎಂದು ಅರ್ಥ ಕೊಟ್ಟಿದ್ದಾರೆ. (2.1 ನೋಡಿ).

ಆದರೆ, ಇಲ್ಲಿ ಪಂಚ ಎಂದರೆ ಅಯ್ದೂ ಅಲ್ಲ, ಜಡೆ ಅಂದರೆ ಜಡೆಯೂ ಅಲ್ಲ. ಇಲ್ಲಿ ಪಂಚ ಎಂದರೆ ವಿಸ್ತಾರ, ಅಗಲ ಎಂದರ್ಥ. ಜಡೆ ಎಂಬುದು ಒಂದು ಆಭರಣ (ಅರಳೆಲೆ ಇದ್ದಂತೆ. ಜಡೆಬಿಲ್ಲೆ, ಜಡೆನಾಗರ, ಜಡೆಬಂಗಾರ-ಗಳನ್ನು ಗಮನಿಸಿ.) ಆದ್ದರಿಂದ "ಪಂಚಜಡೆ" ಒಂದು ಆಭರಣ ವಿಶೇಷ.

ಈ ಪದ್ಯದಲ್ಲಿ ಪಂಪ ಧರ್ಮರಾಯನು ಧರಿಸಿದ್ದ ಆಭರಣಗಳನ್ನು (ತುಡುಗೆ) ಹೇಳುತ್ತಿರುವುದನ್ನು ನಾವು ಗಮನಿಸಬೇಕು.

4.3. ಈ ಪದ್ಯದ ಅನ್ವಯಾನುಸಾರ ಅರ್ಥ :

ಆ ಧರ್ಮಾತ್ಮಜನ=ಆ ಧರ್ಮರಾಯನ, ಬಾಳಕೇಳಿ=ಬಾಲ್ಯದ ಆಟ(ಗಳು), ಬಾಲಲೀಲೆ(ಗಳು) ; ಪಳಂಚಿ=ತಾಗಿ, ಅಲೆವ=ತೊಂದರೆಪಡಿಸುವ, ಪಂಚಜಡೆ=ಪಂಚಜಡೆ ಎಂಬ ಒಂದು ಆಭರಣ ; ನೊಸಲೊಳ್=ಹಣೆಯ ಮೇಲೆ, ಒಡಂಬಡುವ=ಒಪ್ಪಿರುವ, ಅರಳೆಲೆ=ಅರಳೆಲೆ ಎಂಬ ಒಂದು ಆಭರಣ; ಇವಱಿಂ=ಇವುಗಳಿಂದ, ತೊಡರ್ದ=ಸುತ್ತಿಕೊಂಡು, ಅಮರ್ದ=ಹೊಂದಿಕೆಯಾಗಿದ್ದ, ಬಾಳವಣ್ಣದ=ಮುದ ನೀಡುವ ತಿಳಿಯಾದ ಬಣ್ಣದ, ತುಡುಗೆ=ಆಭರಣ(ಗಳು) ; ಚೆಲ್ವಿಡಿದಿರ್ದುದು=ಚೆಲುವಿನಿಂದ ಕೂಡಿತ್ತು.

ಆ ಧರ್ಮರಾಯನ ಬಾಲ್ಯದ ಆಟಗಳು ಚೆಲುವಿನಿಂದ ಕೂಡಿತ್ತು.

ತಾಗಿ ತೊಂದರೆ ಪಡಿಸುವ ಪಂಚಜಡೆ, ಹಣೆಯ ಮೇಲೆ ಒಪ್ಪಿರುವ ಅರಳೆಲೆ— ಇವುಗಳಿಂದ, ಸುತ್ತಿಕೊಂಡು ಹೊಂದಿಕೆಯಾಗಿದ್ದ ಮುದ ನೀಡುವ ತಿಳಿ ಬಣ್ಣದ ಆಭರಣಗಳು ಚೆಲುವಿನಿಂದ ಕೂಡಿತ್ತು.

[ಆಭರಣ ಹಾಕಿಕೊಂಡ ಮಕ್ಕಳಾಟದ ಸೊಗಸು ಮನನೀಯ ಎಂಬುದನ್ನು ಗಮನಿಸಬೇಕು.]

—o—

ಕೃತಜ್ಞತೆಗಳು : ಟಿಪ್ಪಣಿ ರಚನೆಗೆ ನೆರವಾದ ಶ್ರೀಯುತರಾದ ಕ. ನಂ. ನಾಗರಾಜು, ಕೆ.ಆರ್. ಗಣೇಶ, ಟಿ. ಶ್ರೀನಿವಾಸಮೂರ್ತಿ, ಎಚ್.ಎಸ್. ಮುರಳೀಧರ-ಅವರಿಗೆ.

# ಓಲೆಗರಿಯಲ್ಲಿ ದೊರೆತ ಕೀರ್ತನೆಗಳು

—ಶ್ರೀಧರ ಎಚ್. ಜಿ.

"ಕೀರ್ತನೆ" ಸಾಹಿತ್ಯದ ನೂತನ ಮಾದರಿಯೊಂದನ್ನು ಕನ್ನಡಿಗರಿಗೆ ನೀಡಿತು. ಇದು ವಚನ ಸಾಹಿತ್ಯದ ಪ್ರಭಾವವನ್ನೂ ಜೀರ್ಣಿಸಿಕೊಂಡು ಅಡಿಯಿಟ್ಟಿತು. ಇಲ್ಲಿಯೂ ಧರ್ಮವೇ ಪ್ರಧಾನ ಅಂಶವಾಗಿದ್ದರೂ ದೇಸಿಯ ಭಾಷೆ ಸಂಗೀತದ ಸೌರಭ ದಲ್ಲಿ ಕರಗಿದ್ದರಿಂದ ಕೀರ್ತನೆಗೆ ಹೊಸತನವೊಂದು ತಾನಾಗಿಯೇ ಪ್ರಾಪ್ತವಾಯಿತು. ವಚನ ಸಾಹಿತ್ಯ ತನ್ನ ಔನ್ನತ್ಯವನ್ನು ತಲುಪಿ ಇಳಿಮುಖವಾಗುತ್ತಿದ್ದ ಸಮಯದಲ್ಲಿ ಕೀರ್ತನೆ ವಸ್ತುವಿನ ದೃಷ್ಟಿಯಿಂದ ಹೊಸಚೈತನ್ಯ ತಂದಿತೆನ್ನುವುದನ್ನು ಗುರುತಿಸಲೇ ಬೇಕಾಗುತ್ತದೆ. ವಚನ ದೇಸಿಯ ಭಾಷಾ ಬಳಕೆಯ ಮಾರ್ಗವನ್ನು ತೆರೆದರೆ, ಕೀರ್ತನೆ ಈ ಮಾರ್ಗದಲ್ಲಿ ಕಲಾತ್ಮಕವಾದ ತೇರನ್ನೆಳೆಯಿತು. ಜನತೆಯ ಮನೆ-ಮನದ ಬಾಗಿಲನ್ನು ತಟ್ಟಿತು. ಮಾತ್ರವಲ್ಲ, ಅಲ್ಲಿ ಎಡೆ ಪಡೆದು ತನ್ನ ಪ್ರಭಾವದ ಮುದ್ರೆಯೊತ್ತಿತು. ಹೀಗಾಗಿ ಅನಂತರದ ಕಾಲದಲ್ಲಿ ಈ ಮಣ್ಣಿನಲ್ಲಿ ಹಲವಾರು ಮಂದಿ ಕೀರ್ತನಕಾರರು ಹುಟ್ಟಿ ಬಂದರು. ಯಾವುದೇ ರಾಜಾಶ್ರಯ ಇಲ್ಲದೆಯೂ ಕೀರ್ತನೆ ಬದುಕಿ ಬೆಳೆಯಿತು.

ವಿಜಯನಗರ ಅವನತಿ ಹೊಂದಿದ ಮೇಲೆ ಮಲೆನಾಡಿನ ಮಡಿಲಲ್ಲಿ ಸ್ವತಂತ್ರ ಅಧಿಕಾರವನ್ನು ಸ್ಥಾಪಿಸಿದ ಕೆಳದಿ ಅರಸರು ಸಾಹಿತ್ಯಾಭಿಮಾನಿಗಳು. ಸ್ವತಃ ಕವಿಗಳು. ಇವರ ಅಧಿಕಾರಾವಧಿಯ ಕೊನೆಯ ಕಾಲದಲ್ಲಿ ಬಂದ ಕವಿ ಕೆಳದಿಯ ವೆಂಕಣ್ಣ. ಈತ ಗಣಸಹಸ್ರನಾಮ, ಪಾರ್ವತೀವಲ್ಲಭ ಶತಕ, ನರಹರಿವಿಜಯ ಎಂಬ ಕೃತಿಗಳನ್ನು ರಚಿಸಿರುವನು. ಅಲ್ಲದೆ ಕೆಳದಿಯ ರಾಮೇಶ್ವರನ ಅಂಕಿತದಲ್ಲಿ ಕೀರ್ತನೆಗಳನ್ನೂ ಬರೆದಿರುವನು. ಈತನಿಂದ ರಚಿತವಾದ ಪಾರ್ವತೀವಲ್ಲಭ ಶತಕದಲ್ಲಿ:

ಧರಣೀ ದೇವಲಲಾಮನಾದ ಬಹುಶಾಸ್ತ್ರ ವ್ರಾತಮಂ ಬಲ್ಲ ಶಂ
ಕರ ಪಾದಾಂಬುಜ ಭಕ್ತಿಯುಕ್ತ ಕೆಳದೀ ಲಿಂಗಪ್ಪ ಸನ್ಮಂತ್ರಿ ಭಾ
ಸ್ಕರನಾತ್ಮೋದ್ಭವನಾದ ವೆಂಕ ವಿಬುಧಂ ಪೇಳ್ದೀ ಮಹಾವೃತ್ತಮಂ
ನೆರೆ ಬಲ್ಲರ್ಮನವೊಲ್ದು ಕೇಳ್ದಿಹರೇ ವಿದ್ವತ್ ಸಭಾ ಮಧ್ಯದೊಳ್ ॥ 2 ॥

ಎಂದಿರುವನು. ಇಲ್ಲಿ ಈತ ಕೆಳದಿಯ ಕವಿ ಲಿಂಗಣ್ಣನ ಮಗನೆಂಬುದು ಸ್ಪಷ್ಟವಾಗಿದೆ.

ಲಿಂಗಣ್ಣನು ಕಿರಿಯ ಬಸವಪ್ಪ ನಾಯಕನ ಆಸ್ಥಾನ ಕವಿಯಾಗಿದ್ದನು. ಈತನನ್ನು "ಕೆಳದಿ ಲಿಂಗಪ್ಪ ಸನ್ಮಂತ್ರಿ" ಎಂದಿರುವುದರಿಂದ ಲಿಂಗಣ್ಣನು ಮಂತ್ರಿಯಾಗಿಯೂ ರಾಜ್ಯದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದಿರಬೇಕು. ರಾಜ್ಯದ

ಉನ್ನತ ಅಧಿಕಾರಿಯೂ ಆಗಿದ್ದರಿಂದಲೇ ಕೆಳದಿನೃಪ ವಿಜಯದಂತಹ ಐತಿಹಾಸಿಕ ಕಾವ್ಯವನ್ನು ಬರೆಯುವುದು ಲಿಂಗಣ್ಣನಿಗೆ ಸಾಧ್ಯವಾಯಿತು. ಆದರೆ ಈ ಅರಸೊತ್ತಿಗೆಯ ಕೊನೆಯ ಕಾಲದಲ್ಲಿ, ಸುಮಾರು 250 ವರ್ಷಗಳಷ್ಟು ದೂರದಲ್ಲಿ ನಿಂತು ಇವರ ಚರಿತ್ರೆಯನ್ನು ಬರೆದನೆಂಬುದನ್ನು ಗಮನದಲ್ಲಿಡಬೇಕು. ಸಾಮ್ರಾಜ್ಯ ಕ್ರಿ. ಶ. 1763ರಲ್ಲಿ ಹೈದರನ ಧಾಳಿಗೆ ತುತ್ತಾಗಿ ಅವನ ವಶವಾದ ಮೇಲೂ ಬದುಕಿದ್ದ ಈತ ಕೆಳದಿಯ ಅವನತಿಯ ಚಿತ್ರವನ್ನು ಕಣ್ಣಾರೆ ಕಂಡವನು. ಹೀಗಾಗಿ ಆರಂಭಕಾಲೀನ ಘಟನೆಯನ್ನು ಬರೆಯುವಾಗ ಲಿಂಗಣ್ಣ ಅದಾಗಲೇ ಪ್ರಚಲಿತಕ್ಕೆ ಬಂದಿದ್ದ ಕಥೆಗಳನ್ನು ಆಶ್ರಯಿಸಿದ್ದರೆ ಆಶ್ಚರ್ಯವಿಲ್ಲ. ಆದರೆ ಕೊನೆಗಾಲದ ಚಿತ್ರಣವನ್ನು ಮಾತ್ರ ವಾಸ್ತವಕ್ಕೆ ಹತ್ತಿರವಾಗಿ ನೀಡಿರಬಹುದೆಂದು ಭಾವಿಸಬಹುದು. ಅರಸರ ಆಶ್ರಯದಲ್ಲಿದ್ದು, ಅವರಲ್ಲಿ ಅಧಿಕಾರಿಯಾಗಿ, ಸ್ವಾಮಿನಿಷ್ಠ ರಾಜಭಕ್ತನಾಗಿ ಕಾವ್ಯ ಬರೆಯಲು ಲಿಂಗಣ್ಣ ತೊಡಗಿದ್ದರಿಂದ ಅದರಲ್ಲಿ ವಸ್ತುನಿಷ್ಠತೆ, ವ್ಯಕ್ತಿತ್ವ ಚಿತ್ರಣವನ್ನು, ಇತಿಹಾಸಕ್ಕೆ ಸಂಬಂಧಿಸಿದ ವಿವರಗಳನ್ನು ಎಚ್ಚರಿಕೆಯಿಂದ ಸ್ವೀಕರಿಸಬೇಕಾಗುತ್ತದೆ. ಏಕೆಂದರೆ "ರಾಜಭಕ್ತಿ" ಇರುವಲ್ಲಿ ವೈಭವೀಕರಣವಿರುವುದು ಸಾಮಾನ್ಯ. ಏನೇ ಇರಲಿ, ವೆಂಕಣ್ಣನು ಲಿಂಗಣ್ಣನ ಅನಂತರದವನು ಎಂಬುದು ಮುಖ್ಯ. ಆದ್ದರಿಂದ ಈತನ ಕಾಲವನ್ನು ಕ್ರಿ. ಶ. 1770 ಎಂದು ಸ್ವೀಕರಿಸಬಹುದು.

ಈಗಾಗಲೇ ಪ್ರಸ್ತಾವಿಸಿದ ಪಾರ್ವತೀವಲ್ಲಭ ಶತಕದಲ್ಲಿ ಕೆಳದಿ ರಾಮೇಶಂ, ರಾಮೇಶನಿತ್ತುಂ ವರದಾ ನದಿ ನಿಕಟ ಭೂಭಾಗೋಲ್ಲಸತ್ಕೆಳದೀ ರಾಮೇಶಂ—ಎಂದು ಉಲ್ಲೇಖಿಸಿರುವನು. ಕೀರ್ತನೆಗಳಲ್ಲಿಯೂ ಕೆಳದಿಪುರೇಶ ರಾಮೇಶ, ಕೆಳದಿ ರಾಮೇಶ, ವರದಾ ನದಿಯ ತೀರವಾಸ ಶ್ರೀ ಕೆಳದಿಯ ಪುರವರಾಧೀಶ ರಾಮೇಶ್ವರ ಎಂಬಿತ್ಯಾದಿ ಮಾತುಗಳಿದ್ದು, ಈತ ಕೀರ್ತನೆಯನ್ನು ಬರೆದಿರುವುದು ಸ್ಪಷ್ಟವಿದೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಮೊದಲ ಕೀರ್ತನೆ "ವನಿತೆ ನೀನು ಕರೆದು ತಾರೆ ರಾಮೇಶನು ಮುನಿಸಿದನೆ ನೀರೆ" ಎಂಬ ಕವಿತೆಯನ್ನು ಬರೆದವನು ವೆಂಕಣ್ಣನೆಂಬಲ್ಲಿ ಸಂಶಯಕ್ಕೆ ಆಸ್ಪದವಿಲ್ಲ. ಕೆಳದಿಪುರ, ವರದಾನದಿಯ ತೀರವಾಸ ಶ್ರೀರಾಮೇಶ ಎಂದಿರುವುದು ಈ ಬಗ್ಗೆ ಸೂಚನೆಯಾಗಿದೆ.

ಇಲ್ಲಿನ ಎರಡು ಮತ್ತು ಮೂರನೆಯ ಕೀರ್ತನೆಗಳು ವೆಂಕಣ್ಣನದಿರಬಹುದು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಆತನ ಕೀರ್ತನೆಯೊಂದರಲ್ಲಿ ಬರುವ

ಅಣಿ ಮುತ್ತಿನ ಮೂಗುತಿ ಬಿದೆಳೆಯ ಕ
ಟ್ಟಾಣಿ ಕಾಶಿಯ ತಾಳಿ ಮಾಣಿಕವುಯ
"ತೊಳಪ ಮುತ್ತಿನ ಮಾಲೆ"

ಎಂಬ ಮಾತಿಗೆ ಹೊಂದಿಕೆಯಾಗುವ ಪದಗಳು ಎರಡನೆಯ ಕೀರ್ತನೆಯ ಕೊನೆಯ

ಭಾಗದಲ್ಲಿ ಬಂದಿವೆ. ಆದರೆ ಜಡೆಯ ಲಕ್ಷ್ಮೀನಾರಾಯಣನ ಅಂಕಿತವಿರುವುದು ಗಮನಾರ್ಹ.

"ಶ್ರೀ ಹರಿಹರಲಿಂಗ"ನ ಅಂಕಿತದಲ್ಲಿ ಮೂರನೆಯ ಕೀರ್ತನೆಯುದೆ. ಇದು ವೆಂಕಣ್ಣನದೇ ಆದ :

ನಿನ್ನ ನಾನೇನಂದೆನೋ । ರಾಮೇಶ್ವರ
ನಿನ್ನ ನಾನೇನಂದೆನೋ । ಸಕಲ ಲೋಕ
ವನ್ನು ಪೊರೆವ ಪಾರ್ವತೀಶನೆಂದೆನಲ್ಲದೆ

ಎಂಬ ಕೀರ್ತನೆಗೆ ಹತ್ತಿರವಾಗಿದೆ. ಅಲ್ಲದೆ :

ಬಾಲೆಗೊಲಿದು ಹಾಲುಕುಡಿದವನೆಂದೆನೆ
ಸೂಳೆಯ ಮನೆಗೆ ನಾ ಹೋಗೆಂದೆನೆ

ಎಂಬ ಕೀರ್ತನೆಯನ್ನೂ ಶೈಲಿಯ ದೃಷ್ಟಿಯಿಂದ ಇದು ಹೋಲುವಂತಿದೆ. "ಎಂದೆ ನಲ್ಲದೆ ಎಂದನೆ" ಎಂಬ ಪದಗಳು ಇಲ್ಲಿ ಆಗಾಗ ಬಂದು ವೆಂಕಣ್ಣನನ್ನೇ ನೆನಪಿಸುತ್ತದೆ. ಕನಕದಾಸರ "ನಿನ್ನ ನಾನೇನಂದೆನೋ ವೆಂಕಟರಾಯ" ಎಂಬ ಕೀರ್ತನೆಯ ಪ್ರಭಾವ ಇದರ ಮೇಲೆ ಆದಂತಿದೆ. ಹೀಗಾಗಿ ಈ ಎರಡು ಕೀರ್ತನೆಗಳನ್ನು ವೆಂಕಣ್ಣನೇ ಬರೆ ದಿರಬಹುದು ಅಥವಾ ಅನಂತರ ಬಂದವರು ವೆಂಕಣ್ಣನ ಜಾಡಿನಲ್ಲಿ ಬರೆದಿರಲೂ ಸಾಕು.

ನಾಲ್ಕರಿಂದ ಮುಂದಿನ ಕೀರ್ತನೆಯನ್ನು ಯಾರು ಬರೆದರೆಂಬುದು ಖಚಿತವಾಗಿ ಹೇಳುವುದು ಕಠಿನ. "ಸದರವಲ್ಲವೊ ನಿಜ ಭಕ್ತಿ" ಎಂಬ ಕೀರ್ತನೆಯಲ್ಲಿ ಗಟ್ಟಿಯಾದ ವಸ್ತುವಿದೆ. ಇಬ್ಬರೊಂದಾಗುವ ತತ್ತ್ವವಿದೆ. ನುಗ್ಗಿಹಳ್ಳಿ ನರಸಿಂಹ ಸ್ವಾಮಿಯ ಸ್ಮರಣೆ ನಾಲ್ಕನೆಯ ಕೀರ್ತನೆಯಲ್ಲಿದೆ. ಇದು ಚೆನ್ನರಾಯಪಟ್ಟಣ ತಾಲೂಕಿನಲ್ಲಿ ಬರುವ ನುಗ್ಗಿಹಳ್ಳಿಯೇ ಆಗಿರಬಹುದು. ಕೆಳದಿಯ ಅವನತಿಯಿಂದ ರಾಜಾಶ್ರಯ ತಪ್ಪಿದ್ದರಿಂದ ವೆಂಕಣ್ಣ ಕೆಲವು ಕಾಲ ಊರೂರು ತಿರುಗಿದಂತಿದೆ. ಈ ರೀತಿಯ ತಿರುಗಾಟದ ವೇಳೆಯಲ್ಲಿ ಇವುಗಳನ್ನು ವೆಂಕಣ್ಣನೇ ಅಲ್ಲಲ್ಲಿಯ ದೇವರನ್ನು ಕುರಿತು ಬರೆದಿರಬಹುದು.

ವೆಂಕಣ್ಣನ ಕೀರ್ತನೆಗಳಲ್ಲಿ ಭಕ್ತಿಯಿದೆ. ಸರಳವಾದ ಲಲಿತ ಶೈಲಿ ಈತನ ಕೀರ್ತನೆಗಳದು. ಸಮಾಜ ವಿಮರ್ಶೆ, ಚಿಕಿತ್ಸಕ ನೋಟ ಇಲ್ಲಿಲ್ಲ. ಸಾತ್ವಿಕತೆ ಎಲ್ಲೆಡೆ ಸ್ಪಷ್ಟವಾಗಿ ವ್ಯಕ್ತವಾಗಿದೆ. ಒಟ್ಟಿನಲ್ಲಿ ಹೊಸತನವನ್ನು ಕಳೆದುಕೊಂಡು ಅನುಕರಣೆಯ ಜಾಡಿನಲ್ಲಿ ಮುಂದುವರಿಯುತ್ತಿರುವ ಸೂಚನೆ ವೆಂಕಣ್ಣನ ಕೀರ್ತನೆ ಯಲ್ಲಿದೆ. ಉದಾಹರಣೆಗಳು : ಕೆಳದಿ ವೆಂಕಣ್ಣ ಕವಿಯ ಕೀರ್ತನೆಗಳು (ಸಂ. ಕೆಳದಿ ಗುಂಡಾಜೋಯಿಸ್, ಕೀರ್ತನೆ ಸಂ. 40 ಬೆಂಗಳೂರು ವಿಶ್ವವಿದ್ಯಾನಿಲಯ.)

### ಕೀರ್ತನೆ ೧

ವನಿತೆ ನೀನು ಕರೆದು ತಾರೆ ರಾಮೇಶನು
ಮುನಿಸಿದನೆ ನೀರೆ ॥

ಹಂಬಲಿಸುತಿದೆ ಮನ ಹೇಗೆ ನಾ ತಾಳಲೆ
ರಂಬಿಸಿ ಪೊರೆದವನ
ಕುಂಭಕುಚದ ಮೇಲೆ ಕೂರುಗುರಿನ ಬರೆ
ಯೆಂಬ ಶಶಿಯು ನೇಮಗಾರನ ॥

ಎನ್ನ ಮೇಲಿನಿತು ತಪ್ಪನಾದರೆ ತೋರಿ
ಬಿನ್ನವಿಸುವುದು ಆ
ಕನ್ನೆಯೋರ್ವಳ ಕೂಡುತ
ಮುನ್ನಿನ ಲೇಸನು ತೋರದೆ ಎನ್ನ ಮರೆತ ॥

ಧರೆಯೊಳತ್ಯಧಿಕವೆಂದು ಕೆಳದಿ ಪುರ
ದರಸುತನದಲೆ ನಿಂದು
ವರದ ನದಿಯು ತೀರವಾಸ ಶ್ರೀ ರಾಮೇಶ
ನೆರದುಳುವಿದ ಲೇಸ ನಟನೆಯಿಂದ ಮಹೇಶ ॥

### ಕೀರ್ತನೆ ೨

ಯಾದವರಾಯು ಮಾರಬೇಕು ಮೊಸರಾ
ಬಾರೆ ಗೊಲ್ಲತಿ ಮೊಸರು ಮೊಸರೆನುತಲಿ ಮೇಲು
ಗೇರಿಗೆ ಬರುತಿರೆ ಕಂಡು ನೀಲವರ್ಣದ ಗೋವಳ
ಸೆರಗು ಪಿಡಿದು ಲತಾಂಗಿಯು ತಡೆದಾ ॥

ಮೊಸರ ಮಾರಬಂದವಳಲಿ ಸೆಣಸದಿರು
ಶಶಿನೀರೆ ಎಲ್ಲೆಂದಡತನವೆ ಬೇಡ ಈ
ವಸುಧೆಯೊಳಗಸಿಲ್ಲವೆ ನೀ ದೂರ ಸಾರಲೊ
ಪಶುಗಾಹಿ ಬಿಡು ಎನ್ನ ॥

ಲಂಡತನವು ನಮ್ಮೊಡನೆ ಕೊಳ್ಳವು ಹೋಗು
ಕಂಡ ಕಂಡವರಿಗಂಜುವುದ ಬಿಟ್ಟು ನನ್ನ
ದಂಡೆಯು ಪಿಡಿಯದಿರೋ ನಾ ಸಸಾರಲ್ಲೊ
ಗಂಡನುಳ್ಳವಳು ಕಾಣೊ ॥

ಉಟ್ಟ ಸೀರೆಯು ಪಿಡಿದೆಳೆಯುದಿರೆಲವೊ
ಪಟ್ಟಣಕೊಡೆಯರಿಲ್ಲವೆ ಹೇಳಾ
ಪಟ್ಟಗಟ್ಟಿತೆ ನಿನಗೆ ನಾ ಹೇಳುವೆ
ಕಟ್ಟೆಯು ತಳವಾರಗೆ ॥

ಶಂಕ ಶೂರರುಹನ ಪಂಕಜಗಜ ನಿಮ್ಮ
ಡೊಂಕದುರುಬಿಗೆ ಅಂಜುವಳಲ್ಲ
ಬೋಂಕನೆ ಒಳಗಾದರೆ ಕಡೆಗೆ ನಮ್ಮ
ಮಂಕು ಮಾಡಿತು ಗೋವಳಾ ॥

ಇತ್ತಿತ್ತ ಬಾರೆಲೆ ಸಖಿ
ಮುತ್ತಿನ ಹಾರವನೀವೆ ಎನ್ನ
ಒತ್ತಾರೆ ಕುಳಿತರೆ ಪದಕವನೀವೆ ಎನ್ನ
ಅರ್ತಿಯು ಸಲಿಸಿದರೆ ನಾ ನಿನಗೆ
ಮುತ್ತಿನೋಲೆಯನೀವೆನೆ ॥

ಅಣಿ ಮುತ್ತಿನ ಕಂಠಮಾಲೆಯು ನಿನಗೀವೆ
ಜಾಣಿ ಗೊಲ್ಲತಿ ಬಾರೆ ಎಲೆ ಬಾಲೆ ನಿನ್ನ
ಜಾಣ ಜಡೆಲಕ್ಷ್ಮೀನಾರಾಯಣನ ನೆನೆವುತ ॥

## ಕೀರ್ತನೆ ೩

ನಾನೇನೆಂದನೆ ಭಾವಕೆ ಒಳ್ಳೆ
ಆನಂದಮಯ ಹರಿಹರ ಮುನಿದಿತ್ತ ಬಾರ ॥

ಶ್ರೀ ರಮಣೀಕುಚ ಕುಂಕುಮಾಂಕಿತ ವಕ್ಷ
ವಾರಿಧಿಶಯನ ಶ್ರೀ ವಾಸವಾರ್ಚಿತ
ನಾರದನುತ ಪಂಕಜ ದೈತ್ಯ ಸಂ
ಹಾರ ಶ್ರೀ ಹರಿಹರನೆಂದೆನಲ್ಲದೆ
ಮಾರಮರ್ಧನನೆಂದೆನೆ ಮೆರೆವ ಸರ್ಪ
ಹಾರ ಕುಂಡಲನೆಂದೆನೆ ಮುಪ್ಪುರವನ್ನು
ಮೀರಿ ಗೆದ್ದವನೆಂದೆನೆ ಶೋಭಿಸುವ ವೈ
ಯ್ಯಾರ ವಿಭೂಷಣ ಶಂಕರನೆಂದೆನಲ್ಲದೆ ॥

ಮಡದಿಯೊರ್ವಳ ಮುಡಿಕಳ್ಳನೆಂದೆನಲ್ಲದೆ ಮಿಗೆ
ಜಡೆದಲೆಯುವನೆಂದೆನೆ ಪುಲಿದೊಗಲ
ದೃಢದಿ ಹೊದ್ದಿಹನೆಂದೆನೆ ತ್ರೈಲೋಕ್ಯ
ದೊಡೆಯ ಮುರಾರಿ ಮಹದೇವನೆಂದೆನಲ್ಲದೆ ॥

ಧರೆಯನಳೆದು ಕ್ಷತ್ರಿಯರ ಕೊಂದು ಶರಧಿಯ
ನಿಳದೆ ಕಟ್ಟಿದ ಕೃಷ್ಣ ಬಹುರೂಪ
ವರಕವಿಗುರುವ ಕರದಿ ಪಿಡಿದು ರಕ್ಷಿಪ
ಬಿರುದಿನ ರಾಯ ರಾವುತನೆಂದೆನಲ್ಲದೆ
ಗಿರಿಜಾರಮಣನೆಂದೆನೆ ಗುಹಾರಣ್ಯ ವಾಸ
ಎರಡು ರೂಪದಲಿರುವ ಮೂರುತಿಯೆಂದೆ ನಾ ನಂಬಿದ–
ವರ ಪೊರೆವ ಶ್ರೀ ಹರಿಹರಲಿಂಗನೆಂದೆನಲ್ಲದೆ ॥

## ಕೀರ್ತನೆ ೪.

ಭೇರಿ ಮೊರೆ ಶಂಖ ಕಾಳೆಗಳು
ನಾರಿ ದುಂದುಭಿ ಮೊಳಗಲು ನರಸಿಂಹನು
ಸ್ವಾರಿಯ ಹೊರಟು ಅಸುರರೊಳು
ಹೋರಿ ತಾ ಗೆಲಿದನೆಂದು ಎಂದೀಗ ॥

ತರಳ ಪ್ರಹ್ಲಾದ ಅಂಗಜ ಧ್ರುವನು
ಸುರಪತಿಯು ಕರಿತುರಗ ಕಾಲಾಳಿನ ಸಹಿತ
ಅರವಿಂದ ಸಖಗೆ ಮರೆಯಾಗಿ ಗೋವರ್ಧನ
ಗಿರಿಯೊಂದು ದತ್ತವಾಗಿರುತ ದೇವ
ಗರುಡ ಗಂಧರ್ವ ವಿದ್ಯಾಧರರು ಪಾಟಕರು
ಬಿರಿದು ಕೊಂಡಾಡೆ ಬರುತ
ಶರಣು ಹೊಕ್ಕವರಿಗಭಯುವನಿತ್ತು ರಕ್ಷಿಸುತ
ನರಸಿಂಹಸ್ವಾಮಿ ಬಂದನೆಂದೀಗ ॥

ಕೀರ್ತನೆ ೭.

ಸದರವಲ್ಲವೊ ನಿಜಭಕ್ತಿ । ಸತ್ಯ ।
ಸದಮಲ ಗುರು ಕರುಣಾನಂದ ಮೂರ್ತಿ
ಸದರವಲ್ಲವೊ ನಿಜಭಕ್ತಿ ॥

ಅಡಿಯಲಂಬರ ಮೂಡದನಕಾ । ಅನಿಲ ।
ಕುಡಿಯೆದ್ದು ಮೇಲಣ ಕೋಳನುಕ್ಕದನಕಾ
ಒಡನಿಬ್ಬರೊಂದಾಗದನಕಾ । ತನ್ನೊ ।
ಳಡಗಿರ್ದ ಮಡದಿಯು ನುಡಿಗೇಳದನಕಾ ॥

ನಾಡ ಹಲವು ಕಟ್ಟದನಕಾ । ಬ್ರಹ್ಮ ।
ಗೂಡಿನೊಳಗೆ ಪೊಕ್ಕು ನೆಲೆ ನೋಡದನಕಾ
ಕಾಡುವ ಕಟಿ ಸಾಯದನಕಾ । ಸು ।
ಟ್ಟೊಡಿಲ್ಲ ರಸರಾಯ ತೊಟ್ಟಿಡದನಕಾ ॥

ಆಡಿ ಕುಂಭವ ಕಾಣದನಕಾ । ಅದ
ನಾಡಿಸಿ ನೋಡಿ ಸವಿದುಣ್ಣದನಕಾ
ರೂಢಿಗುಚಿಯು ( ? ) ವಾಗದನಕಾ । ನಮ್ಮ ।
ಶ್ರೀ ಗುರುಶಾಂತನವಡಗೂಡದನಕಾ ॥

ಕೀರ್ತನೆ ೮.

ಮೆಟ್ಟಿದ ಹಾವಿಗೆಯೆಲ್ಲ ಚಿನ್ನ । ಜಗ ।
ದೊಟ್ಟನ ಡಾಬಿನ ಪೊನ್ನ । ರನ್ನ ।
ಹಸ್ತದ ಕಿನ್ನುರಿ ಕೈಯ್ಯ ಚಿನ್ನ । ನಮ್ಮ
ಕೃಷ್ಣಜೋಗಿ ಜಗಕೆ ಪ್ರಸನ್ನ ॥

ತುಂಬಿಗುರುಳ ಜುಟ್ಟು ಜಡೆಯು । ಚೆಲ್ವ ।
ಬಿಂಬಾಧರನ ಮುದ್ದು ನಗೆಯು । ಶೀ ।
ತಾಂಬರ ಮಾಣಿಕ ಕಾಂತಿ ಜರಿಯು । ನಮ್ಮ ।
ಸಂಗಡಿಸಿ ಬಂದ ಜಗದೊಡೆಯು ॥

ಗಂಧ ಗೋಧುಳ ವೈಯ್ಯ ಬರಿತ
ಬಂಧುರ ವನಮಾಲೆ ವಕ್ಷಸ್ಥಳ ರಂಜಿತ ।
ಅಂದದ ವೇಷಗಳಿಂದ ಬರುತ । ಕೃಷ್ಣ ।
ಸಂಗಡಿಗರೆಲ್ಲ ಕೂಡಿ ನಗುತ ॥

ಪಂಚ ರತ್ನದ ಪಾತ್ರೆಗಳ ನೀ ತಾ । ಕೈಯ್ಯ ।
ಶಂಖ ಚಕ್ರ ಗದೆಯಾವದೂತ ।
ಕಂತುಪಿತಭಕ್ತರ ಸುಪ್ರೀತ । ನಮ್ಮ ।
ಚಿಂತೆಯುಕ್ಕ ಜೋಗಿ ಜಗನ್ನಾಥ ॥

ಅಸುರರ ಮಾಲೆ ಕೊರಳಲ್ಲಿ । ಹೊಸ ।
ಕುಶಲದ ಕಿನ್ನುರಿ ಕೈಯ್ಯಲ್ಲಿ ।
ವಸುಧೆ ಕಾಮಾಕ್ಷಿ ಕೈಯ್ಯಲ್ಲಿ । ಹೊಸ ।
ಕುಶಲದಿ ಆಡಿದ ನಮ್ಮಲ್ಲಿ ॥

ಹಾಲು ಮೊಸರು ಭಿಕ್ಷವಿಲ್ಲದೊಲ್ಲ । ನಮ್ಮ ।
ನೀಲವರ್ಣ ತ್ರಿಭುವನದೊಳಿಲ್ಲ ।
ನೀಲ ಲೋಚನೆಯುರ ಮನವ । ನೋಡು ।
ಸೋಲಿಸ ಬಂದ ವಿಠಲನ ತಂಗಿ ಕೇಳೆ ॥

ನಮ್ಮನೆಗೆ ಬಂದ ಪಾಂಡುರಂಗ
ಜೋಗಿ ಭಿಕ್ಷವ ನೀಡೆಂದ ।
ತಾಯಿ ಕೇಳೆ ನಮ್ಮನೆಗೆ ಬಂದ । ಪಾಂಡು ।
ರಂಗ ಜೋಗಿ ಭಿಕ್ಷವ ನೀಡೆಂದ ।
ಅಕ್ಕ ಕೇಳೆ ನಮ್ಮನೆಗೆ ಬಂದ ಪಾಂಡು
ರಂಗ ಜೋಗಿ ಭಿಕ್ಷವ ನೀಡೆಂದ ॥

— ೦ —

ಯಾರಾದರೂ ಇರಬಹುದೇ ? ಜೈನರು ಹೀನಾಯವಾಗಿ ಬೈಯುತ್ತಿದ್ದರೆಂಬುದಕ್ಕೆ ಬ್ರಹ್ಮಶಿವನ "ಸಮಯಪರೀಕ್ಷೆ"ಯನ್ನು ಗಮನಿಸಬಹುದು. ಮತ್ತೊಂದು ಸಂಗತಿ ಯೆಂದರೆ—ಕುಮಾರವ್ಯಾಸನ ಪೂರ್ವದಲ್ಲಿಯೇ ಇದ್ದ ಹರಿಹರ-ರಾಘವಾಂಕರ ಪ್ರಸಂಗ. ಹರಿಶ್ಚಂದ್ರ ಕಾವ್ಯದ ವಸ್ತು ವೈದಿಕಮೂಲವಾದುದು. ರಾಘವಾಂಕನು "ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು" ಎಂಬುದಾಗಿ ಹರಸರ್ವೋತ್ತಮತೆ ಯನ್ನು ಪ್ರತಿಪಾದಿಸಿದರೂ ಹರಿಹರನು ಅದನ್ನೊಪ್ಪದೆ ಮನುಜನ ಮೇಲೆ ಬರೆದಿದ್ದೆಂದು ಜಬರಿಸಿದ. ಮತ್ತು ಮುಂದೆ ಅವರಿಬ್ಬರೂ ಹರಸರ್ವೋತ್ತಮತೆ ಯನ್ನು ವಿಶೇಷವಾಗಿ ಪ್ರತಿಪಾದಿಸಲು ಶಿವಭಕ್ತರ ಕಥಾವಸ್ತುಗಳನ್ನೇ ಆರಿಸಿ ಕೊಂಡರು. ಈ ಅಂಶಗಳನ್ನು ಗಮನಿಸಿ ಅದಕ್ಕೆ ಪ್ರತಿಯಾಗಿ ತಾನು ಕೃಷ್ಣಭಕ್ತಿ ಅಥವಾ ಹರಿಸರ್ವೋತ್ತಮತೆಯನ್ನು ಹೇಳಲು ಕುಮಾರವ್ಯಾಸನು ಹೀಗೆ ಮಾಡಿರ ಬಹುದೇ ? ಹಾಗೆ ನೋಡಿದರೆ ಜೈನರು ಭಾರತದ ವಸ್ತುವನ್ನು ತಮ್ಮ ಕಾವ್ಯಕ್ಕೆ ತೆಗೆದುಕೊಂಡು ಸಮರ್ಥವಾಗಿಯೇ ನಿರ್ವಹಿಸಿದ್ದರು. ಇವುಗಳನ್ನು ಗಮನಿಸಿದಾಗ ಕುಮಾರವ್ಯಾಸನ ಮೇಲಿನ ಪದ್ಯದ ಅಭಿಪ್ರಾಯವೇನು ?

ಮೊದಲೇ ಹೇಳಿದಂತೆ ಕನ್ನಡದಲ್ಲಿ "ರಾಮಾಯಣದ ಕವಿಗಳ ಭಾರದಲಿ "ತಿಣುಕು"ವಂಥ ಪರಿಸ್ಥಿತಿ ಏನೂ ಇರಲಿಲ್ಲ. ಆದರೂ ಕುಮಾರವ್ಯಾಸನನ್ನು ಮಹಾಭಾರತ ಹೆಚ್ಚು ಆಕರ್ಷಿಸಿತು. ಪಂಪ ರನ್ನರಾದಮೇಲೆ ಮಹಾಭಾರತವನ್ನು ಕುರಿತ ಕಾವ್ಯಗ್ರಂಥಗಳು ಇಲ್ಲವೇ ಇಲ್ಲ ಎನ್ನಬಹುದು. ಪಂಪ ರನ್ನರಿಂದ ಕುಮಾರ ವ್ಯಾಸನವರೆಗೆ ಸುಮಾರು 400 ವರ್ಷಗಳ ಅಂತರವಿದೆ. ಭಾರತವನ್ನು ಕುರಿತು ಕವಿ ಪಂಡಿತರಿಗಾಗಲೀ ಜನಸಾಮಾನ್ಯರಿಗಾಗಲೀ ಆಕರ್ಷಣೆ ಇರಲಿಲ್ಲವೆ? ಗೌರವ ವಿರಲಿಲ್ಲವೆ? ಅಥವಾ ತಿರಸ್ಕಾರವೇ ಇತ್ತೆ ? ಏಕೆಂದರೆ ಭಾರತವನ್ನು ಹಳಿಯುವ ವರನ್ನು ಕುಮಾರವ್ಯಾಸನು ಕಟುವಾಗಿ ಚೋರರಿಗೆ, ಕ್ಷಯರೋಗಿಗೆ, ಹೆಳವನಿಗೆ, ಕ್ರೂರಕರ್ಮಿಗೆ ಹೋಲಿಸಿದ್ದಾನೆ. ಹಾಗಾದರೆ ಕುಮಾರವ್ಯಾಸನನ್ನು ತೀವ್ರವಾಗಿ ಗಾಸಿಗೊಳಿಸಿರಬಹುದಾದ ವಿಚಾರವೇನಾಗಿರಬಹುದು? ಯಾರಾದರೂ ಮಹಾ ಭಾರತವನ್ನು ಕಟುವಾಗಿ ಟೀಕಿಸಿರಬಹುದೆ? ಅವನು ಇಷ್ಟು ತೀಕ್ಷ್ಣವಾಗಿ ಪ್ರತಿ ಕ್ರಿಯೆ ತೋರಲು ಕಾರಣವೇನಿರಬಹುದು ? ಫಲಶ್ರುತಿಯಲ್ಲಿ ಕೇವಲ ಒಂದು ಅಕ್ಷರ ಕೇಳಿದರೆ ಅನೇಕ ಫಲ ಸಿಗುತ್ತದೆ ಎನ್ನುವ ಕವಿ ಹಳಿದರೆ ರೌರವ ಎಂದು ಹೆದರಿಸು ತ್ತಾನೆ! ಕುಮಾರವ್ಯಾಸನಿಗೇನೋ ಭಾರತ "ಕೃಷ್ಣಕಥೆ"ಯಾಗಿರಬಹುದು. ಆದರೆ ಜನರಿಗೆ ?

ಕುಮಾರವ್ಯಾಸನು ಜನಸಾಮಾನ್ಯರ ಅಭಿರುಚಿಯನ್ನು—ಭಾರತದ ಕಡೆಗೆ ಎನ್ನುವುದಕ್ಕಿಂತ ಹೆಚ್ಚಾಗಿ "ಕೃಷ್ಣಪಾರಮ್ಯದ" ಕಡೆಗೆ ತಿರುಗಿಸಬೇಕಾಗಿತ್ತೆನ್ನಿಸು

ತ್ತದೆ. ಅವನಿಗಂತೂ ಭಾರತದ ಕಥೆ "ಕೃಷ್ಣಕಥೆ"ಯೆಂದೇ ಖಚಿತವಾಗಿತ್ತು. ಅದನ್ನು ಅವನು ಓದುಗರ ಮೇಲೆಯೂ ಬಿಂಬಿಸಬೇಕಾಗಿತ್ತು. ಆದಕ್ಕಾಗಿ ಮಹಾ ಭಾರತವನ್ನು ಓದಿದರೆ ಪಾಪಕ್ಷಯವಾಗುತ್ತದೆ, ಪುಣ್ಯ ಸಿಗುತ್ತದೆ ಎಂಬುದನ್ನು ಫಲ ಶ್ರುತಿಯಲ್ಲಿ ಹೇಳುತ್ತಾನೆ. ಅವನಿಗೆ ಭಾರತಕಥೆ "ಕೃಷ್ಣಕಥೆ" ಒಂದೇ ಅಲ್ಲ "ಪಂಚಮಶ್ರುತಿ" ಕೂಡಾ.

ಹಿಂದೆ ಪಂಪರನ್ನರು ಭಾರತದ ಪಾತ್ರಗಳೊಂದಿಗೆ ಮನುಜರನ್ನು ಸಮೀಕರಿಸಿ ಲೌಕಿಕ ಕಾವ್ಯವನ್ನಾಗಿ ಮಾಡಿಬಿಟ್ಟಿದ್ದರು. ಆದ್ದರಿಂದ ಕುಮಾರವ್ಯಾಸನಿಗೆ ಭಾರತ ಕಥೆಯನ್ನು ತೆಗೆದುಕೊಂಡು ಕಾವ್ಯ ರಚಿಸುವುದಷ್ಟೇ ಅಲ್ಲದೆ, ಓದುಗರನ್ನು ಭಾಗವತ ಪ್ರಣೀತ ಶ್ರೀಕೃಷ್ಣನ ಕಡೆಗೆ ತಿರುಗಿಸಿಕೊಳ್ಳಬೇಕಾದ ಜವಾಬ್ದಾರಿಕೆಯಿತ್ತು. ಅವನಿಗೆ ತನ್ನ ಪ್ರತಿಭೆಯ ಮೇಲೆ ವಿಶೇಷವಾದ ಭರವಸೆಯಿತ್ತು ಎಂಬುದನ್ನು "ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ...." ಎಂಬ ಪದ್ಯದಲ್ಲಿ ಕಾಣಬಹುದು. ತನ್ನ ಕಾವ್ಯಕ್ಕೆ ಕೃಷ್ಣಭಕ್ತಿಯನ್ನೇ ಮೂಲವಾಗಿಟ್ಟುಕೊಂಡು ಬರೆದು ಜನಸಾಮಾನ್ಯ ರಿಗೆ ತಲುಪುವ ಗುರಿಯನ್ನು ಇಟ್ಟುಕೊಂಡನು. ಭಕ್ತಿಯ ಜೊತೆಗೆ ಪ್ರತಿಭೆಯೂ ಇದ್ದುದರಿಂದ ಅದನ್ನು ಸಾಧಿಸಿದನು. ತಾನು ರಚಿಸಿದುದಲ್ಲದೆ, ಮುಂದೆ ಕನ್ನಡದಲ್ಲಿ ಒಂದರ ಮೇಲೊಂದು ಭಾರತ ಕಾವ್ಯ ರಚನೆಗೆ ಬುನಾದಿ ಹಾಕಿದನು.

— o —

# ಗ್ರಂಥ ವಿಮರ್ಶೆ

**ಕನ್ನಡದ ಪ್ರಾಚೀನ ಸಾಹಿತ್ಯ ಲಕ್ಷಣಗಳು—ಮರುನೋಟ***: ಇದೊಂದು ಸಂಶೋಧನಾತ್ಮಕ ಕೃತಿ. ಲಾಕ್ಷಣಿಕ ವಿದ್ವಾಂಸರ ಹಾಗೂ ಸಂಶೋಧಕರ ವಿಶೇಷ ಗಮನಕ್ಕೆ ಪಾತ್ರವಾದುದು. ಇದರಲ್ಲಿ ಪ್ರಾಸ್ತಾವಿಕದ ಅನಂತರ ಬರುವ ಭಾಗ-ಒಂದು : ಮಾರ್ಗಕಾವ್ಯವನ್ನು ಕುರಿತಿದೆ. ಈ ಭಾಗದಲ್ಲಿ "ಸಮಸಂಸ್ಕೃತ ಕಾವ್ಯದ ಹೃದಯಂ—ಎಂದರೇನು" ಎಂಬುದು ಮೊದಲ ವಿವರಣೆ. ಆ ಮೇಲೆ ಗದ್ಯಗಥೆ, ಸರ್ಗಬಂಧಕೃತಿ, ಇಡುಕುಂಗಬ್ಬ ಮುಂತಾದವುಗಳ ವಿಚಾರ ಚರ್ಚೆ ಬಂದಿದೆ. "ಭಾಗ-ಎರಡು : "ದೇಸಿಗಬ್ಬಗಳು" ಎಂಬ ಭಾಗದಲ್ಲಿ ಓವನಿಗೆ, ಒನಕೆವಾಡು, ಬೆದಂಡೆ, ಮೆಲ್ವಾಡು, ಪಗರಣ, ಬಾಜನೆಗಬ್ಬ, ಚತ್ತಾಣಗಳ ಲಾಕ್ಷಣಿಕ ಅವಲೋಕನ ಹಾಗೂ ಮಥಿತಾಭಿಪ್ರಾಯಗಳು ವಿಶೇಷ ಕುತೂಹಲಕರವಾಗಿವೆ. ಈ ಕೃತಿಯನ್ನು ಅಭ್ಯಾಸ ಮಾಡಿದುದರ ಪ್ರತಿಕ್ರಿಯೆಯಿದು—

ದೋಸಮಿನಿತೆಂದು ಬಗೆದು
ದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ
ವಾಸುಗಿಯುಮಱಿಯಲಾಱದೆ
ಬೇಸಱುಗುಂ ದೇಸಿ ಬೇಱೆವೇಱಪ್ಪುದಱಿಂ

—(ಕವಿರಾಜಮಾರ್ಗ ೧-೪೬)

ಈ ಪದ್ಯದಲ್ಲಿ ಬಂದಿರುವ ದೇಸಿಯ ಬಗ್ಗೆ ಯಾವ ಅರ್ಥಸಂದೇಹವೂ ಉಳಿದಿಲ್ಲ. ಕನ್ನಡದೇಶ ಈಗ ಸಂಕುಚಿತವಾಗಿದೆ ಎನ್ನುವುದೂ ಸರ್ವವಿದಿತ. ಆದುದರಿಂದ ಈ ದೇಸಿ ಕನ್ನಡ ಬೇರೆ ಬೇರೆ ಪ್ರದೇಶಗಳಲ್ಲಿ ಜನರು ಆಡುತ್ತಿದ್ದ ಭಾಷಾ ಸ್ವರೂಪ. ಇದು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸ ಹೊಂದಿದ್ದರೆ ಯಾರೂ ಆಶ್ಚರ್ಯಪಡಬೇಕಿಲ್ಲ. ಈಗಲೂ ಒಂದು ತಾಲೂಕಿನಿಂದ ಪಕ್ಕದ ತಾಲೂಕಿಗೆ ಪ್ರಯಾಣ ಮಾಡುವ ಸಂದರ್ಭದಲ್ಲಿ—ಶಬ್ದಗಳ ಉಚ್ಚಾರಣೆಯಲ್ಲಿ, ಮಾತಿನ ಮೋಡಿಯಲ್ಲಿ, ನುಡಿಗಟ್ಟಿನ ಪ್ರಯೋಗದಲ್ಲಿ ಶಬ್ದ ಸ್ವರೂಪದಲ್ಲಿ ಎಷ್ಟೋ ವ್ಯತ್ಯಾಸಗಳನ್ನು ಕಾಣುತ್ತೇವೆ. ಒಂದೇ ಕಡೆ ವಾಸ ಮಾಡುವ ಜನರ ಬೇರೆ ಬೇರೆ ಜಾತಿಗಳ, ಬುಡಕಟ್ಟುಗಳ ನುಡಿವಳಿಯಲ್ಲಿಯೂ ಹೀಗೆಯೇ ವ್ಯತ್ಯಾಸಗಳು ಕಂಡುಬರುತ್ತವೆ. ಈ ವ್ಯತ್ಯಾಸವನ್ನು ತರುವ ಮಾತಿನ ಗುಣವೇ ಭಾಷೆಯ ದೇಸಿತನವನ್ನು ಅಭಿವ್ಯಕ್ತಪಡಿಸುತ್ತದೆ. ಅದು ಕನ್ನಡದಲ್ಲಿಯೇ ಏಕೆ, ಎಲ್ಲ ಭಾಷೆಗಳಲ್ಲಿಯೂ ಗೋಚರಿಸುತ್ತದೆ. ಈ ದೇಸಿಯ ಸೊಗಡನ್ನು ಉಳಿಸಿ

* ಲೇಖಕರು, ಪ್ರಕಾಶಕರು: ಪ್ರೊ। ಟಿ. ಕೇಶವ ಭಟ್ಟ, ಚಿರಸಾಹಿತ್ಯ ಪ್ರಕಾಶನ, ೭೫೪, ೧೫ನೆಯ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು-೫೬೦ ೦೭೦. ಆಕೃತಿ: ಡೆಮ್ಮಿ ೧/೮, ಪುಟಗಳು: ೯೨, ಬೆಲೆ: ರೂ. ೧೬-೦೦ (ಪ್ರ.ಮು. ೧೯೯೦).

ಕೊಳ್ಳಬೇಕೆಂಬುದು ಪ್ರಾಚೀನ ಕಾಲದಿಂದಲೂ ವಿದ್ವಜ್ಜನರ ಅಭಿಪ್ರಾಯವಾಗಿದೆ. ಇದನ್ನೇ ಪಂಪ ಹೇಳಿರುವ "ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ಪುವುದು" (ಪಂಪ ಭಾ. ೧–೮) ಎಂಬ ಮಾತು ಸೂಚಿಸುತ್ತದೆ. ಕಾವ್ಯದ ಪದಪದ ಬಂಧದಲ್ಲಿ ದೇಸಿಯ ನುಡಿಗಟ್ಟಿನ ಬನಿಯೂ ಸಂಸ್ಕೃತ ವಚೋವಿಲಾಸವೂ ಹೊಂದಿ ಕೊಂಡಿರಬೇಕೆಂಬುದು ಪಂಪನ ಅಭಿಪ್ರಾಯ. ನಮ್ಮ ಪ್ರಾಚೀನ ಕವಿಗಳೆಲ್ಲರೂ ಈ ನಿಯಮವನ್ನು ಪಾಲಿಸಿಕೊಂಡೇ ಬಂದಿದ್ದಾರೆ. ಆದುದರಿಂದಲೇ ಅಂಥ ಕವಿಗಳ ಕಾವ್ಯಗಳಿಗೆ ಜನಪ್ರಿಯತೆ ಮತ್ತು ಪಾಂಡಿತ್ಯದ ಗೌರವ ಇಂದೂ ತಪ್ಪಿಲ್ಲ.

ಇಂಥ ಕಾವ್ಯಗಳಿಗೆ ಸಂಬಂಧಿಸಿದಂತೆ ಕೆಲವು ಶಬ್ದಗಳು ಪಾರಿಭಾಷಿಕವಾಗಿ ಪ್ರಯೋಗಗೊಂಡು ಅವುಗಳ ಅರ್ಥದ ಬಗ್ಗೆ ಇಂದಿಗೂ ಚರ್ಚೆ ನಡೆಯುತ್ತಿದೆ. ಇದಕ್ಕೆ ನಿಲುಗಡೆಯನ್ನು ಕಾಣುವ ಮಟ್ಟಕ್ಕೆ ನಾವಿನ್ನೂ ಮುಟ್ಟಿಲ್ಲ. ಆ ಶಬ್ದಗಳನ್ನು ಕುರಿತು ಈ ಸಂದರ್ಭದಲ್ಲಿ ಮಾಡಬಹುದಾದ ವಿವರಣೆಗಳನ್ನು ಓದುಗರು ಪರಾಮರ್ಶಿಸಬೇಕು.

"ಸಮಸಂಸ್ಕೃತ" ಎಂಬ ಶಬ್ದವನ್ನು ಕವಿರಾಜಮಾರ್ಗಕಾರನು ಒಂದು ದೊಡ್ಡ ಸಮಾಸದ ಭಾಗವಾಗಿ ಮಾತ್ರ ಉಪಯೋಗಿಸಿದ್ದಾನೆ. ಆ ಪದ್ಯ ಹೀಗಿದೆ—

ಸದಮಳ ಸಮಸಂಸ್ಕೃತ ಕಾ
ವ್ಯದ ಹೃದಯಂ ಹರ್ಷಚರಿತ ಕಾದಂಬರಿಗಳ್
ಮೊದಲಾಗಿ ನೆಗಳ್ದವಿದ ಱಿಯೊಳ್
ಸದಲಂಕಾರಂಗಳಖಿಳ ಕವಿ ವಿದಿತಂಗಳ್ —(ಕ. ರಾ. ೧–೨೬)

ಇಲ್ಲಿ ಒಂದು ನಿಲುಗಡೆಯಲ್ಲಿ ಈ ಪದ್ಯದ ಅರ್ಥವನ್ನು ವಿವರಿಸಬೇಕು. ೧೩ನೆಯ ಶತಮಾನದ ಕೇಶಿರಾಜನ "ಶಬ್ದಮಣಿದರ್ಪಣ"ದ ೯೦ನೆಯ ಸೂತ್ರವಾದ, ಆದರೆ, ಕವಿರಾಜಮಾರ್ಗದಿಂದಲೇ ಆರಿಸಿ ಅಂಗೀಕರಿಸಿರುವ (ಕ.ರಾ. ೧–೫೪), "ಸಮ ಸಂಸ್ಕೃತ" ಎಂಬ ಶಬ್ದವುಳ್ಳ ಪದ್ಯವೊಂದಿದೆ—

ಸಮುದಿತ ಸಂಖ್ಯಾವ್ಯಯ ರಹಿ
ತಮೆನಿಸಿ ವರ್ತಿಪ ನಿಘಂಟುವಿನ ನಾಮ ಪದೋ
ತ್ತಮ ವರ್ಣ ಪ್ರಕೃತಿಗಳಂ
ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಳ್ಪರ್

ಈ ಪದ್ಯದಲ್ಲಿ ಬರುವ "ಸಮಸಂಸ್ಕೃತ" ಎಂಬ ಪಾರಿಭಾಷಿಕ ಶಬ್ದಕ್ಕೂ ಕವಿ ರಾಜಮಾರ್ಗದ (೧–೨೬) ಶಬ್ದಕ್ಕೂ ಸಂಬಂಧವಿಲ್ಲ. ಕವಿರಾಜಮಾರ್ಗದಲ್ಲಿ ಗದ್ಯ ಕಾವ್ಯದ ಬಗ್ಗೆ ೫ ಪದ್ಯಗಳೂ (ಪ್ರಥಮ ಪರಿಚ್ಛೇದ ೨೫–೨೯) ಪದ್ಯಕಾವ್ಯದ ಬಗ್ಗೆ

೬ ಪದ್ಯಗಳೂ (೧—೩೦-೩೫) ಬರುತ್ತವೆ. ಆದುದರಿಂದ ಗದ್ಯಕಾವ್ಯದ ಸಂದರ್ಭದಲ್ಲಿ ಕವಿರಾಜಮಾರ್ಗದ (೧-೨೬) ಪದ್ಯದ ಅರ್ಥವನ್ನು ವಿವರಿಸಬೇಕು.

ಇಲ್ಲಿ ಕವಿರಾಜಮಾರ್ಗಕಾರನು ಕನ್ನಡದ "ಗದ್ಯಕಥೆ"ಗಳ ರಾಶಿಯನ್ನು ಸಂಸ್ಕೃತ ಗದ್ಯಕಾವ್ಯದ ರೀತಿಯಿಂದ ಬೇರೆಮಾಡಿ ತೋರಿಸುತ್ತಿದ್ದಾನೆ. ಆದುದರಿಂದಲೆ ಕವಿ-ರಾಜಮಾರ್ಗಕ್ಕೆ ಹಿಂದೆ ಸಂಸ್ಕೃತ ಗದ್ಯಕಾವ್ಯದಂಥ ಯಾವ ಕೃತಿಯೂ ಇದ್ದಿರಲಾರದು—ಎಂದು ಸ್ಪಷ್ಟವಾಗಿ ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ ಕವಿ-ರಾಜಮಾರ್ಗಕಾರನ (೧-೨೬) ಪದ್ಯದ ಅರ್ಥ ಹೀಗಿರಬಹುದು—ಕಾವ್ಯಪುರುಷನ ಶರೀರವು ಗದ್ಯವೆಂದೂ ಪದ್ಯವೆಂದೂ ಎರಡು ಬಗೆಯಾಗಿರುತ್ತದೆ. ಇವೆರಡೂ ಸಮಾನವಾದುವೆ. ಹೀಗೆ ಸಮಾನವಾದ ಸ್ವರೂಪದ ಸಂಸ್ಕೃತ ಗದ್ಯಕಾವ್ಯಗಳಲ್ಲಿ ಪ್ರಧಾನವಾಗಿರುವವು ಹರ್ಷಚರಿತ ಕಾದಂಬರಿಗಳು. ಇವೇ ಮೊದಲಾಗಿ ಇತರ ಕಾವ್ಯಗಳೂ ಇವೆ.

ಕನ್ನಡದಲ್ಲಾದರೆ ಹೀಗೆ ಸಂಪೂರ್ಣವಾಗಿ ಗದ್ಯದಲ್ಲಿಯೇ ರಚಿತವಾದ ಕಾವ್ಯಗಳಿಲ್ಲ. ಅಲ್ಲಿ ಗದ್ಯ-ಪದ್ಯ ಮಿಶ್ರವಾದ ಕಾವ್ಯಗಳಿವೆ. ಇವನ್ನು "ಗದ್ಯಕಥಾ" ಎಂಬ ಹೆಸರಿನಿಂದ ಕರೆಯುತ್ತಾರೆ. ಗದ್ಯವಾಗಲಿ, ಗದ್ಯಪದ್ಯ ಮಿಶ್ರಣವಾಗಲಿ ಕಾವ್ಯ ರಚನೆ ಮಾಡಬೇಕಾದರೆ, ಕವಿಗೆ ಕಲೆಗಳಲ್ಲಿ ಪರಿಜ್ಞಾನ, ಇತರ ಲೋಕವಿದ್ಯೆಗಳು, ಶಾಸ್ತ್ರ ಸಿದ್ಧಾಂತಗಳು, ಭಾಷೆಗಳು, ಇವುಗಳಿಂದ ದೊರಕುವ ವಸ್ತುವಿಷಯ ಜ್ಞಾನ —ಇವೆಲ್ಲ ಇರಬೇಕು. ಹೀಗೆ ತಿಳಿವಳಿಕೆ ಹೊಂದಿದ ವಿಮಳೋದಯಾದಿ ಕವಿಗಳು ಕನ್ನಡದಲ್ಲಿ ಇದ್ದರು. ಇಷ್ಟು ಮಾತ್ರ ಕವಿರಾಜಮಾರ್ಗಕಾರನ ಅರ್ಥವೆಂದು ನಾನು ಭಾವಿಸುತ್ತೇನೆ. ಈ ಗದ್ಯಕಥೆಗೇ "ಚಂಪೂ", "ವಚನಕಾವ್ಯ" ಎಂಬ ಬೇರೆ ಹೆಸರುಗಳೂ ಇವೆ. ಇನ್ನು ಪದ್ಯಕಾವ್ಯದ ವಿಚಾರ: ಕನ್ನಡ ಪದ್ಯಕಾವ್ಯದಲ್ಲಿ ಬೇರೆ ಬೇರೆ ರೀತಿಗಳಿವೆ ಎಂದು ಕವಿರಾಜಮಾರ್ಗಕಾರನು ಮುಂದುವರಿಯುತ್ತಾನೆ—

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ
ಗಡಿನ ನೆಗಟ್ಟಿಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ (೧-೩೩)

ಈ ಪದ್ಯದ ಅರ್ಥ ಕ್ಲಿಷ್ಟವಾಗಿದೆ. ಪುರಾತನ ಕವಿಗಳು ಈಗಿನ ಕಾವ್ಯದಲ್ಲಿ "ಒಡಂಬಡಂ ಮಾಡಿದರ್" ಎಂದರೇನು? ಇದು ಅರ್ಥವಾಗುವುದಿಲ್ಲ. ಬಹುಶಃ ಇಲ್ಲಿರುವ "ಈಗಡಿನ" ಎಂಬುದು "ಆಗಡಿನ" ಎಂದು ಇದ್ದಿರಬಹುದೋ ಏನೋ! ಎಂದರೆ, ಎಲ್ಲ ಕನ್ನಡ ಕಾವ್ಯಗಳಲ್ಲೂ ಹೊಂದಿಕೆಯಾಗದ ಅತಿಗ್ರಾಮ್ಯವಾದ ಭಾಷೆಯನ್ನು ಪ್ರಾಚೀನ ಕವಿಗಳು ಪ್ರಸಿದ್ಧಕಾವ್ಯದೊಳಗೆ ಪ್ರವೇಶಿಸುವಷ್ಟೇ ಮಟ್ಟಿಗೆ

ಶಿಷ್ಟವನ್ನಾಗಿ ಮಾಡಿದ್ದರು. ಈಚೆಗೆ ಆ ಪದ್ಧತಿ ದುರ್ಬಲವಾಗಿದೆ ಎಂದು ಕವಿರಾಜ ಮಾರ್ಗಕಾರನು ತನ್ನ ಕಾಲದ ಕಾವ್ಯಗಳ ಬಗ್ಗೆ ಒಂದು ಉದ್ಗಾರವನ್ನು ತೆಗೆದಿರ ಬಹುದೋ ಏನೋ? ಇದು ಪರಿಶೀಲಿಸಬೇಕಾದ ವಿಷಯ.

ಗದ್ಯಕಥೆ, ವಚನಕಾವ್ಯ ಮತ್ತು ಚಂಪು—ಈ ಮೂರೂ ಒಂದೇ ಬಗೆಯ ರಚನೆಗೆ ಅನ್ವಯಿಸುತ್ತವೆ—ಎಂಬ ಅಭಿಪ್ರಾಯ ಹೆಚ್ಚು ಸೂಕ್ತವಾದುದೆನಿಸುತ್ತದೆ. ಈ ವಿಷಯವನ್ನು ಪ್ರೊ॥ ಟಿ. ಕೇಶವ ಭಟ್ಟರು ಸ್ಪಷ್ಟ ಕಾರಣಗಳನ್ನು ಕೊಟ್ಟು ವಿವರಿಸಿದ್ದಾರೆ. ಈ ತರ್ಕ ಸುಬದ್ಧವಾಗಿದೆಯೆಂದು ಹೇಳಬಹುದು.

"ಉದಯಾದಿತ್ಯಾಲಂಕಾರ"ದಲ್ಲಿ ಬರುವ—

ಕನ್ನಡದೊಳ್ ಚಂಪೂಕೃತಿ
ಸನ್ನುತತರ ವಚನಕಾವ್ಯಮೆನಿಕುಂ, ಚತ್ತಾ
ಣಂ ನೆಱೆ ವೈದಂಡಿಕಮೆನೆ
ಸನ್ನುತಿಯಂ ಸರ್ಗಬಂಧಕೃತಿ ತಳೆದಿರ್ಕುಂ (೬)

ಈ ಪದ್ಯದ ವಿಷಯದಲ್ಲಿ ಸ್ವಲ್ಪ ವಿವರಣೆ ಅಗತ್ಯವಾಗಿದೆ: ಚತ್ತಾಣ, ಬೆದಂಡೆ ಎಂಬ ಎರಡೂ ದೇಸಿಗಬ್ಬಗಳು. ಇವು ತುಂಬ ಜನಪ್ರಿಯವಾದ ಕಾವ್ಯಜಾತಿಗಳು. "ಚತ್ತಾಣ"ವನ್ನು "ಚಿತ್ರಾಯತನ" ಎಂಬ ಸಂಸ್ಕೃತ ಶಬ್ದದಿಂದಲೂ "ಬೆದಂಡೆ"ಯನ್ನು "ವೈದಂಡಿಕ"ದಿಂದಲೂ ವ್ಯುತ್ಪತ್ತಿ ಮಾಡುವ ಬಗೆಯೇ ಸರಿಯಲ್ಲವೆಂದು ಕಾಣುತ್ತದೆ. "ಚಿತ್ರಾಯತನ ವೈದಂಡಿಕ"—ಈ ಎರಡೂ ಕನ್ನಡ ಶಬ್ದಗಳ ಸಂಸ್ಕೃತೀಕರಣಗಳಾಗಿರುವ ಶಬ್ದಗಳೆಂದು ಭಾವಿಸುವುದು ಸೂಕ್ತ. ಎರಡೂ ಗ್ರಾಮ್ಯಪ್ರಧಾನವಾದ ಕಾವ್ಯಸ್ವರೂಪಗಳು. ಬೆದಂಡೆ–ಮೆಲ್ವಾಡುಗಳನ್ನು ಯಕ್ಷಗಾನ ಕೃತಿಗಳಿಗೆ ಸಮಾನವಾದ ಶ್ರವ್ಯ–ದೃಶ್ಯ ಕಾವ್ಯರೂಪಗಳೆಂದು ಹೇಳುವುದು ಸೂಕ್ತವಾಗಿ ಕಾಣುತ್ತದೆ. ಈ ವಿಷಯವನ್ನು ಶ್ರೀ ಕೇಶವ ಭಟ್ಟರು ತಮ್ಮ ಮುನ್ನೋಟದಲ್ಲಿ ಸ್ಪಷ್ಟಪಡಿಸಿದ್ದಾರೆ.

ಯಕ್ಷಗಾನವು ಅಷ್ಟು ಹಳೆಯದೆ? ಈ ಪ್ರಶ್ನೆಗೆ ಹೀಗೆ ಉತ್ತರಿಸಬಹುದು: ಯಕ್ಷಗಾನವೆಂಬ ಹೆಸರು ಸ್ಥಿರವಾಗುವ ತನಕ ಹಿಂದೆ ಯಾವ ಯಾವ ಬಯಲಾಟಗಳು ಯಾವ ಯಾವ ಹೆಸರಿನಲ್ಲಿ ಇದ್ದುವೋ ಹೇಳಬರುವುದಿಲ್ಲ. ಆದರೆ, ಆಟ–ಕುಣಿತ ಇವು ಇರಲಿಲ್ಲವೆಂದು ಹೇಳಲಾಗುವುದಿಲ್ಲ. ಆದುದರಿಂದ ಚತ್ತಾಣ, ಬೆದಂಡೆ, ಮೆಲ್ವಾಡು—ಈ ಎಲ್ಲವೂ ಆ ಬಗೆಯ ದೃಶ್ಯ ಶ್ರವ್ಯ ಕಾವ್ಯಗಳಿಗೆ ಅನ್ವಯಿಸುತ್ತವೆ ಎಂದು ನಿರ್ಧರಿಸಬಹುದು. ಕನ್ನಡ ಸಾಹಿತ್ಯದ ವೈವಿಧ್ಯ ವೈಶಿಷ್ಟ್ಯಗಳನ್ನು ದಿಗ್ದರ್ಶಿಸುವ ಈ ಕೃತಿ ವಿದ್ವಾಂಸರ ಹಾಗೂ ಸಂಶೋಧನ ಪಟುಗಳ ಕುತೂಹಲಕರ ಅವಲೋಕನಕ್ಕೆ ಅರ್ಹವಾಗಿದೆ.

—ಪ್ರೊ॥ ಜಿ. ವೆಂಕಟಸುಬ್ಬಯ್ಯ

ಶ್ರೀಗುರುಚರಿತಾಮೃತಂ* : ಈಚೆಗೆ ರಚನೆಯಾಗುತ್ತಿರುವ ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಛಂದೋಬದ್ಧವಾದ ಕಾವ್ಯದ ರಚನೆ ಅತ್ಯಂತ ವಿರಳವಾಗುತ್ತಿದೆ. ಷಟ್ಪದಿ, ಕಂದ, ಸಾಂಗತ್ಯ—ಮುಂತಾದ ಕನ್ನಡ ಛಂದಸ್ಸಿನಲ್ಲಾಗಲಿ ಸ್ರಗ್ಧರಾ, ಶಾರ್ದೂಲವಿಕ್ರೀಡಿತ—ಮೊದಲಾದ ಸಂಸ್ಕೃತ ವೃತ್ತಗಳಲ್ಲಾಗಲಿ ಕಾವ್ಯ ರಚನೆ ಏಕೆ ದುರ್ಲಭವಾಗುತ್ತಿದೆಯೆಂಬುದೊಂದು ಸಮಸ್ಯೆಯಾಗಿ ಪರಿಣಮಿಸಿದೆ. ಕವಿಗಳಿಗೆ ಅಥವಾ ಜನರಿಗೆ ಇವುಗಳಲ್ಲಿ ಅಭಿರುಚಿ ಕಡಿಮೆಯಾಯಿತೆ? ಅಥವಾ ಛಂದೋಬದ್ಧವಾಗಿ ಪದ್ಯಗಳನ್ನು ರಚಿಸುವ ಸಾಮರ್ಥ್ಯವೇ ಕವಿಗಳಲ್ಲಿ ಹ್ರಾಸವಾಯಿತೆ—ಎಂಬ ಪ್ರಶ್ನೆ ಏಳುತ್ತದೆ. ಉಭಯವೂ ಕಾರಣವಾಗಿದ್ದರೂ ಇರಬಹುದು. ಅಸಂಖ್ಯಾತವಾಗಿ ಹೊರಚಿಮ್ಮುತ್ತಿರುವ ಭಾವಗೀತೆಗಳ ಹುಲುಸು ನೆಲದಲ್ಲಿ ಶ್ರೀಗುರುಚರಿತಾಮೃತವೆಂಬ ಧಾರ್ಮಿಕ ಕಾವ್ಯವು ಭಾಮಿನೀಷಟ್ಪದಿಯಲ್ಲಿ ಚಿಗುರಿ ಕವಲೊಡೆದು ಸೊಗಸುಬೀರುತ್ತಿರುವುದೊಂದು ಕುತೂಹಲಕರವಾದ ಸಂಗತಿ.

ವಿದ್ವಾನ್ ಟಿ. ಕೇಶವ ಭಟ್ಟರು ಶ್ರೀಮದ್ರಾಮಚಂದ್ರಾಪುರ ಮಠದ ಪ್ರಸ್ತುತ ಶ್ರೀಗಳವರಾದ ಶ್ರೀ ರಾಘವೇಂದ್ರಭಾರತೀ ಮಹಾಸ್ವಾಮಿಗಳ ಜೀವನ ಚರಿತ್ರೆಯನ್ನು ಕಾವ್ಯಮಾರ್ಗದಲ್ಲಿ ಸುಂದರವಾಗಿ ವರ್ಣಿಸಿದ್ದಾರೆ. ಇದರಲ್ಲಿ ೮ ಸಂಧಿಗಳೂ, ಒಟ್ಟು ೪೧೬ ಪದ್ಯಗಳೂ ಇವೆ. ವಿದ್ವಾನ್ ತಾಳ್ತಜೆ ಕೃಷ್ಣಭಟ್ಟರು ಇದಕ್ಕೆ ಸೊಗಸಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಪ್ರಸ್ತಾವನೆಯಲ್ಲಿ ಕಾವ್ಯಸೌಂದರ್ಯವನ್ನು ಮನಸ್ಸಿಗೆ ತಾಕುವಂತೆ ಎತ್ತಿತೋರಿಸಿ ಇದು ಉತ್ತಮ ಕಾವ್ಯವೆಂದು ಪ್ರಶಂಸೆ ಮಾಡಿದ್ದಾರೆ. ಈ ಪ್ರಶಂಸೆ ಸಹೃದಯತೆಯಿಂದ ಸಹಜವಾಗಿ ಬಂದದ್ದು, ಮಮತೆಯ ಅಭಿಮಾನದಿಂದ ಬಂದದ್ದಲ್ಲ.

ಮುದ್ದಣನು ಮನೋರಮೆಗೆ ಕಾವ್ಯವನ್ನೊರೆದಂತೆ, ಇಲ್ಲಿ ಕವಿ ಕೇಶವನು ಕುಮಾರಕನೀಯುವಾಗೀಶನಿಗೆ ಶ್ರೀಗುರುಚರಿತ್ರೆಯನ್ನೊರೆಯುತ್ತಾನೆ. "ಆವ ಕತೆ ನಿನಗಕ್ಕು? ಬಾಲಕಥಾವಳಿಯೊ? ನರಿಹಕ್ಕಿಗಳ ನುಡಿತೀವಿದುದೊ" ಎಂದು ತಂದೆ ಕೇಳಿದಾಗ, "ಹಕ್ಕಿಗಳ ನಾಯಿಗಳ ಕೋಳಿಯ ಕೊಕ್ಕರೆಯು" ಮುಂತಾದ ಕಥೆಗಳು ಬೇಡವೆಂದೂ "ನಮ್ಮ ಗುರುಮಠ, ಮಠದ ಧರ್ಮಕರ್ಮಾದಿಗಳ ಜನಹಿತ ಚರಿತ ಕಥನ" ಬೇಕೆಂದು ಕುಮಾರನು ಹೇಳುತ್ತಾನೆ. ಈ ಪ್ರಶ್ನೋತ್ತರ ತುಂಬ ರೋಚಕವಾಗಿ ಬಂದಿದೆ. ಗದ್ಯಕ್ಕೆ ಬಾರದ ಸೊಗಸು ಪದ್ಯಕ್ಕಿದೆಯೆಂದು ಕವಿಯ ಅಭಿಪ್ರಾಯ. "ನೀರಿಗೇಂ ಸವಿಯುಂಟೆ ಸಕ್ಕರೆ ಸೇರಿದಾ ಗೋಕ್ಷೀರದಂತೆ ಪದ್ಯ"ವಾದ್ದರಿಂದ ಭಾಮಿನೀ ಷಟ್ಪದಿ ಹೊಮ್ಮಿದೆ. "ಕಾವ್ಯದಲ್ಲಿ ದೋಷವು ನುಸುಳಿಬಂದರೇನಂತೆ? ಕಲ್ಲಿಲ್ಲದ

* ಕವಿ: ಟಿ. ಕೇಶವ ಭಟ, ಪ್ರಕಾಶನ: ಚಿರಸಾಹಿತ್ಯ ಪ್ರಕಾಶನ, ೬೫೪, ೧೫ನೇ ಮುಖ್ಯ ರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು-೫೬೦೦೭೦. ಪುಟ ೧೪೪, ಬೆಲೆ: ೨೫ ರೂ.

ಅಕ್ಕಿಯುಂಟೆ? ಕಲ್ಲನ್ನು ತೆಗೆದು ಸೋಸಿ ಅನ್ನಮಾಡಿ ಉಂಬಂತೆ", ಗುಣವನ್ನಾರಿಸಿ ಕಾವ್ಯವನ್ನು ಸವಿಯಬೇಕೆಂದು ಕವಿ ಕೇಶವನ ನಮ್ರವಚನ.

ಎರಡನೆಯ ಸಂಧಿಯಲ್ಲಿ ಮಲೆನಾಡಿನ ಮರಗಳ ವರ್ಣನೆ ರಮಣೀಯವಾಗಿದೆ. "ಹೊನ್ನೆ ಚಿಕ್ಕವು ಗಂಧ ಚೆಂದನ ಕಿನ್ನಿಗೋಳಿಯು ಗೇರು ಪಾಚೆಲೆ" ಎಂಬುದಾಗಿ ಮರಗಿಡಬಳ್ಳಿಗಳ ಹೆಸರುಗಳ ರಾಶಿಯನ್ನೋದುವಾಗ ಕಾಡಿನೊಳಗೆ ನಾವು ಹೊಕ್ಕಿರುವಂತೆ ಭಾಸವಾಗುತ್ತದೆ. "ಹೊಡೆಯೆನುತೆ ಮಗ್ಗುಲನು ಮತ್ತಾರಡಿಯೆನುತೆ ತುಂಬಿಯನು" ಎಂಬ ಶ್ಲೇಷೋನ್ಮೀಲಿತವಾದ ಪರಿಸಂಖ್ಯಾಲಂಕರವು ಲಕ್ಷ್ಮೀಶನ ಜೈಮಿನಿಭಾರತವನ್ನು ನೆನಪಿಗೆ ತರುತ್ತದೆ.

ಶ್ರೀ ಶಂಕರಾಚಾರ್ಯರು ಗೋಕರ್ಣಕ್ಕೆ ಆಗಮಿಸಿದಾಗ ಅವರ ಮಹಿಮೆಯನ್ನು ವರ್ಣಿಸುವ ಪದ್ಯವಿದು—

ಹಕ್ಕಿಗಳು ಚಿಲಿಪಿಲಿಯ ಮರೆತವು । ಸೊಕ್ಕುಹಸುಗಳು ಸಾಧುವಾದವು
ನೆಕ್ಕಿ ಕರುವನು ಹಾಲು ಸುರಿಸಲು ಮರೆತು ನಿಂದಹವು ।
ಮಿಕ್ಕವರ ಮಾತೇಕೆ? ಗೋಕರ್ಣಕ್ಕೆ ಶ್ರೀಶಂಕರರು ಚಿತ್ತಯಿ
ಸಲ್ಕೆ ಝಂಝಾವಾತ ಮೆಲ್ಲೆಲರಾದುದೇನೆಂಬೆ ॥

ಶ್ರೀ ರಾಘವೇಂದ್ರಭಾರತೀಸ್ವಾಮಿಗಳು ಕಾಶಿಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಬಹಳಕಾಲದ ಮೇಲೆ ತೀರ್ಥಹಳ್ಳಿ ಮಠಕ್ಕೆ ವಾಪಸು ಬಂದಾಗ—

ನಿದ್ದೆಯಿಂದೆಚ್ಚೆತ್ತ ಮಗು ಕಳೆತಿ । ದ್ದೆಡೆಗೆ ತಾಯ್ಬಂದವೊಲು ಮುಗಿ
ಲೆದ್ದು ಮಳೆ ಬಂದಂತೆ ಬಾನೊಳಗಿರ್ಪ ಚಾತಕಕೆ ।
ಮೊದ್ದ ನಾದವ ಪಡೆದವೊಲು ಸ । ದ್ಬುದ್ಧಿಯನು ಶ್ರೀಗುರುಗಳೀಮಠ
ವಿದ್ದೆಡೆಗೆ ಬಂದಾಗ ಸಂತೋಷಿಸಿತು ಶಿಷ್ಯಜನ ॥

ಶ್ರೀಸ್ವಾಮಿಗಳ ವಿದ್ಯಾಭ್ಯಾಸ, ಪಾಂಡಿತ್ಯ, ತಪೋನಿಷ್ಠೆ, ಲೋಕೋಪಕಾರಬುದ್ಧಿ, ವೇದಶಾಸ್ತ್ರಗಳ ಪ್ರಚಾರ ತತ್ಪರತೆ—ಮೊದಲಾದ ವಿಶಿಷ್ಟ ಗುಣಗಳನ್ನು ಈ ಗ್ರಂಥವು ಸಮರ್ಥವಾಗಿ ಕಾವ್ಯಶೈಲಿಯಲ್ಲಿ ನಿರೂಪಿಸಿದೆ. ಕೇಶವಭಟ್ಟರ ಕವಿತೆ ನಿರರ್ಗಳವಾಗಿ, ಲಯಬದ್ಧವಾಗಿ, ಶ್ರವಣಮಧುರವಾಗಿ, ತಿಳಿನೀರಿನ ನದಿಯಂತೆ, ಸಳಸಳ ಹರಿಯುತ್ತದೆ. ಬಾಯಾರಿದ ರಸಿಕಪಥಿಕರು ಯಥೇಷ್ಟವಾಗಿ ಈಂಟಬಹುದಾದ ಸಿಹಿನೀರು ಇಲ್ಲುಂಟು. ಅವರೇ ಹೇಳಿಕೊಳ್ಳುವಂತೆ "ಹಸುಳೆಯುಲಿಯೋ ನಲ್ಲೆಯೊಲ್ಮೆಯ । ಮಿಸುವ ಕುಡುನೋಟವೊ—ಸೇವಗೆಯೊಳೆಯ ಪಾಯಸವೊ" ಎಂಬ ರೀತಿಯಲ್ಲಿ ಇದು ಓದುಗರ ಮನಸವನ್ನು ಸೆಳೆಯಬಲ್ಲದು. ಕೃತಿಯ ಅನುಬಂಧಗಳಲ್ಲಿ ಶ್ರೀಗಳವರಿಗೆ ಅರ್ಪಿಸಿದ ಸ್ವಾಗತಪದ್ಯಸಂಚಕ ಮತ್ತು ಪಂಚದಶೀಪದ್ಯಪುಷ್ಪೋಪಹಾರಗಳಿವೆ. ಇವು ಶಾರ್ದೂಲವಿಕ್ರೀಡಿತಾದಿ ವಿಭಿನ್ನ ವೃತ್ತಗಳಲ್ಲಿರುವ

ಪ್ರೌಢಕವಿತೆಗಳು. ಮೂರನೆಯ ಅನುಬಂಧದಲ್ಲಿ ಕಠಿಣ ಶಬ್ದಗಳ ಅರ್ಥವನ್ನು ಬರೆದಿರುವುದು ಓದುಗರಿಗೆ ತುಂಬ ಉಪಯುಕ್ತವಾಗಿದೆ. ಅನಂತರ ಮಹಾಕವಿ ಕಾಳಿದಾಸನ ಶ್ಯಾಮಲಾದಂಡಕದ ಕನ್ನಡ ಅನುವಾದವನ್ನು ಸೇರಿಸಲಾಗಿದೆ. ೨೪ ಭಾಮಿನೀ ಪದ್ಯಗಳಿರುವ ಸರಳಾನುವಾದವಿದು. ಶ್ರೀ ಕೇಶವಭಟ್ಟರಿಗೆ ಸರಸ್ವತಿಯ ಅನುಗ್ರಹವಿದೆ. ಕವಿತೆ ಒಲಿದಿದೆ. ಕವಿಕನೀಯನು ಕವಿಶೇಖರನಾಗಿ ಬೆಳೆದು ಮೆರೆದಿದ್ದಾನೆ.

ಈ ಕೃತಿಯಲ್ಲಿ ನುಸುಳಿಕೊಂಡಿರುವ ಒಂದೆರಡು ದೋಷಗಳನ್ನು ಗಮನಿಸಬಹುದು. "ವಾರಣಾಸಿಕ್ಷೇತ್ರ ಸೇರಿದರು" (೪–೧೧)—ಎಂಬ ಪದ್ಯದಲ್ಲಿ ಕಾಶಿಯನ್ನು ಸೇರಿದವರು ಯಾರು—ಎಂಬ ಪ್ರಶ್ನೆ ಹುಟ್ಟುತ್ತದೆ. ಕರ್ತೃಪದವಿಲ್ಲ. ಹಿಂದಿನ ಪದ್ಯಗಳಲ್ಲಿ ಪ್ರಸ್ತುತರಾದವರು ಕಿರಿಯ ಸ್ವಾಮಿಗಳು. ಆದರೆ ಕಾಶಿಗೆ ಹೋದವರು ಹಿರಿಯ ಸ್ವಾಮಿಗಳೆಂದು ಪೂರ್ವಾಪರ ಸಂದರ್ಭಗಳನ್ನು ಪರೀಕ್ಷಿಸಿ ನಿರ್ಣಯಿಸಬೇಕಾಗುತ್ತದೆ. ಪ್ರತಿಯೊಂದು ಸಂಧಿಯ ಕಡೆಯಲ್ಲಿ "ಇದುವೆ ವಾಣಿಯ ಕರವಿಭೂಷಣ" ಎಂಬ ಕಾವ್ಯಪ್ರಶಂಸಾ ಪದ್ಯವು ಬಂದಿದೆ. ಇದರಲ್ಲಿ "ದೂಷಣರಿಪುವ ಭಕ್ತಿಪ್ರವಣತಾಶ್ರವಣ" ಎಂಬ ಮಾತು ಬರುತ್ತದೆ. ದೂಷಣರಿಪುವೆಂದರೆ ಶ್ರೀರಾಮ. ಅರ್ಥವು ಥಟ್ಟನೆ ಹೊಳೆಯದು. ಏಕೆಂದರೆ, ದೂಷಣನೊಬ್ಬ ಸಾಮಾನ್ಯ ರಾಕ್ಷಸ. ಅದಕ್ಕೆ ಬದಲು "ರಾವಣರಿಪುವ" ಎಂದೇ ಪ್ರಯೋಗಿಸುವುದೊಳ್ಳೆಯದು. ಈ ಶಬ್ದವು ಅರ್ಥವತ್ತಾಗಿಯೂ ಇದೆ. ಣಕಾರಾನುಪ್ರಾಸವನ್ನು ಉಳಿಸಿಕೊಡುತ್ತದೆ. "ತೇಜೋರ್ವಿ" ಎಂಬ ಶಬ್ದ (೪–೪೪) ಪ್ರಮಾದಿಕ. ಭೂಮಿ ಎಂಬ ಅರ್ಥದಲ್ಲಿ ಕುಂಭಿನೀ ಎಂಬ ಪದವನ್ನು (೪–೨೬) ಕನ್ನಡ ಕಾವ್ಯಗಳಲ್ಲಿ ಪ್ರಯೋಗಿಸಿದ್ದುಂಟು. ಇದರ ಬಗೆಯೇನೆಂಬುದು ವಿಚಾರಣೀಯ. ಸಂಸ್ಕೃತ ಸಾಹಿತ್ಯದಲ್ಲಾಗಲಿ ಕೋಶದಲ್ಲಾಗಲಿ ಈ ಪದವನ್ನು ಇದುವರೆಗೆ ನಾನು ಕಂಡಿಲ್ಲ. ೨ನೇ ಅನುಬಂಧದ ೩ನೇ ಪದ್ಯದಲ್ಲಿ "ಸದ್ವಿಗ್ರಹಂತಿಷ್ಠಿತಂ" ಎಂದು ಪ್ರಯೋಗಿಸಿದ್ದಾರೆ. ಇಲ್ಲಿ ತಿಷ್ಠಿತ ಶಬ್ದ ಅಸಾಧು. "ಸ್ಥಾಪಿತಂ" ಎಂದು ಸರಳವಾಗಿ ಬಳಸಬಹುದಿತ್ತು.

ಪ್ರಾಚೀನ ಶೈಲಿಯಲ್ಲಿ ರಸಪುಷ್ಟವಾಗಿ ಬರೆಯಬಲ್ಲ ಕವಿಗಳು ಈಗಲೂ ಇದ್ದಾರೆಂಬುದು ಹೆಮ್ಮೆಪಡಬೇಕಾದ ಸಂಗತಿ. ಕಾವ್ಯಪ್ರೇಮಿಗಳು ಇದನ್ನೋದಿ ಸಂತೋಷಿಸಬೇಕು. ಗಮಕಿಗಳ ಕಾವ್ಯವಾಚನಕ್ಕೆ ಪ್ರಶಸ್ತವಾದ ಪದ್ಯಕಾವ್ಯವಿದು. ಶ್ರೀ ರಾಮಚಂದ್ರಾಪುರ ಮಠದ ಭಕ್ತರು ಅವಶ್ಯವಾಗಿ ಓದಿ ಸಂಗ್ರಹಿಸಬೇಕಾದ ಪುಸ್ತಕವಿದು. ಒಟ್ಟಿನಲ್ಲಿ ಈ ಕವಿಶೇಖರರು ಕನ್ನಡ ಜನತೆಗೆ ಅಭಿನಂದನೀಯರಾಗಿದ್ದಾರೆ.

—ವಿದ್ವಾನ್ ಎನ್. ರಂಗನಾಥಶರ್ಮ

**ಮಳೆಯ ರಾಜ ಚಾರಿತ್ರ***: ಸೆಜ್ಜೆಯ ಸಿದ್ಧಲಿಂಗ ಕವಿ ವಿರಚಿತ ಕಾವ್ಯವಿದು. ವಾರ್ಧಕ ಷಟ್ಪದಿಯಲ್ಲಿದೆ. ಈ ಕಾವ್ಯದಲ್ಲಿ ಆಶ್ವಾಸಗಳು 3. ಕ್ರಮವಾಗಿ ಇವುಗಳಲ್ಲಿ 14, 11, 11 ಹೀಗೆ 36 ಸಂಧಿಗಳಲ್ಲಿ 1521 ಪದ್ಯಸಂಖ್ಯೆಯಿದೆ. ಕಾವ್ಯಗುಣದಲ್ಲಿ, ವಾಕ್ಚಮತ್ಕಾರದಲ್ಲಿ, ವರ್ಣನೆಯಲ್ಲಿ, ಅಲಂಕಾರಿಕತೆಯಲ್ಲಿ ಇದು ಮೇಲ್ಮಟ್ಟದ ಕೃತಿಯೇ ಆಗಿದೆ. ಇದರ ರಚನೆಯ ಕಾಲವನ್ನು ಎಫಿಮೆರಿಸಂ ಪ್ರಕಾರ, ಕ್ರಿ.ಶ. 1562 ಆಗುವುದೆಂದು ಡಾ॥ ಸೂರ್ಯನಾಥ ಕಾಮತ್‌ರು ತಿಳಿಸಿರುವುದಾಗಿ, ಇದರ ಸಂಪಾದಕರಾದ ಡಾ॥ ಸಿದ್ಧಯ್ಯಪುರಾಣಿಕರು ಹೇಳಿರುತ್ತಾರೆ.

ಸಜ್ಜೆ (ಶಯ್ಯೆ–ಹಾಸಿಗೆ)ಗಳನ್ನು ನಿರ್ಮಿಸುವವನಾಗಿ "ಸೆಜ್ಜೆಯ" ಎಂಬ ವಿಶೇಷಣಾಂಕಿತನಾದವನು ಈ ಕವಿ, ವಿದ್ಯಾನಗರದ ಹಿರಿಯ ಮಠದ ಸಿದ್ಧವೀರೇಶ್ವರನ ಶಿಷ್ಯನಾದ ಸಿದ್ಧನಂಜೇಶನ ಶಿಷ್ಯನು. ಇಮ್ಮಡಿ ತಮ್ಮರಾಜನ ಮಗನಾದ ಮುಮ್ಮಡಿ ಚಿಕ್ಕರಾಯ ಭೂಪಾಲನ ಆಶ್ರಯದಲ್ಲಿದ್ದನು. ಈ ಕವಿ ತನ್ನ ಮೂವರು ಅಳಿಯಂದಿರಿಗೆ ಸಕಲ ಶಾಸ್ತ್ರೋಪದೇಶವನ್ನು ಮಾಡಿದ ಗುರು. ಆ ಮಕ್ಕಳು ಇವನೊಡನೆ—"ಭಕ್ತರಲ್ಲಿ ಧರೆ ಸಹಿತ ಕೈಲಾಸಕ್ಕೆ ತೆರಳಿದ ಮಹಾತ್ಮನು ಯಾರು?" ಎಂದು ಕೇಳಿದುದಕ್ಕೆ ಉತ್ತರವಾಗಿ ಈ ಮಳೆಯ ರಾಜೇಂದ್ರ ಚರಿತೆಯನ್ನು ಹೇಳಿದುದಾಗಿ ಈ ಕಾವ್ಯದಲ್ಲಿ ನಿರೂಪಿಸಿದ್ದಾನೆ. "ಶಂಕರ ಸಂಹಿತೆ" ಎಂಬ ಕಾವ್ಯದ ಕರ್ತೃವಾದ ಮುಮ್ಮಡಿ ತಮ್ಮೇಗೌಡ (ಕ್ರಿ.ಶ. 1605–1669)—ಇವನ ಆಶ್ರಯದಲ್ಲಿ ಕನ್ನಡ ಕವಿ ಸಜ್ಜೆಯ ಸಿದ್ಧಲಿಂಗದೇವನು ಮಳೆಯ ರಾಜ ಚರಿತ್ರೆಯನ್ನು ಬರೆದನೆಂದು ಶ್ರೀ ಓ.ವಿ.ಕೃಷ್ಣಮೂರ್ತಿಯವರು ಇದೇ ಕರ್ನಾಟಕ ಲೋಚನ (ಡಿಸೆಂಬರ್ 1990) ಸಂಚಿಕೆಯಲ್ಲಿ ತಮ್ಮ ಲೇಖನದಲ್ಲಿ ತಿಳಿಸಿರುತ್ತಾರೆ. ಇದರಿಂದ ಸಿದ್ಧಲಿಂಗ ಕವಿಯ ಆಶ್ರಯದಾತನ ಹೆಸರು ಮತ್ತು ಕಾಲ ವ್ಯತ್ಯಾಸಗೊಳ್ಳುತ್ತದೆ. ಬಹುಶಃ ಕಾವ್ಯೋಕ್ತ ದುಂದುಭಿ ಸಂವತ್ಸರ 60 ವರ್ಷ ಈಚೆಯದೋ ಏನೋ!

**ಕಥಾವಸ್ತು**: ಸಂತಾನಹೀನನಾದ ದೇವರಾಜನು ಶಿವನನ್ನೊಲಿಸಿ, ತನಗೆ ಶತಾಯುಷಿಯಾದ ಮಡೆಯ ಮಗ ಬೇಡ, ಅಲ್ಪಾಯುವಾದರೂ ಜಾಣನಾದ ಮಗ ಬೇಕು—ಎಂದು ಕೇಳಿಕೊಂಡಂತೆ ಹದಿನಾರು ವರ್ಷ ಮಾತ್ರ ಆಯುಷ್ಯವುಳ್ಳ ಮಗನನ್ನು ಪಡೆಯುತ್ತಾನೆ. ಅವನೇ ಮಳೆಯ ರಾಜ. ಯುವರಾಜಪಟ್ಟ ವಹಿಸಿ, ಇವನು ಜೈತ್ರಯಾತ್ರೆ ಮಾಡುತ್ತಾನೆ. ದಾನವರನ್ನು ಸಂಹರಿಸುತ್ತಾನೆ. ತಪವೆಸಗಿ ಶಿವನಿಂದ ನೂರು ವರ್ಷದ ಆಯುಷ್ಯವನ್ನೂ, ತನ್ನ ಸಾಮ್ರಾಜ್ಯದ ಸಮಸ್ತ ಜೀವಿಗಳೊಂದಿಗೆ ಕೈಲಾಸಕ್ಕೆ ತೆರಳುವುದನ್ನೂ ವರವಾಗಿ ಪಡೆಯುತ್ತಾನೆ. ಸಿಂಧು ರಾಜ

* ಸಂ: ಡಾ॥ ಸಿದ್ಧಯ್ಯ ಪುರಾಣಿಕ, ಪ್ರ: ಶ್ರೀ ಗಿರಿ ಪ್ರಕಾಶನ, 4/5ಎ, ಅಲಿಅಸ್ಕರ್ ರಸ್ತೆ, ಬೆಂಗಳೂರು-560 052. ಪುಟ: ಡಿಮ್ಮೈ 448, (1989). ಬೆಲೆ: ರೂ. 50/60-00.

ಕುಮಾರಿ ಮಾಂಗಲ್ಯವತಿಯನ್ನು ವರಿಸುತ್ತಾನೆ. ನೂರು ವರ್ಷವಾಗಲು ಎಲ್ಲರೊಂದಿಗೆ ಕೈಲಾಸಕ್ಕೆ ತೆರಳುತ್ತಾನೆ. ಹೀಗೆ ಇದೊಂದು ಭಕ್ತಿಪ್ರಧಾನ ಕಾವ್ಯ. ಇದರೊಂದಿಗೆ ಅಲಂಕಾರ, ರಸಭಾವ ವರ್ಣನೆಗಳ ಪಾಂಡಿತ್ಯ ತುಂಬಿ ತುಳುಕುತ್ತದೆ.

ಈ ವಿಷಯದಲ್ಲಿ ಸಂಪಾದಕರ ನುಡಿಗಳಿವು :—"ಮಲಯ ರಾಜನ ಚರಿತ್ರೆ ಅನಾವಶ್ಯಕ ವರ್ಣನೆಗಳಲ್ಲಿ ಮುಚ್ಚಿಹೋಗಿದೆ. ಇವನಲ್ಲಿ ವಿದ್ವತ್ತಿಗೆ ಕೊರತೆಯಿಲ್ಲ. ಭಾಷಾ ಪ್ರಭುತ್ವಕ್ಕೂ ಕೊರತೆಯಿಲ್ಲ. ಶಾಸ್ತ್ರಜ್ಞಾನ ಸಾಕಷ್ಟಿದೆ. ಆದರೂ ವರ್ಣನೆಗಳಿಗೆ ಮಾರುಹೋಗಿ ವಿಷಯಾಂತರ ಮಾಡಿ .... ಕಾವ್ಯದ ಪರಿಣಾಮ ರಮಣೀಯತೆಯನ್ನು ಹಾಳುಮಾಡಿರುವುದು ವಿಷಾದನೀಯ". ಹೀಗೆಂದಿರುವುದು ವಿದ್ವದ್ರಸಿಕರ ದೃಷ್ಟಿಗೆ ಅನುಚಿತವೆನಿಸುತ್ತದೆ.

ಕಾವ್ಯಸೌಂದರ್ಯದಿಂದೊಪ್ಪುವ ಈ ಕೃತಿ ಪ್ರಕಟವಾದುದು ಪುಣ್ಯದಿಂದ. ಆದರೆ ಇದರ ಸಂಪಾದನ ಕಾರ್ಯ ಅಷ್ಟೊಂದು ತೃಪ್ತಿ ಕೊಡುವುದಿಲ್ಲ. ಒಪ್ಪೋಲೆ ಇದ್ದರೂ ಅದೆಲ್ಲಿಗೂ ಸಾಲದು. ಎಷ್ಟೋ ಪದ್ಯಗಳಲ್ಲಿ ಛಂದೋಭಂಗ ಉಳಿದಿದೆ. ಮೊದಲ ಸಂಧಿಯ 3ನೇ ಪದ್ಯವೊಂದರಲ್ಲೇ 3 ಅಚ್ಚಿನ ತಪ್ಪುಗಳಿವೆ. 4ನೆಯದರಲ್ಲಿ "ಕರುಣೆ ಪಗೆ" ಎಂಬುದು "ಕರುಣಾಪಗೆ" ಎಂದಾಗಬೇಕು. ಇಲ್ಲಿ ಛಂದೋದೋಷಕ್ಕೆ ಅರ್ಥದೋಷವೂ ಸೇರಿಕೊಂಡಿದೆ. ಇಂಥವು ಅಲ್ಲಲ್ಲಿ ಎಷ್ಟೋ ಇವೆ. ಇವಕ್ಕೆಲ್ಲ ಒಪ್ಪೋಲೆಯಿಲ್ಲ.

ಈ ಕಾವ್ಯವನ್ನು ಸಂಪಾದಿಸುವಲ್ಲಿ ಕುರುಗೋಡಿನ ನೀಲಮ್ಮನ ಮಠದ ಪ್ರತಿ (ಕ) ಮತ್ತು ಶ್ರೀ ಎನ್. ಬಸವಾರಾಧ್ಯರು ಪ್ರತಿ ಮಾಡಿಕೊಟ್ಟ ಅಪೂರ್ಣ ಪ್ರತಿ (ಅ)—ಇವನ್ನು ಬಳಸಲಾಗಿದೆ. ಇವೆರಡು ಪ್ರತಿಗಳನ್ನಿಟ್ಟುಕೊಂಡು ಶುದ್ಧಪ್ರತಿ ಸಿದ್ಧಮಾಡಿಕೊಟ್ಟವರು ಶ್ರೀ ಎಸ್. ಶಿವಣ್ಣನವರು. ಪಾಠಾಂತರಗಳೊಡನೆ ಅಚ್ಚಿನ ಪ್ರತಿ ಮಾಡಿದವರು ಪ್ರೊ|| ಎಂ. ವಿ. ಸೀತಾರಾಮಯ್ಯ. ಮುದ್ರಣದಲ್ಲಿ ಕರಡು ತಿದ್ದಿದವರು ಡಾ|| ಎಸ್. ವಿದ್ಯಾಶಂಕರರು. ಕಥಾಸಾರ ಬರೆದುಕೊಟ್ಟವರು ಶ್ರೀ ಟಿ.ಆರ್.ಮಹಾದೇವಯ್ಯ. ಶಬ್ದಾರ್ಥಕೋಶ, ಪದ್ಯಗಳ ಅಕಾರಾದಿ, ಒಪ್ಪೋಲೆ—ಇವು ಶ್ರೀ ಹಿ. ಚಿ. ಶಾಂತವೀರಯ್ಯನವರಿಂದ. ಹೀಗೆ ಹಲವರು ವಿದ್ವಾಂಸರಿಂದಾಗಿ ಈ ಕಾವ್ಯ ಹೊರಬಂದಿರುವುದು ಮೆಚ್ಚತಕ್ಕ ಸಂಗತಿ. ಈ ಕಾವ್ಯದ ರಸವನ್ನು ಕವಿಯೇ ತಾದ್ರೂಪ್ಯಗೊಳಿಸಿದ ರೂಪಕಾಲಂಕಾರದ ಪದ್ಯವಿದು—

ಶಿಶು ಶುಕಂಗಳ ಮುದ್ದುನುಡಿ. ವೀಣೆಯಿಂಚರಂ,
ಪೊಸ ಜವ್ವನೆಯ ತಕ್ಕೆ, ತಂಗಾಳಿ ನೆಳಲಿಕ್ಕೆ,
ಮಿಸುನಿವೆರ್, ಸುಗ್ಗಿಯ ಬನಂ, ತುಂಬಿ ಪರಿವ ಪೊಳೆ, ಪೆಸರ್ವಡೆದ
ದಿವ್ಯಾನ್ನವು

ರಸವೊಸರ್ವ ಮಾವಣ್ಣು, ಪರಿಮಳಿಪ ಪನ್ನೀರ್, ಸು
ಕುಸುಮ, ಕಸ್ತೂರಿಕಾ ಚಂದನದ ವಾಸನಂ
ರಸಿಕರಾಜೇಂದ್ರ ಸೆಜ್ಜೆಯ ಸಿದ್ಧಲಿಂಗಾರ್ಯನುಸುರ್ದ ಕಾವ್ಯಾನುರಸವು ॥

ಕನ್ನಡದಲ್ಲಿ ಪಾಂಡಿತ್ಯ ಪಡೆಯಬೇಕೆಂಬವರು ಕುಮಾರವ್ಯಾಸನನ್ನು, ಲಕ್ಷ್ಮೀಶನನ್ನು, ರಾಘವಾಂಕನನ್ನು, ಮಲ್ಲಣಾರ್ಯನನ್ನು ಓದುವ ಹಾಗೆ ಸಿದ್ಧಲಿಂಗ ಕವಿಯನ್ನು ಅರ್ಥಮಾಡಿಕೊಂಡು ಓದಿಕೊಳ್ಳುವುದು ಸೂಕ್ತವೇ ಸರಿ. ಅದಕ್ಕಾಗಿ ಈ ಕಾವ್ಯ ಪ್ರಕಟಗೊಂಡುದು ದೊಡ್ಡದೊಂದು ಲೋಕೋಪಕಾರ. ಇದರ ಪ್ರಕಟನೆಗೆ ಕಾರಣರೆಲ್ಲರೂ ಓದುಗರ ಕೃತಜ್ಞತೆಗೆ ಭಾಜನರು.

—ಟಿ. ಕೇಶವ ಭಟ್ಟ

**ತುಳುವ ದರ್ಶನ***: ಅಮೆರಿಕದ ಕೆಲಿಫೋರ್ನಿಯ ಸ್ಟೇಟ್ ವಿಶ್ವವಿದ್ಯಾಲಯದಲ್ಲಿ ಮಾನವಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ॥ ಪೀಟರ್ ಜೆ. ಕ್ಲಾಸ್ ಅವರು ಇಂಗ್ಲಿಷಿನಲ್ಲಿ ಬರೆದ ಕೆಲವು ಪ್ರಬಂಧಗಳ ಅನುವಾದ ಗ್ರಂಥವಿದು. ಮೂಲ ಲೇಖಕ ಪೀಟರ್ ಅವರು ದ. ಕ. ಜಿಲ್ಲೆಯ ತುಳುನಾಡಿನಲ್ಲಿ ಕ್ಷೇತ್ರಕಾರ್ಯ ನಡೆಸಿ ರಚಿಸಿದ "ಬಂಟರ ಮತ್ತು ನಾಡವರ ಬಂಧುತ್ವ"ವನ್ನು ಕುರಿತ ಸಂಶೋಧನ ಪ್ರಬಂಧದಿಂದ ಅವರಿಗೆ ಪಿಎಚ್.ಡಿ. ಪದವಿ ಬಂದಿತ್ತು. ಅನಂತರ ಅನೇಕ ವರ್ಷ ವಿಶೇಷ ಮಾಹಿತಿಗಳನ್ನು ಸಂಗ್ರಹಿಸಿ ತೌಳವ ಸಂಸ್ಕೃತಿ ಹಾಗೂ ಭೂತಾರಾಧನೆಯ ಮೇಲೆ ಅವರು ಬರೆದ ಹಲವು ಪ್ರಬಂಧಗಳು ಇಲ್ಲಿ ಈ "ತುಳುವ ದರ್ಶನ" ಎಂಬ ಹೆಸರಿನ ಗ್ರಂಥ ರೂಪ ತಾಳಿದೆ. ಅನುವಾದಕರಾದ ಶ್ರೀ ಎ. ವಿ. ನಾವಡರು ಕುಂದಾಪುರದ ಭಂಡಾರ್ಕಾರ್ಸ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರು ಮತ್ತು ಕನ್ನಡದಲ್ಲಿ ಹೆಸರಾಂತ ಲೇಖಕರು. ಶ್ರೀ ಸುಭಾಶ್ಚಂದ್ರರು ಪೂರ್ಣಪ್ರಜ್ಞ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು.

ಈ ಗ್ರಂಥದಲ್ಲಿ ಎಂಟು ಅಧ್ಯಾಯಗಳಿವೆ. ಇವು ತುಳು ಭಾಷೆಯ ಸಾಹಿತ್ಯ-ಸಂಸ್ಕೃತಿಗಳನ್ನು ಪ್ರತಿಪಾದಿಸುತ್ತವೆ. ತುಳು ಮೌಖಿಕ ಸಂಪ್ರದಾಯಗಳ ದೃಷ್ಟಿಯಲ್ಲಿ ದೈವಾವೇಶ ಹಾಗೂ ದೈವ ಪಾತ್ರತ್ವ, ತುಳುನಾಡಿನ ಮೈಂದಲ: ಐತಿಹ್ಯ ಹಾಗೂ ದೈವಾವೇಶ ಮತಾಚರಣೆ, ಸಿರಿ ಐತಿಹ್ಯ ಹಾಗೂ ಮತಾಚರಣೆ: ದಕ್ಷಿಣ ಭಾರತದ

* ಮೂಲ ಲೇಖಕರು: ಡಾ॥ ಪೀಟರ್ ಜೆ. ಕ್ಲಾಸ್. ಅನುವಾದಕರು: ಎ. ವಿ. ನಾವಡ ಮತ್ತು ಸುಭಾಶ್ಚಂದ್ರ. ಪುಟಗಳು: 324+22. ಬೆಲೆ: ರೂ. 200-00. ಪ್ರಕಾಶಕರು: ಪ್ರಾದೇಶಿಕ ವ್ಯಾಸಂಗ, ಭಂಡಾರ್ಕಾರ್ಸ್ ಸ್ಟಾಫ್ ಕ್ವಾರ್ಟರ್ಸ್, ಕುಂದಾಪುರ-576201, ದ.ಕ.ಜಿಲ್ಲೆ.

ಸಾಮೂಹಿಕ ದೈವಾವೇಶ ಆರಾಧನೆ, ಮೌಖಿಕ ಸಂಪ್ರದಾಯಗಳು–ಅರಸು ಆರಾಧನೆ ಹಾಗೂ ದಕ್ಷಿಣ ಭಾರತದ ಜಾತಿ ವ್ಯವಸ್ಥೆಯ ಮರುಪರಿಶೀಲನೆಗೆ ತಕ್ಕ ಸಾಮಗ್ರಿಗಳು, ತುಳು ಸಂಸ್ಕೃತಿಯ ಚೌಕಟ್ಟಿನಲ್ಲಿ ವೀರರು ಮತ್ತು ವೀರ ರಮಣಿಯರು, ದಕ್ಷಿಣ ಭಾರತದ ಗ್ರಾಮ ಒಂದರ ದೈವಗಳಿಗೆ ಸಂಬಂಧಿಸಿದಂತೆ ದೈವಾವೇಶ–ಶಿಕ್ಷಕ ರಕ್ಷಕ ಗುಣಧರ್ಮಗಳು, ತುಳುವ ಪುರಾಣ ಆರಾಧನ ಸಂಪ್ರದಾಯಗಳಲ್ಲಿ ಚೆನ್ನೆ, ತುಳು ಬಂಧುತ್ವದ ಪಾರಿಭಾಷಿಕಾಂಶಗಳು—ಇವು ಇಲ್ಲಿ ವಿವರಣೆಗೆ ಒಳಪಟ್ಟ ವಿಷಯಗಳಾಗಿವೆ. ಅವಶ್ಯವಾದ ಟಿಪ್ಪಣಿಗಳು, ಆಧಾರ ಗ್ರಂಥಸೂಚಿ, ಪಾರಿಭಾಷಿಕ ಪದ ಸೂಚಿ, ವಿಷಯ ವ್ಯಕ್ತಿಪದಸೂಚಿ (ಇಂಡೆಕ್ಸ್) ಇವುಗಳಿಂದ ಗ್ರಂಥ ಪರಿಪೂರ್ಣತೆ ಪಡೆದಿದೆ.

ಭೂತದ ಪಾತ್ರಿಗೆ ದೈವವು ಮೈಮೇಲೆ ಬರುವುದನ್ನು ಸಮಾಜಶಾಸ್ತ್ರ ಮನೋವಿಜ್ಞಾನ ದೃಷ್ಟಿಯಿಂದ ಮತ್ತು ಇತರರು ಈ ಮೊದಲೇ ಮಾಡಿರುವ ಪರಿಶೀಲನೆಯ ಹಿನ್ನೆಲೆಯಿಂದ ವಿಮರ್ಶಿಸಲಾಗಿದೆ. ತುಂಬ ಅಸಹನೆ ಉಗ್ರತೆಗಳ ದೈವವೆನಿಸಿರುವ ಮೈಂದಲ ದೈವವನ್ನು ಪಾರ್ದನದ ಆಧಾರದಿಂದ ವರ್ಣಿಸಲಾಗಿದೆ. ದೈವದ ತೃಪ್ತಿಗಾಗಿ ಸಲ್ಲಿಸುವ ನೇಮ ಮುಂತಾದ ಆರಾಧನೆಯ ಸ್ವರೂಪವನ್ನು ವ್ಯಕ್ತಪಡಿಸಲಾಗಿದೆ. "ಭೂತ"ವನ್ನು ಹಾನಿಕಾರಕ ಎಂಬ ಅರ್ಥದಲ್ಲಿ ಇಂಗ್ಲಿಷಿಗೆ ಡೆವಿಲ್ ಅಥವಾ ಡೆಮನ್ ಎಂದು ಅನುವಾದಿಸುವುದು ತಪ್ಪು. "ಭೂತಾರಾಧನೆ" "ಡೆವಿಲ್ ವರ್ಷಿಪ್" ಅಲ್ಲ; ಅದು "ಹೀರೋ ವರ್ಷಿಪ್" ಎಂಬುದಾಗಿ ಸ್ಪಷ್ಟಪಡಿಸಲಾಗಿದೆ.

"ಚೆನ್ನೆ" ಎಂಬ ಪ್ರಬಂಧದಲ್ಲಿ—ಈ ಆಟವು ಹೊರಗಿಂದ ಬಂದುದೆಂಬ ಅಭಿಪ್ರಾಯ ಪ್ರಚಲಿತವಿದ್ದರೂ ಲೇಖಕರು ಇದು ತುಳು ಸಂಸ್ಕೃತಿಗೆ ಹೊಂದಿಕೊಂಡುದನ್ನು ಕಂಡಿದ್ದಾರೆ. ಚೆನ್ನೆಯಾಟದ ಪಾರ್ದನ ಕಥೆಗಳನ್ನು ನಿರೂಪಿಸಲಾಗಿದೆ. ತುಳು ಬಂಧುತ್ವದ ಪಾರಿಭಾಷಿಕಾಂಶಗಳು ಭಾಷಾವಿಜ್ಞಾನದ ನೆಲೆಯಿಂದ ನಿರೂಪಣೆಗೊಂಡಿವೆ.

ಅನುವಾದದಲ್ಲಿ ಮೂಲಲೇಖಕರ ಅಭಿಪ್ರಾಯಗಳೇ ನಿರೂಪಿತವಾಗಿದ್ದರೂ ಅಲ್ಲಿ ಅಸಮರ್ಪಕವಾದುದನ್ನು, ಸರಿಯಿಲ್ಲದುದನ್ನು ಅನುವಾದಕರು ಅಡಿಟಿಪ್ಪಣಿಗಳಲ್ಲಿ ಖಂಡಿಸಿ, ವಿವರಣೆ ನೀಡಿರುವುದು ಮೆಚ್ಚತಕ್ಕ ಸಂಗತಿ. ಒಂದು ಉದಾಹರಣೆ: ತುಳು ಲಿಪಿಯನ್ನು ತುಳು ಭಾಷೆಯ ಬರವಣಿಗೆಗಾಗಿ ಬಳಸಿರುವುದು ಕಾಣುವುದಿಲ್ಲ—ಎಂಬ ಮೂಲಲೇಖಕರ ಹೇಳಿಕೆಯನ್ನು ಆಕ್ಷೇಪಿಸಲಾಗಿದೆ. ತುಳು ಭಾಷೆಯ ಸಾಹಿತ್ಯವನ್ನೂ ತುಳುವ ಸಂಸ್ಕೃತಿಯನ್ನೂ ತಿಳಿಯಲು ಅಪೇಕ್ಷಿಸುವವರಿಗೆ ಈ ಸಂಶೋಧನ ಕೃತಿ ತುಂಬ ಅನುಭವ ಸಂಪತ್ತನ್ನು ನೀಡುವುದರಲ್ಲಿ ಸಂದೇಹವಿಲ್ಲ. ಉತ್ತಮ ಕಾಗದದಲ್ಲಿ ಆಗಿರುವ ಉತ್ತಮಮುದ್ರಣ ವಿನ್ಯಾಸಗಳಿಂದ, ಭೂತಾರಾಧನೆಗೆ

ಸಂಬಂಧಿಸಿದ ಹಲವು ಚಿತ್ರಗಳಿಂದ, ಉನ್ನತ ಮಟ್ಟದ (ಕ್ಯಾಲಿಕೊ) ರಕ್ಷಾಕವಚದಿಂದ ಶೋಭಪಡೆದ ಈ ಸಂಶೋಧನ ಗ್ರಂಥ ಕನ್ನಡದಲ್ಲಿ ಒಂದು ಭೂಷಣಪ್ರಾಯ ಕೃತಿಯಾಗಿದೆ.

—ಟಿ. ಕೇಶವ ಭಟ್ಟ

**ನೇಮಿಜಿನೇಶ ಸಂಗತಿ*** : ನೇಮಿನಾಥನ ಕಥೆಯನ್ನು ಕನ್ನಡದಲ್ಲಿ ಬರೆದವರು ಒಂಬತ್ತು ಜನ ಕವಿಗಳು. ಕಾಲದ ದೃಷ್ಟಿಯಿಂದ ಏಳನೆಯವನಾಗಿ ಮೂರನೆಯ ಮಂಗರಸ ನಿಂತಿದ್ದಾನೆ. ಇವನ ಕಾಲ ಕ್ರಿ.ಶ.1508. ಇವನ ಆರು ಕೃತಿಗಳು ಇದುವರೆಗೂ ದೊರಕಿದ್ದು, ಅವುಗಳಲ್ಲಿ ಪ್ರಸಿದ್ಧವಾದುದು "ನೇಮಿಜಿನೇಶ ಸಂಗತಿ". ಇದು 35 ಸಂಧಿಗಳಿಂದ 5035 ಪದ್ಯಗಳನ್ನು ಒಳಗೊಂಡಿದೆ. ಇದನ್ನು "ಹರಿವಂಶ" ಎಂಬ ಹೆಸರಿನಿಂದಲೂ ಕರೆಯುತ್ತಾರೆ. ನೇಮಿಜಿನೇಶ ಜೈನರ ಪ್ರಕಾರ 22ನೇ ತೀರ್ಥಂಕರ. ನೇಮಿತೀರ್ಥಂಕರರ ಕಥೆಯನ್ನು ಮೊದಲಿಗೆ ಸಾಂಗತ್ಯದಲ್ಲಿ ಬರೆದ ಶ್ರೇಯಸ್ಸು ಮಂಗರಸನದು. ಹೆಚ್ಚು ಪ್ರಸಾದದಲ್ಲಿರುವ ಶ್ರಾವಕ ಕಾವ್ಯಗಳಲ್ಲಿ ಇದೂ ಒಂದಾಗಿದೆ. ಕವಿಯ ಬಹುಮುಖ ಪ್ರತಿಭೆ ಈ ಕಾವ್ಯದಲ್ಲಿ ವ್ಯಕ್ತವಾಗಿದೆ.

ಮಹಾಭಾರತದ ಕುರುವಂಶದ ಕಥೆಯ ಜತೆಯಲ್ಲಿ ಹರಿವಂಶ ಹಾಗೂ ನೇಮಿಜಿನೇಶನ ಕಥೆಯನ್ನು ಬೆರೆಸಿ ಈ ಕಥೆಯನ್ನು ಹೆಣೆಯಲಾಗಿದೆ. 35 ಸಂಧಿಗಳಿರುವ ಈ ಕಾವ್ಯದಲ್ಲಿ 22 ಮತ್ತು 32ನೇ ಸಂಧಿಯಲ್ಲಿ ಮಾತ್ರ ನೇಮಿನಾಥನ ಕಥೆ ಇದೆ. ಜೈನ ಪರವಾಗಿ ಕಥೆಯನ್ನು ಬದಲಾಯಿಸಿಕೊಂಡಿರುವುದರಿಂದ ಮೂಲ ವ್ಯಾಸ ಭಾರತಕ್ಕೆ ಹೋಲಿಸಿದಾಗ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ. ಉದಾಹರಣೆಗೆ ಈ ಕೆಳಗಿನಂತೆ ಪಟ್ಟಿ ಮಾಡಬಹುದು :

1) ಧರ್ಮರಾಯನಿಗೆ ಕುಸುಮಮಾಲ ಎಂಬ ಹೆಂಡತಿಯಿದ್ದಳು.
2) ದ್ರೌಪದಿ ಅರ್ಜುನನೊಬ್ಬನಿಗೇ ಮಡದಿ.
3) ದುರ್ಯೋಧನ ಒಬ್ಬ ಸಾಮಂತರಾಜ.
4) ಜರಾಸಂಧ ಒಬ್ಬ ಚಕ್ರವರ್ತಿ.
5) ಕರ್ಣ ದೀಕ್ಷೆ ವಹಿಸಿ ಮರಣಹೊಂದುತ್ತಾನೆ.
6) ಕರ್ಣ ಮಂತ್ರದಿಂದ ಹುಟ್ಟುವುದಿಲ್ಲ.
7) ಕರ್ಣನನ್ನು ಸೂರ್ಯರಾಜ ಎಂಬವನು ಸಾಕುತ್ತಾನೆ.
8) ಪಗಡೆಯಾಟದಲ್ಲಿ ದ್ರೌಪದಿಯನ್ನು ಪಣವಾಗಿ ಒಡ್ಡುವುದಿಲ್ಲ.
9) ಕೀಚಕ-ಸೈರಂಧ್ರಿಯರ ಕಥೆಯಿಲ್ಲ.

* ದ್ವಿತೀಯ ಮುದ್ರಣ. ಸಂ। ಎ. ಶಾಂತಿರಾಜಶಾಸ್ತ್ರಿ. ಪ್ರ। ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್, ಬೆಂಗಳೂರು. 1989. ಪುಟ: 540. ಬೆಲೆ: ರೂ. 65-00.

ಹೀಗೆ ಇನ್ನೂ ಹಲವಾರು ಕಥಾ ಬದಲಾವಣೆಗಳನ್ನು ನೋಡಬಹುದು. ಇಷ್ಟೆಲ್ಲಾ ಬದಲಾವಣೆ ಮಾಡಿಕೊಂಡರೂ ಕವಿಯ ಕಥೆಗಾರಿಕೆಯ ಶಕ್ತಿಯನ್ನು ಮೆಚ್ಚಲೇಬೇಕಾಗುತ್ತದೆ. ಪೀಠಿಕಾ ಸಂಧಿಯಲ್ಲಿ ಹಲವಾರು ಪೂರ್ವಕವಿಗಳನ್ನು ಸ್ಮರಿಸಿ, ಮುಂದೆ ಸಾಗುತ್ತಾನೆ. ಇದು ಅವನ ವಿಧೇಯತೆಯನ್ನು ಸೂಚಿಸುತ್ತದೆ. ಕಾವ್ಯದಲ್ಲಿ ತುಂಬಿಕೊಂಡಿರುವ ಸಹಜ ಶೈಲಿಯ ಮಾತುಗಳು, ತಡೆಯಿಲ್ಲದ ನಿರೂಪಣೆ ಕವಿಯ ಪ್ರತಿಭೆಗೆ ಸಾಕ್ಷಿಯಾಗಿವೆ. ಉದಾಹರಣೆಗೆ—ಸಂಧಿ-3ರಲ್ಲಿನ ಬೇಟೆಯ ವರ್ಣನೆಯನ್ನು ನೋಡಬಹುದು :

ಕರಿಮುರಿ ಶರಭಕೇಸರಿ ಖಳ್ಗ ಕಾಡೆಮ್ಮೆ । ಕರಡಿ ಕಡವೆ ಚಿತ್ರಕಾಯ ॥
ಹರಿ ಹುಲ್ಲೆ ಸಾರಂಗ ಮೊದಲಾದ ಮಿಗಗಳಂ । ದಿರದೊಳಗಾಯ್ತು ಬಲೆಗೆ,
(2-43)

ಹೀಗೆ ಈ ಕವಿಯು ಕಾಡಿನ ಪ್ರಾಣಿಗಳ ಪಟ್ಟಿಯನ್ನೇ ಪಟಪಟನೆ ನೀಡುತ್ತಾನೆ.

ಕೆಡಹು ಕೆಡಹು ಕೊಲ್ಲು ಕೊಲ್ಲೆಸು ಇರಿಯಿರಿ । ಇಡು ಇಡು ಬಿಡು ಬಿಡು ನಾಯ
ಬಡಿ ಬಡಿ ಹೊಡೆ ಹೊಡೆಯೆಂಬಬ್ಬರ ಬಲು । ನುಡಿಯುಣ್ಮುತಲ್ಲಿ ನೋಡಿದರು (2-45)

ಎಲ್ಲೆಲ್ಲಿ ನೋಡಿದರೂ ಬೇಟೆಗಾರರ ಕೂಗುಗಳು, ಉದ್ಗಾರಗಳು, ಕೇಕೆಗಳು ಕೇಳಿಸುತ್ತಿದ್ದವಂತೆ. ಮೇಲಿನ ಮಾತುಗಳು ಇಷ್ಟು ಸಹಜವಾಗಿ ಬರಬೇಕಾದರೆ, ಕವಿಗೆ ಬೇಟೆಯ ಅನುಭವ ಇರಲೇಬೇಕು ಎನಿಸುತ್ತದೆ. ಇದರ ಜೊತೆಯಲ್ಲಿಯೇ ಹರಿಶ್ಚಂದ್ರ ಕಾವ್ಯದ ಬೇಟೆಯ ಪ್ರಸಂಗ ಜ್ಞಾಪಕಕ್ಕೆ ಬರುತ್ತದೆ. ಮಂಗರಸನು ವರ್ಣನಾಪ್ರಿಯ. ಉದಾಹರಣೆಗೆ : ವಸುದೇವನ ಸೌಂದರ್ಯವನ್ನು ವರ್ಣಿಸುವಲ್ಲಿ ಕವಿ ತನ್ನ ಎಲ್ಲ ಚಾತುರ್ಯವನ್ನೂ ಪ್ರದರ್ಶಿಸಿದ್ದಾನೆ. ವಸುದೇವನನ್ನು ಲಲನೆಯರು ಮಾಳಿಗೆ ಹತ್ತಿ, ಮರದ ತುದಿಯಲ್ಲಿ ಕುಳಿತು ನೋಡಿದರಂತೆ :

ಮದಿಲನಡರಿ ಮಾಡವಹತ್ತಿ ಮರಗಳ । ತುದಿಯೇರಿಯಾಪುರವರದ ॥
ಮದವತಿಯರು ನೋಡುವರಂಬರಚರ । ಸುದತಿಯರಂತಾನೃಪನ (8-21)

ರತ್ನಾಕರವರ್ಣಿಯನ್ನು ಬಿಟ್ಟರೆ, ಅನಂತರ ಸಾಂಗತ್ಯವನ್ನು ಚೆನ್ನಾಗಿ ದುಡಿಸಿಕೊಂಡ ಕವಿ ಈ ಮಂಗರಸ. ಸಹಜ ಮಾತುಗಳಿಂದ, ಬಳಸಿದ ನಾಣ್ಣುಡಿಗಳಿಂದ ಈ ಕಾವ್ಯ ಓದುಗನಿಗೆ ಪ್ರಿಯವಾಗುತ್ತದೆ. ಆದರೆ "ಜನ್ಮಜನ್ಮಾಂತರದ ಭವಾವಳಿ ಇಲ್ಲಿರುವುದರಿಂದ ನೂರಾರು ಸಣ್ಣ ದೊಡ್ಡ ಉಪಕಥೆಗಳು ಸೇರಿ ಕಾವ್ಯ ದೊಡ್ಡದಾಗಿದೆ. ಓದುಗನಿಗೆ ಒಂದೊಂದು ಸಾರಿ ಗೊಂದಲವುಂಟಾಗಿ, ಕಥೆ ಸಿಕ್ಕುಸಿಕ್ಕಾಗಿ ಕಾಣುತ್ತದೆ". (ಮೂರನೆಯ ಮಂಗರಸ. ಸ.ಕ.ಸಾ.ಚ. ಎಂ.ಎ.ಜಯಚಂದ್ರ).

ಇವೆಲ್ಲ ಇದ್ದೂ ಮಂಗರಸನಿಗೆ ಮಹಾಕವಿಯಾಗುವ ಯೋಗ ಒದಗಲಿಲ್ಲ. ಅವನ ಕಾವ್ಯದಲ್ಲಿನ ಕೆಲವಾರು ದೋಷಗಳು ಇದಕ್ಕೆ ಕಾರಣವಾಗಿವೆ. "ಹದಮೀರಿದ ಶೃಂಗಾರದ ಆಧಿಕ್ಯ ಈತನ ಮೊದಲ ನ್ಯೂನತೆ. ನಖಶಿಖಾಂತ ಸ್ತ್ರೀ ವರ್ಣನೆ, ಅತಿ ವಿಸ್ತಾರ ಇವು ಕವಿಯ ಸೋಲಿಗೆ ಕಾರಣ" (ಹಂ.ಪ.ನಾ., ಸಾಂಗತ್ಯ ಕವಿಗಳು, ಪುಟ 50).

ಸುಂದರ ಮುದ್ರಣದೊಂದಿಗೆ, ಹಲವಾರು ಚಿತ್ರಗಳೂ ಇಲ್ಲಿ ಇರುವುದರಿಂದ ಈ ಕೃತಿಯ ಮೌಲ್ಯ ಹೆಚ್ಚಾಗಿದೆ. ಬೆಲೆಯೂ ಸುಲಭವಾಗಿದೆ. ಪರಿವಿಡಿಯಿಲ್ಲದಿರುವುದು ಕೊರತೆಯಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ಸಾಹಿತ್ಯದ ಅಭ್ಯಾಸಿಗಳು ಇದನ್ನು ಕೊಂಡು, ಓದಿ, ಸಂಗ್ರಹಿಸಬೇಕಾದ ಕೃತಿಯಾಗಿದೆ. ಇದನ್ನು ಆಸಕ್ತರಿಗೆ ಸುಲಭವಾಗಿ ಸಿಗುವಂತೆ ಮರುಮುದ್ರಣ ಕಾಣಿಸಿದ ಪಂಡಿತರತ್ನ ಎ.ಶಾಂತಿರಾಜಶಾಸ್ತ್ರಿ ಟ್ರಸ್ಟಿನವರನ್ನು ಅಭಿನಂದಿಸಬೇಕು.

—ಡಿ. ವಿ. ಪರಮಶಿವಮೂರ್ತಿ

— o —

## ಸಪ್ನ ಬುಕ್ ಸ್ಟಾಲ್ ಕೊಡುಗೆ

ಇದೇ ಸಂದರ್ಭದಲ್ಲಿ ಪ್ರತಿಷ್ಠಿತ ಪುಸ್ತಕ ವ್ಯಾಪಾರಿಗಳಾದ ಸಪ್ನ ಬುಕ್ ಸ್ಟಾಲಿನ ಶ್ರೀ ಸುರೇಶ ಷಾ ಅವರು ಪ್ರತಿಷ್ಠಾನಕ್ಕೆ 3001-00 ರೂ.ಗಳ ಉದಾರ ಕೊಡುಗೆಯನ್ನು ನೀಡಿದರು.

ಸಪ್ನ ಬುಕ್ ಸ್ಟಾಲ್ ಪ್ರತಿವರ್ಷ ನಡೆಸುವ ಕನ್ನಡ ಪುಸ್ತಕಗಳ ಪ್ರದರ್ಶನದಲ್ಲಿ ಮಾರಾಟವಾಗುವ ಪುಸ್ತಕಗಳ ಒಟ್ಟು ಮೊತ್ತದ ಲಾಭಾಂಶದಲ್ಲಿ ಶೇಕಡ 50 ರಿಯಾಯಿತಿ ಭಾಗವನ್ನು ಸಾಹಿತ್ಯ ಹಾಗೂ ಸಮಾಜ ಸೇವಾಸಂಸ್ಥೆಗಳಿಗೆ ನೀಡುವ ಸತ್ಸಂಪ್ರದಾಯದಂತೆ 1989ನೇ ಸಾಲಿನ ಲಾಭಾಂಶದ ಮೊತ್ತವನ್ನು ಸಚಿವರಾದ ಶ್ರೀ ಎಂ. ಬೀರಪ್ಪ ಮೊಯಿಲಿ ಅವರ ಮೂಲಕ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರಿಗೆ ನೀಡಿದರು. ಕನ್ನಡ ಪುಸ್ತಕಗಳ ಮಾರಾಟ ವಿಭಾಗದ ಶ್ರೀ ಅಡಿಗ ಅವರೂ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ಕೆನರಾ ಬ್ಯಾಂಕ್ ಕೊಡುಗೆ

ಕೆನರಾ ಬ್ಯಾಂಕ್ ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ 10,000.00 ರೂಗಳ ಉದಾರ ಕೊಡುಗೆಯನ್ನು ನೀಡಿದೆ. ಪ್ರತಿಷ್ಠಾನದ ವಿವಿಧ ಚಟುವಟಿಕೆಗಳಿಗಾಗಿ ನೀಡಿರುವ ಈ ಕೊಡುಗೆಗಾಗಿ ಪ್ರತಿಷ್ಠಾನ ಕೆನರಾಬ್ಯಾಂಕ್‌ಗೆ ಕೃತಜ್ಞವಾಗಿರುತ್ತದೆ. ಈ ಸಂದರ್ಭದಲ್ಲಿ ನೆರವು ನೀಡುವಲ್ಲಿ ನೆರವಾದ ಬ್ಯಾಂಕ್‌ನ ಅಧಿಕಾರಿಗಳಾದ ಶ್ರೀ ಸೋಮಶೇಖರ ಹಾಗೂ ಶ್ರೀ ದಿನೇಶ್ ನಾಯಕ್ ಅವರನ್ನು ತುಂಬ ಕೃತಜ್ಞತೆಯಿಂದ ಸ್ಮರಿಸುತ್ತದೆ.

## ಕೇಂದ್ರ ಅನುದಾನ

ಕೇಂದ್ರ ಸರ್ಕಾರದ ಪತ್ರಾಗಾರ ಇಲಾಖೆ ಪ್ರತಿಷ್ಠಾನಕ್ಕೆ ನೀಡುತ್ತಿರುವ ಹಸ್ತಪ್ರತಿ ಸಂಗ್ರಹಣೆ, ಸಂರಕ್ಷಣೆ ಮತ್ತು ಪ್ರಕಟನ ಯೋಜನೆಯಂತೆ ಪ್ರಸಕ್ತ ವರ್ಷದಲ್ಲಿ 35,000.00 ರೂಗಳ ಅನುದಾನವನ್ನು ನೀಡಿ ಉಪಕರಿಸಿದೆ.

## ಎಂ. ವಿ. ಸೀ. ಸಂಸ್ಮರಣೆ

9-9-90 ದಿವಂಗತ ಎಂ. ವಿ. ಸೀತಾರಾಮಯ್ಯನವರ 81ನೇ ಹುಟ್ಟು ಹಬ್ಬ. ಅಂದಿಗೆ ಅವರಿಗೆ ಅಭಿನಂದನ ಸಮಾರಂಭ ನಡೆಯಬೇಕಾಗಿತ್ತು. ಅದಕ್ಕಾಗಿ ಸಮಿತಿ "ಕದಂಬ" ಎಂಬ ಸಂಪುಟವನ್ನು ಸಿದ್ಧಪಡಿಸುವ ಪ್ರಯತ್ನದಲ್ಲಿತ್ತು. ಆದರೆ ವಿಧಿಯ ಆಘಾತದಿಂದ ಅದು ಸಂಸ್ಮರಣೆಯಾಗುವಂತಾದದ್ದು ನಮ್ಮ ದೌರ್ಭಾಗ್ಯ. ಈ ಎಲ್ಲ ಯೋಜನೆಗಳನ್ನು ಸಂಸ್ಮರಣ ದಿವಸದಂದೇ ನಡೆಸಲು ಸಮಿತಿ ತೀರ್ಮಾನಿಸಿ ಕಾರ್ಯಪ್ರವೃತ್ತವಾಗಿದೆ. 9-9-90ರಂದು ಸಂಸ್ಮರಣ

ಸಮಿತಿ ಮತ್ತು ಬಿ ಎಂ. ಶ್ರೀ. ಪ್ರತಿಷ್ಠಾನಗಳು ಅವರ ಕೆಲವು ಕನಸುಗಳನ್ನು ಕಾರ್ಯರೂಪಕ್ಕೆ ತಂದುವು.

ಸಾವಿತ್ರಮ್ಮ ಸಾಹಿತ್ಯ ಪ್ರಶಸ್ತಿ : ಇದು ದಿವಂಗತ ಸೀತಾರಾಮಯ್ಯನವರೇ ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದ 12 ಸಾವಿರ ರೂ.ಗಳ ದತ್ತಿನಿಧಿ ಕಾರ್ಯಕ್ರಮ. ಪ್ರತಿ ವರ್ಷ ಅನುಕ್ರಮವಾಗಿ ಮಹಿಳಾ ಸೃಜನೇತರ ಸಾಹಿತ್ಯ ಮತ್ತು ಮಕ್ಕಳ ಸಾಹಿತ್ಯಕ್ಕೆ 1,000-00 ರೂ.ಗಳ ಈ ಪ್ರಶಸ್ತಿಯನ್ನು ಕೊಡುವ ಯೋಜನೆಯನ್ನು ಅಂದು ಪ್ರತಿಷ್ಠಾನ ಘೋಷಿಸಿತು. ಮೊದಲಿಗೆ 1989-90ರಲ್ಲಿ ಪ್ರಕಟವಾಗಿರುವ ಉತ್ತಮ ಮಹಿಳಾ ಸೃಜನೇತರ ಕೃತಿಗೆ ಈ ಪ್ರಶಸ್ತಿ ನೀಡಲು ತೀರ್ಮಾನಿಸಲಾಗಿದೆ.

ಹಸ್ತಪ್ರತಿ ಶಾಸ್ತ್ರ ತರಗತಿ : ಇದು ಪ್ರೊ ಎಂ. ವಿ. ಸೀ. ಅವರ ಬಹುದಿನಗಳ ಕನಸು. 1982ರಲ್ಲಿ ಪ್ರತಿಷ್ಠಾನ ನಡೆಸಿದ್ದ ಹಸ್ತಪ್ರತಿ ಶಾಸ್ತ್ರ ವಿಚಾರಗೋಷ್ಠಿಯಿಂದಲೂ ಈ ಯೋಜನೆಯನ್ನು ಈಡೇರಿಸಲು ಪ್ರಯತ್ನ ನಡೆಯುತ್ತ ಇತ್ತು. ಯೋಜನೆ ದೊಡ್ಡ ಪ್ರಮಾಣದಲ್ಲಿದ್ದು ಆರ್ಥಿಕ ಕೊರತೆಯಿಂದ ಸಾಧ್ಯವಾಗಿರಲಿಲ್ಲ. ಆಸಕ್ತರಿಗೆ ಇದರ ಲಾಭವನ್ನು ಆದಷ್ಟು ಬೇಗ ಒದಗಿಸುವ ದೃಷ್ಟಿಯಿಂದ ಯೋಜನೆಯ ಸ್ವರೂಪವನ್ನು ಬದಲಿಸಿ ಈ ವರ್ಷದಿಂದಲೇ ಪ್ರಾರಂಭಿಸಲು ಪ್ರತಿಷ್ಠಾನ ತೀರ್ಮಾನಿಸಿ ಅಂದೇ ತರಗತಿಗಳ ಉದ್ಘಾಟನೆ ಮಾಡಲಾಯಿತು. ನಮ್ಮ ನಿರೀಕ್ಷೆಗೂ ಮೀರಿ ಆಸಕ್ತರು ಈ ಯೋಜನೆಯ ಲಾಭ ಪಡೆಯುತ್ತಿದ್ದಾರೆ. ನುರಿತ ಅಧ್ಯಾಪಕರ ನೆರವಿನಿಂದ ತರಗತಿಗಳನ್ನು ನಡೆಸಲಾಗುತ್ತಿದೆ. ಇತ್ತೀಚೆಗೆ ಹಸ್ತಪ್ರತಿಶಾಸ್ತ್ರ ತರಗತಿ ವಿದ್ಯಾರ್ಥಿಗಳು ಮೈಸೂರಿನ ಪ್ರಾಚ್ಯವಸ್ತು ಸಂಗ್ರಹಾಲಯ, ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ವಿಭಾಗ ಮತ್ತು ಮೇಲುಕೋಟೆಯ ಸಂಸ್ಕೃತ ಅಕಾಡೆಮಿಗಳಿಗೆ ಭೇಟಿ ಕೊಟ್ಟು ಹೆಚ್ಚಿನ ಅನುಭವಗಳನ್ನು ಪಡೆದರು.

ಪ್ರತಿಷ್ಠಾನದ ಈ ಎರಡು ಯೋಜನೆಗಳನ್ನು ಡಾ|| ಜಿ. ಎಸ್. ಶಿವರುದ್ರಪ್ಪ ಅವರು ಉದ್ಘಾಟನೆ ಮಾಡುವುದರ ಜೊತೆಗೆ ಎಂ. ವಿ. ಸೀತಾರಾಮಯ್ಯನವರು ಪ್ರಕಟಿಸಲು ಉದ್ದೇಶಿಸಿದ್ದ, "ಪ್ರತಿಮಾಗೃಹ" ಮತ್ತು "ಕಾವ್ಯಾಲಾಪ" ಎಂಬ ರಾಘವ ಪ್ರಕಾಶನ ಪ್ರಕಟಿಸಿದ ಎರಡು ಕೃತಿಗಳನ್ನೂ ಪ್ರತಿಷ್ಠಾನ ಪ್ರಕಟಿಸಿದ "ಕುಮಾರವ್ಯಾಸ ಭಾರತ ಸಂಗ್ರಹ"ವನ್ನೂ ಬಿಡುಗಡೆ ಮಾಡಿದರು. ಡಾ|| ಜಿ. ಎಸ್. ಎಸ್. ಅವರು ಎಂ. ವಿ. ಸೀ. ಅವರನ್ನು ಸ್ಮರಿಸುತ್ತಿರುವ ಈ ಮಾದರಿ ಅತ್ಯಂತ ಸ್ತುತ್ಯರ್ಹವಾದದ್ದು ಎಂದರು.

ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು "ಕುಮಾರವ್ಯಾಸ ಭಾರತ ಸಂಗ್ರಹ"ವನ್ನು ಪರಿಚಯ ಮಾಡುತ್ತಾ ಎಂ. ವಿ. ಸೀ. ಅವರ ಪಾಂಡಿತ್ಯ ಪ್ರಜ್ಞೆಯನ್ನು ಶ್ಲಾಘಿಸಿದರು. ಇದು ಎಂ. ವಿ. ಸೀ. ಅವರ ಎರಡು ವರ್ಷಗಳ ಸಾಧನೆಯ ಫಲ. ಈ ಗ್ರಂಥಕ್ಕೆ ಸವಿವರವಾದ ಪೀಠಿಕೆಯನ್ನು ಬರೆಯುವ ಮೊದಲೇ ಅವರು ಇಲ್ಲ

ವಾದುದು ದುರ್ವಿಧಿ. ಆದರೆ ಈ ಕೊರತೆಯನ್ನು ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು ನೀಗಿಸಿ ಉಪಕರಿಸಿದ್ದಾರೆ. ಪ್ರತಿಮಾಗೃಹ ಮತ್ತು ಕಾವ್ಯಾಲಾಪ ಗಳನ್ನು ವಿದ್ವಾನ್ ಎನ್. ರಂಗನಾಥ ಶರ್ಮಾ ಅವರು ಪರಿಚಯಿಸಿದರು. ಪ್ರತಿಮಾ ಗೃಹವು ಗುರು-ಹಿರಿಯರನ್ನು ಕುರಿತ ಸುಂದರ ವ್ಯಕ್ತಿಚಿತ್ರ ಸಂಕಲನ. ಇದರಲ್ಲಿ ಕೆಲವರ ರೇಖಾಚಿತ್ರಗಳನ್ನು ದಿವಂಗತರು ಬಿಡಿಸಿದ್ದಾರೆ. ಉಳಿದವನ್ನೂ ಬಿಡಿಸುವ ಉದ್ದೇಶವಿತ್ತಾದರೂ ದುರ್ವಿಧಿಯಿಂದ, ಸಾಧ್ಯವಾಗದುದರಿಂದ ಭಾವಚಿತ್ರಗಳನ್ನು ಮುದ್ರಿಸಿದೆ. ಕಾವ್ಯಾಲಾಪ "ಮಂಕು ತಿಮ್ಮನ ಕಗ್ಗ"ದ ಮಾದರಿಯ ದಿವಂಗತರ ಜೀವನಾನುಭವದಿಂದ ಮೂಡಿಬಂದ ಮುಕ್ತಕ ಸಂಗ್ರಹ. ಸುಮಾರು ೨೮೩ ಪದ್ಯ ಗಳಲ್ಲಿ ಜೀವನದರ್ಶನ ಅಡಕವಾಗಿದೆ. ಇದರಿಂದ ಆಯ್ದ ಕೆಲವು ಪದ್ಯಗಳನ್ನು ಪ್ರೊ ಎಚ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರು ತಮ್ಮದೇ ಆದ ಕಗ್ಗದ ವಾಚನದ ಧಾಟಿಯಲ್ಲಿ ಸೊಗಸಾಗಿ ಹಾಡಿದರು.

ಗೌರವಾಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಂಸ್ಮರಣ ಕಾರ್ಯಕ್ರಮದಲ್ಲಿ ಪ್ರಾರಂಭದಲ್ಲಿ ಅಧ್ಯಕ್ಷರಾದ ಪ್ರೊ|| ಎಲ್.ಎಸ್. ಶೇಷಗಿರಿ ರಾವ್ ಅವರು ಸ್ವಾಗತ ಕೋರಿದರು.

ಪ್ರತಿತಿಂಗಳೂ ಸಹೃದಯಗೋಷ್ಠಿ : ಎಂ. ವಿ. ಸೀ. ಸಂಸ್ಮರಣ ಸಮಿತಿ ಯೊಂದಿಗೆ ಸೇರಿ ನಡೆಸುತ್ತಿರುವ ಎಂ. ವಿ. ಸೀ. ಸಂಸ್ಮರಣ ವಿಶೇಷೋಪನ್ಯಾಸಮಾಲೆ ಯಲ್ಲಿ ಇತ್ತೀಚೆಗೆ ಎರಡು ಕಾರ್ಯಕ್ರಮಗಳು ನಡೆದಿವೆ. ಕನ್ನಡ ಶಕ್ತಿ ಕೇಂದ್ರ ಮತ್ತು ಸಾಹಿತಿ ಕಲಾವಿದರ ಬಳಗದ ಆಶ್ರಯದಲ್ಲಿ ಡಾ|| ಎಂ. ಚಿದಾನಂದಮೂರ್ತಿ ಅವರು "ಸಂಶೋಧನಾ ಕ್ಷೇತ್ರಕ್ಕೆ ಎಂ. ವಿ. ಸೀ. ಅವರ ಕೊಡುಗೆ" ಕುರಿತು ಹಾಗೂ ಸಾಹಿತ್ಯ ಸಂಗಮದ ಆಶ್ರಯದಲ್ಲಿ "ಎಂ. ವಿ. ಸೀ. ಅವರ ಸಾಹಿತ್ಯದಲ್ಲಿ ಮಹಿಳೆ" ಕುರಿತು ಶ್ರೀಮತಿ ಇಂದಿರಾ ಹೆಗಡೆ ಮತ್ತು ಜಯಮ್ಮ ಕರಿಯಣ್ಣ ಅವರುಗಳು ಡಾ|| ಎಚ್. ಎಸ್. ಪಾರ್ವತಿ ಅವರ ಅಧ್ಯಕ್ಷತೆಯಲ್ಲಿ ಉಪನ್ಯಾಸ ನೀಡಿದ್ದಾರೆ.

## ದತ್ತಿ ಉಪನ್ಯಾಸ

ದಿನಾಂಕ 27-11-90ರಂದು ಡಾ|| ಚಂದ್ರಶೇಖರ ಶರ್ಮ ಸ್ಮಾರಕ ದತ್ತಿ ಉಪ ನ್ಯಾಸವನ್ನು ಡಾ|| ಓ.ಎಲ್. ನಾಗಭೂಷಣಸ್ವಾಮಿ ಅವರು ನಡೆಸಿಕೊಟ್ಟರು. "ಓದಿನ ಪ್ರಕ್ರಿಯೆ" ಎಂಬ ವಿಷಯದ ಮೇಲೆ ನಡೆದ ಈ ಉಪನ್ಯಾಸ ಕಾರ್ಯಕ್ರಮಕ್ಕೆ ಅಧ್ಯಕ್ಷ ರಾದ ಪ್ರೊ|| ಎಲ್. ಎಸ್. ಶೇಷಗಿರಿ ರಾವ್ ಅವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 29-11-90ರಂದು ಜಿ. ಓ. ರಾಜರತ್ನಂ ಹಾಗೂ ವೆಂಕಟರಂಗಪ್ಪ ಸ್ಮಾರಕ ದತ್ತಿಗಳ ಅಂಗವಾಗಿ ಡಾ|| ಕೃಷ್ಣ ಪರಮೇಶ್ವರ ಭಟ್ಟ ಅವರು "ಮಾಸ್ತಿಯವರ ಕತೆಗಳ ಭಾಷೆ" ಕುರಿತು ಉಪನ್ಯಾಸ ನೀಡಿದರು.

## ವಸ್ತು ಸಂಗ್ರಹ

**ಮಹಾಭಾರತವನ್ನು ಕುರಿತ ಐದು ದಿನಗಳ ಸಮ್ಮೇಳನ:** ನಗರದ ಮಿಥಿಕ್ ಸೊಸೈಟಿಯಲ್ಲಿ 21-9-90 ರಿಂದ 26-9-90ರ ವರೆಗೆ ನಡೆಯಿತು. ಜೀವನ ಸಾಹಿತ್ಯ ಮತ್ತು ಸಂಸ್ಕೃತಿಯ ಮೇಲೆ ಭಾರತೀಯ ಮಹಾಕಾವ್ಯವಾದ ಮಹಾಭಾರತ ಬೀರಿರುವ ಪ್ರಭಾವ-ಪ್ರೇರಣೆಗಳನ್ನು ಕುರಿತಂತೆ ನುರಿತ ವಿದ್ವಾಂಸರಿಂದ ಉಪನ್ಯಾಸಗಳಿದ್ದವು. ಭಾರತ ಪುರಾತತ್ತ್ವ ಸರ್ವೇಕ್ಷಣ ಇಲಾಖೆ ಮೊದಲಿಗೆ ಸೇರಿ ಮಹಾರತದ ಪ್ರಸಂಗಗಳನ್ನೂ ಚಿತ್ರಿಸಿರುವ ಶಿಲ್ಪಚಿತ್ರಗಳ ಪ್ರದರ್ಶನವನ್ನೂ ಈ ಉತ್ಸವ ಸಂದರ್ಭದಲ್ಲಿ ಏರ್ಪಡಿಸಿತ್ತು. ಅತ್ಯಂತ ಉಪಯುಕ್ತವಾಗಿದ್ದ ಈ ವಿಚಾರಗೋಷ್ಠಿ, ಉತ್ಸವಗಳು ಮಹಾಭಾರತದ ಸಾಂಸ್ಕೃತಿಕ ಮಹತ್ವವನ್ನು ಪರಿಚಯ ಮಾಡಿಕೊಡುವಲ್ಲಿ ಯಶಸ್ವಿಯಾದವು.

**ದ್ವಾರಕೆಯ ಇತ್ತೀಚಿನ ಶೋಧನೆಗಳು:** ಮಹಾಭಾರತದ ಕಾಲ ನಿರ್ಣಯಕ್ಕೆ ಇವು ಸಹಕಾರಿಯಾಗುವ ಬಗೆಗೆ ವಿಚಾರ ಮಾಡಬೇಕಾಗಿದೆ ಎಂದು ದ್ವಾರಕೆಯ ಶೋಧನೆಯ ಮುಖಂಡತ್ವ ವಹಿಸಿರುವ ಗೋವೆಯ ರಾಷ್ಟ್ರೀಯ ಸಾಗರ ವಿಜ್ಞಾನ ಹಾಗೂ ಶೋಧನಾ ಸಂಸ್ಥೆಯ ಪ್ರಾಂಶುಪಾಲರಾದ ಡಾ|| ಎಸ್. ಆರ್. ರಾವ್ ಅವರು ಇತ್ತೀಚೆಗೆ ಹೇಳಿದ್ದಾರೆ. ಅವುಗಳನ್ನು ಹೀಗೆ ಸಂಗ್ರಹಿಸಬಹುದು: ದ್ವಾರಕೆ ಮುಳುಗಿರುವುದಕ್ಕೆ ಈವರೆಗೆ ಕಾರಣ ತಿಳಿದಿಲ್ಲ. ಸಮುದ್ರ ಏರಿಕೆಯೊಂದೇ ಕಾರಣವಾಗಿರಲಾರದು. ಹಾಗಿದ್ದರೆ ಹತ್ತಿರದ ಸೋಮನಾಥವೂ ಮುಂಬಯಿ ಬಳಿಯ ಎಲಿಫೆಂಟವೂ ಮುಳುಗಬೇಕಾಗಿತ್ತು. ಆ ಬಗ್ಗೆ ಪುರಾವೆಗಳಿಲ್ಲ. ಆದರೆ ಎಲಿಫೆಂಟಾ ದ್ವೀಪದಲ್ಲಿ ಮತ್ತು ಪೂರ್ವ ಕರಾವಳಿಯಲ್ಲಿ ಕೆಲವು ಘಟ್ಟಗಳು ಮುಳುಗಿರುವ ಬಗ್ಗೆ ಸಾಕ್ಷ್ಯಗಳು ದೊರೆತಿವೆ. ಇದಕ್ಕೆ ಭೂಕುಸಿತವೂ ಕಾರಣವಿರಬಹುದು. ದ್ವಾರಕೆಯಲ್ಲಿ ಎರಡನೇಬಾರಿ ಪಟ್ಟಣ ಸಮುದ್ರದಡಿ ಮುಳುಗಿದಾಗ ಅಲ್ಲಿಯ ಜನರು ವಲಸೆ ಹೋಗಿರುವ ಬಗ್ಗೆ ಮಹಾಭಾರತದಲ್ಲಿ ಸಾಕ್ಷ್ಯ ದೊರೆಯುತ್ತದೆ. ಈ ಘಟನೆಗೂ ಪೂರ್ವಕರಾವಳಿಯಲ್ಲಿ ಕೆಲವು ಹೊಸ ಪಟ್ಟಣಗಳು ಸ್ಥಾಪನೆಯಾಗಿರುವುದಕ್ಕೂ ಸಂಬಂಧವಿರುವಂತಿದೆ.

**ರಾಷ್ಟ್ರೀಯ ಪ್ರಾಕೃತ ಸಮ್ಮೇಳನ:** ಹೊಸದಾಗಿ ಪ್ರಾರಂಭವಾಗಿರುವ ಬೆಂಗಳೂರಿನ ಪ್ರಾಕೃತ ಜ್ಞಾನ ಭಾರತಿ ಶಿಕ್ಷಣ ಟ್ರಸ್ಟ್ ಡಿಸೆಂಬರ್ 7, 8, 9ರಂದು ಮೂರು ದಿನಗಳ ಪ್ರಾಕೃತ ಭಾಷೆ ಸಾಹಿತ್ಯವನ್ನು ಕುರಿತ ರಾಷ್ಟ್ರಮಟ್ಟದ ಸಮ್ಮೇಳನ ಸಂಘಟಿಸಿತ್ತು. ಪ್ರಾಕೃತ ಕ್ರಿ. ಪೂ. ಕಾಲದ ಪ್ರಮುಖ ಭಾರತೀಯ ಭಾಷೆಯಾಗಿತ್ತು. ಸಂಸ್ಕೃತ ಶಿಷ್ಟ, ಧಾರ್ಮಿಕ, ಪಂಡಿತ ಭಾಷೆಯಾಗಿದ್ದರೆ ಪ್ರಾಕೃತ ಗ್ರಾಮೀಣ ಆಡು ಭಾಷೆಯಾಗಿತ್ತು. ಬೌದ್ಧ, ಜೈನ ಸಾಹಿತ್ಯವೆಲ್ಲವೂ ಸಾಮಾನ್ಯ

ಜನತೆಯ ಹತ್ತಿರಕ್ಕೆ ಹೋಗಬೇಕಾಗಿದ್ದುದರಿಂದ ಈ ಪ್ರಾಕೃತ ಭಾಷೆಯನ್ನೇ ಬಳಸಿಕೊಂಡಿರುವುದು ಐತಿಹಾಸಿಕ ಸತ್ಯ—ಕರ್ನಾಟಕಕ್ಕೂ ಪ್ರಾಕೃತಕ್ಕೂ ನಂಟು ಇದೆ. ಕಳೆದ ವರ್ಷವಷ್ಟೇ ಕಲಬುರ್ಗಿ ಜಿಲ್ಲೆಯ ಸನ್ನತಿಯ ಬಳಿ ಅಶೋಕನ ಪ್ರಾಕೃತ ಶಾಸನ ದೊರೆತಿದೆ. ಇದರ ಜೊತೆಗೆ ಇನ್ನೂ ಕೆಲವು ಶಾಸನಗಳಿವೆ. ಕನ್ನಡದ ಜೈನಕವಿಗಳ ಕೃತಿಗಳ ಗಂಭೀರ ಅಧ್ಯಯನಕ್ಕೆ ಪ್ರಾಕೃತ ಮೂಲಕೃತಿಗಳ ಪರಿಚಯ ಬೇಕಾಗಿರುವುದರಿಂದ ಪ್ರಾಚೀನ ಕನ್ನಡ ಸಾಹಿತ್ಯದ ಅಧ್ಯಯನಕ್ಕೆ ಸಂಸ್ಕೃತ ಹೇಗೋ ಪ್ರಾಕೃತವೂ ಹಾಗೆಯೇ.

ಈ ಹಿನ್ನೆಲೆಯಲ್ಲಿ ಸಮ್ಮೇಳನ ಅಳಿಸಿಹೋಗಿರುವ ಪ್ರಾಕೃತ ಅಧ್ಯಯನದತ್ತ ವಿದ್ವಾಂಸರಲ್ಲಿ ಹೊಸ ಬೆಳಕನ್ನು ಚೆಲ್ಲಲು ಸಹಕಾರಿಯಾಗಿದೆ. ಅಧ್ಯರ ನೆರವಿನಿಂದ ನಡೆದ ಈ ಸಮ್ಮೇಳನ ಚರ ಸಾಹಿತ್ಯ ಸಮ್ಮೇಳನಗಳಷ್ಟೇ ರಂಜನೀಯವಾಗಿತ್ತು. ಪ್ರಾಕೃತ—ಕನ್ನಡದ ಪ್ರಸಿದ್ಧ ಸಂಶೋಧಕರಾದ ಡಾ॥ ಆ. ನೆ. ಉಪಾಧ್ಯೆ ಅವರ ಹೆಸರನ್ನು ವೇದಿಕೆಗೆ ಇಟ್ಟದ್ದುದು ಅತ್ಯಂತ ಸೂಕ್ತವಾಗಿತ್ತು. ಪ್ರಾಕೃತ ಶಾಸನ, ಪುಸ್ತಕಗಳ ಪ್ರದರ್ಶನ, ಪ್ರಾಕೃತ ಭಾಷೆ–ಸಾಹಿತ್ಯದಲ್ಲಿ ಕೆಲಸ ಮಾಡಿರುವ ಗಣ್ಯರಿಗೆ ಸನ್ಮಾನ ಇತ್ಯಾದಿ ಉಪಯುಕ್ತ ಯೋಜನೆಗಳೊಂದಿಗೆ ಪ್ರಾಕೃತ ಭಾಷೆ ಸಾಹಿತ್ಯಗಳ ಸಂಸ್ಕೃತಿ, ಸಮೂಹ ಧರ್ಮ, ಚರಭಾಷೆಗಳ ಮೇಲೆ ಬೀರಿರುವ ಪ್ರಭಾವ ಪ್ರೇರಣೆಗಳನ್ನೂ ಪ್ರಾಕೃತ ಭಾಷೆಯ ಇಂದಿನ ಕವಿತೆಯಗತ್ಯವನ್ನೂ ಕುರಿತಂತೆ ಅನೇಕ ವಿಚಾರಪೂರಿತ ಲೇಖನಗಳು ಈ ಗೋಷ್ಠಿಯಲ್ಲಿ ಮಂಡನೆಯಾದವು. ಕನ್ನಡ ಮತ್ತು ಪ್ರಾಕೃತ ಸಂಬಂಧದ ಒಂದು ಪ್ರತ್ಯೇಕ ಗೋಷ್ಠಿಯೇ ಇತ್ತು.

ಪ್ರಾಕೃತ ಭಾಷೆ ಸಾಹಿತ್ಯವನ್ನು ಶಾಲೆ ಕಾಲೇಜುಗಳಲ್ಲಿ ಬೋಧನೆಗೆ ತರಬೇಕೆಂದು ಸಮ್ಮೇಳನ ಒತ್ತಾಯಿಸಿತು. ಫ್ರೆಂಚ್, ಗ್ರೀಕ್, ಲ್ಯಾಟಿನ್ ಭಾಷೆಗಳನ್ನು ಬೋಧಿಸಲು ಅವಕಾಶವಿರುವ ಭಾರತದಲ್ಲಿ ಭಾರತದ ಸಾಂಸ್ಕೃತಿಕ ಅಧ್ಯಯನಕ್ಕೆ ಅತ್ಯಗತ್ಯವಾಗಿರುವ ಸಂಸ್ಕೃತ, ಪ್ರಾಕೃತಗಳಂತಹ ಪ್ರಾಚೀನ ಸಂಪನ್ನ ಭಾಷೆಗಳನ್ನು ಬೋಧಿಸುವ ಬಗೆಗೆ ಶಿಕ್ಷಣ ತಜ್ಞರು ನಿರ್ಲಕ್ಷರಾಗಿರುವುದು ನಮ್ಮಲ್ಲಿರುವ ಸಂಸ್ಕೃತಿ ಅರಿವಿನ ಕೊರತೆಯನ್ನು ಎತ್ತಿ ತೋರಿಸುತ್ತದೆ.

**ಕನ್ನಡ ಸಮ್ಮೇಳನ :** ಬೀದರ್‌ನಲ್ಲಿ ಡಿಸೆಂಬರ್ 22, 23ರಂದು ನಡೆದ ಕನ್ನಡ ಶಕ್ತಿ ಕೇಂದ್ರದ ಮಹಾಧಿವೇಶನ ಕನ್ನಡದ ಏಳಿಗೆಯ ದೃಷ್ಟಿಯಿಂದ ಮಹತ್ವಪೂರ್ಣವಾದದ್ದು. ಕನ್ನಡ–ಕನ್ನಡಿಗ ಕರ್ನಾಟಕದ ಸಮಸ್ಯೆಗಳ ನಿವಾರಣೆಗೆ ಶಕ್ತಿಶಾಲಿ ಸಂಘಟನೆಯಾಗಿ ಬೆಳೆಯುತ್ತಿರುವ ಶಕ್ತಿಕೇಂದ್ರ ಪ್ರತಿವರ್ಷ ನಡೆಸುತ್ತಿರುವ ಸಮ್ಮೇಳನ ಜನರಲ್ಲಿ ಈ ಜಾಗೃತಿಯನ್ನು ಮೂಡಿಸುವ ಹಿನ್ನೆಲೆಯಲ್ಲಿ ಮಹತ್ವದ ಪಾತ್ರವನ್ನೂ ವಹಿಸುತ್ತಿದೆ. ಏಕೀಕರಣದ ಅನಂತರ ಸಮಸ್ಯೆಗಳು ಬಗೆಹರಿಯುತ್ತವೆ

ಎಂದು ನಂಬಿದ್ದ ಕನ್ನಡಿಗರಿಗೆ 25 ವರ್ಷಗಳಾದರೂ ಇದ್ದ ಸಮಸ್ಯೆಗಳ ಜೊತೆಗೆ ಇನ್ನಷ್ಟು ಸೇರಿಕೊಂಡು ಕರ್ನಾಟಕದಲ್ಲಿ ಕನ್ನಡಿಗರು ಬದುಕುವುದೇ ಕಷ್ಟ ಕರವೆನ್ನುವಷ್ಟರ ಮಟ್ಟಿಗೆ ಸಮಸ್ಯೆಗಳು ಇನ್ನಷ್ಟು ಬಿಗಡಾಯಿಸಿರುವುದು ಕನ್ನಡಿಗರಲ್ಲಿ ಒಂದುರೀತಿಯ ಪ್ರತಿಕಾರದ ಮನೋಭಾವವನ್ನು ಬೆಳೆಸುತ್ತಿದೆ ಎನ್ನಿಸುತ್ತದೆ. ಸ್ವಾರ್ಥಪರ ರಾಜಕಾರಣಿಗಳ ಮತ್ತು ಆಡಳಿತ ವ್ಯವಸ್ಥೆಯ ಕನ್ನಡ ಪರ ಹೇಳಿಕೆಗಳ ಪ್ರಚಾರ ತಂತ್ರಗಳಷ್ಟೇ ಎನಿಸಿಬಿಟ್ಟಿವೆ. ಈ ಹಿನ್ನೆಲೆಯಲ್ಲಿ ಈ ಅಧಿವೇಶನ ನಡೆದು ಕನ್ನಡಿಗರಲ್ಲಿ ಜಾಗೃತಿಯನ್ನು ಮೂಡಿಸಲು ನೆರವಾಗಿದೆ. ಒಟ್ಟಾರೆ ಅಧಿವೇಶನದಲ್ಲಿ ಕೇಳಿಬಂದ ಒಂದು ಅಂಶವೆಂದರೆ, ಕನ್ನಡಿಗರ ಹಿತಾಸಕ್ತಿಗೆ ಸೂಕ್ತ ಕ್ರಮ ಕೈಗೊಳ್ಳದಿದ್ದರೆ ಚಳವಳಿ ಅನಿವಾರ್ಯವಾಗಬೇಕಾಗುತ್ತದೆಂಬುದು. ಅಧಿವೇಶನ ಕೈಗೊಂಡ ಹಲವಾರು ನಿರ್ಣಯಗಳು ಸರ್ಕಾರ ಶೀಘ್ರವಾಗಿ ಪರಿಶೀಲಿಸಬೇಕಾದವುಗಳು. ಕರ್ನಾಟಕಕ್ಕೆ ಶಿಖರಪ್ರಾಯವಾಗಿರುವ ಆದರೆ ಅನೇಕ ಸವಲತ್ತುಗಳಿಂದ ವಂಚಿತವಾಗಿರುವ, ಕನ್ನಡೇತರರ ಪ್ರತ್ಯೇಕತಾಧೋರಣೆಯಿಂದ ಕನ್ನಡ ಸಮಸ್ಯೆಯಾಗಿರುವ ಬೀದರ್‌ನಲ್ಲಿ ಈ ಅಧಿವೇಶನ ನಡೆದಿರುವುದು ಬೀದರ್‌ನ ಕನ್ನಡಿಗರಿಗೆ ಉತ್ಸಾಹವನ್ನೂ ಸಂತಸವನ್ನೂ ತಂದಿದೆ.

**ಕನ್ನಡ ಉಳಿಸಿ ವರ್ಷ :** ಇದೇ ಸಂದರ್ಭದಲ್ಲಿ ಶಕ್ತಿಕೇಂದ್ರ ಘೋಷಿಸಿರುವ ನವೆಂಬರ್ 1990ರಿಂದ ಅಕ್ಟೋಬರ್ 21, 1991ರ ವರೆಗಿನ ಕನ್ನಡ ಉಳಿಸಿ ವರ್ಷಾಚರಣೆಯ ವಿವಿಧ ಕಾರ್ಯಕ್ರಮಗಳನ್ನು ಶಕ್ತಿಕೇಂದ್ರ ನಡೆಸುತ್ತಿದೆ. ಅನೇಕ ಸಂಘಸಂಸ್ಥೆಗಳು ಜಿಲ್ಲಾ ಘಟಕಗಳು ಅತ್ಯಂತ ಕ್ರಿಯಾತ್ಮಕವಾಗಿ ಆಚರಿಸುತ್ತಿವೆ. ಶಕ್ತಿಕೇಂದ್ರ ಪ್ರಕಟಿಸಿರುವ ಕನ್ನಡ-ಕನ್ನಡಿಗ-ಕರ್ನಾಟಕ ಕನ್ನಡನಾಡು ನುಡಿ ನಾಡವರನ್ನು ಕುರಿತಂತೆ ಸಮರ್ಥ ಚಿತ್ರವನ್ನು ಕೊಡುವ ಉತ್ತಮ ಮಾಹಿತಿ ಪುಸ್ತಕವಾಗಿದೆ.

**ಅರುವತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಈ ಬಾರಿ ಡಿಸೆಂಬರ್ 28, 29, 30ರಂದು ಸಾಂಸ್ಕೃತಿಕ ರಾಜಧಾನಿ ಮೈಸೂರಿನಲ್ಲಿ ನಡೆಯಿತು. ಇದು 60ನೆಯ ಸಮ್ಮೇಳನವಾಗಿರುವುದರಿಂದ ವಜ್ರಮಹೋತ್ಸವ ಸಮ್ಮೇಳನವೂ ಪರಿಷತ್ತು ಅಮೃತೋತ್ಸವವನ್ನು ಆಚರಿಸುತ್ತಿರುವುದರಿಂದ ಅಮೃತೋತ್ಸವ ಸಮ್ಮೇಳನವೂ ಆಗಿತ್ತು. ಸಮ್ಮೇಳನಾಧ್ಯಕ್ಷರಾದ ಕೆ. ಎಸ್. ನ—ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ತಮ್ಮ ಕಾವ್ಯ ಕೃಷಿಯ ಬಗೆಗೆ ಸಾಕಷ್ಟು ದೀರ್ಘವಾಗಿ ಚಿಂತನೆ ನಡೆಸಿದ್ದಾರೆ. ಕಾಲ ಕಾಲಕ್ಕೆ ಕನ್ನಡ ಸಾಹಿತ್ಯದಲ್ಲಿ ನಡೆದ ಬದಲಾವಣೆಗಳು ತಮ್ಮ ಮೇಲೆ ಬೀರಿದ ಪ್ರಭಾವಗಳನ್ನೂ ಕನ್ನಡ ಸಾಹಿತ್ಯದ ಹಿರಿಮೆ-ಗರಿಮೆಗಳನ್ನೂ ವಿವರಿಸುತ್ತಾ ಕನ್ನಡದ ಪ್ರಚಲಿತ ಸಮಸ್ಯೆಗಳತ್ತ ಬೆಳಕಿನ ಕಿರಣ ಬೀರಿದ್ದಾರೆ. ಸದಾ

ನಗುಮೊಗದ ಸಂತೋಷ, ಸಂತೃಪ್ತಿ ನೆಮ್ಮದಿಯ ಜೀವನಾನುಭವವನ್ನು ತಮ್ಮ ಕೃತಿಗಳಲ್ಲಿ ಸತ್ವಪೂರ್ಣವಾಗಿ ದುಡಿಸಿಕೊಂಡ ಕವಿ ಇಂದು ಜನರಲ್ಲಿ ಅದರ ಕೊರತೆಯನ್ನೂ ಕಂಡಿದ್ದಾರೆ. ದೇಶವು ದೇಶದ ಪ್ರತ್ಯೇಕತೆಯು, ಸ್ವಾರ್ಥದ ಜನರ ಕೈಗೆ ಸಿಕ್ಕಿ ನರಳುತ್ತಿದ್ದು ಸಾಹಿತಿಗಳು ತಮ್ಮ ಲೇಖನಿಯಿಂದ ಇದನ್ನು ಹೋಗಲಾಡಿಸಲು ಪ್ರಯತ್ನಿಸಬೇಕೆಂದು ಕರೆ ಕೊಟ್ಟಿದ್ದಾರೆ. ಸಂಶೋಧನೆ, ರಾಷ್ಟ್ರೀಯ ಸಮಸ್ಯೆಗಳು, ಕರ್ನಾಟಕ ಸಮಸ್ಯೆಗಳು, ಹೊಸ ಅಧ್ಯಯನಗಳಾದ ಚಿಂತನಶೀಲ ವಿಷಯಗಳ ಬಗೆಗೆ ವಿಚಾರಗೋಷ್ಠಿಗಳನ್ನು ಸಮ್ಮೇಳನದಲ್ಲಿ ಅಳವಡಿಸಿದ್ದು ಪ್ರಮುಖ ಸಾಹಿತಿ ಗಣ್ಯರನ್ನು ಸನ್ಮಾನಿಸಿರುವುದು ಸಾಹಿತ್ಯ ಸಂವಾದದಂಥ ಚರ್ಚಾವೇದಿಕೆಯನ್ನು ನಡೆಸಿದ್ದು ಈ ಬಾರಿಯ ಸಮ್ಮೇಳನದ ವಿಶೇಷಗಳು.

ವೇದಿಕೆಗೆ ಬಿ. ಎಂ. ಶ್ರೀ ಹೆಸರನ್ನೂ ಮಂಟಪಕ್ಕೆ ತಿರುಮಲಾಂಬ ಹೆಸರನ್ನು ಮಹಾದ್ವಾರಕ್ಕೆ ನಾಲ್ವಡಿಕೃಷ್ಣರಾಜ ಒಡೆಯರ್ ಹೆಸರನ್ನೂ ಇಟ್ಟಿದ್ದುದು ಮೈಸೂರಿನ ಸಾಹಿತ್ಯ ಕೊಡುಗೆಯನ್ನು ನೆನಪಿಸುವಂತಿದ್ದು ಸಮ್ಮೇಳನಕ್ಕೆ ವಿಶೇಷ ಮೆರುಗನ್ನು ತಂದಿತು. ಸಮ್ಮೇಳನಾಧ್ಯಕ್ಷರೇ ಆಗಬೇಕಾಗಿದ್ದ ಮೈಸೂರಿನವರೇ ಆಗಿದ್ದ ದಿವಂಗತ ಪ್ರೊ॥ ಎಂ. ವಿ. ಸೀತಾರಾಮಯ್ಯನವರನ್ನೂ ಪ್ರಧಾನವಾಗಿ ಸ್ಮರಿಸುವಂತಿದ್ದರೆ ಸಮ್ಮೇಳನ ಇನ್ನಷ್ಟು ಅರ್ಥವನ್ನು ಪಡೆದುಕೊಳ್ಳುತ್ತಿತ್ತು ಎಂಬ ಮಾತನ್ನು ಇಲ್ಲಿ ಹೇಳಿದರೆ ಅಪ್ರಸ್ತುತವಾಗಲಾರದು ಎಂದುಕೊಂಡಿದ್ದೇವೆ.

**ನಿರ್ಣಯಗಳು :** ಪ್ರತಿ ಸಮ್ಮೇಳನಗಳಲ್ಲೂ ಬಹಿರಂಗ ಅಧಿವೇಶನದಲ್ಲಿ ನಿರ್ಣಯಗಳಾಗುತ್ತವೆ. ಆದರೆ ಇದರಿಂದ ಯಾವ ರೀತಿಯ ಪರಿಣಾಮ–ಪ್ರಭಾವವಾಗುತ್ತದೆಂಬ ಬಗೆಗೆ ಉತ್ತರ ಸಿಗುವುದಿಲ್ಲ. ಈ ಬಾರಿಯೂ ಸಮ್ಮೇಳನ ಬಹಿರಂಗ ಅಧಿವೇಶನದಲ್ಲಿ ಕನ್ನಡ ಗಡಿ, ಭಾಷೆ, ಉದ್ಯೋಗ–ರೈಲ್ವೆ ಇತ್ಯಾದಿ ವಿಷಯಗಳ ಬಗೆಗೆ ನಿರ್ಣಯಗಳನ್ನು ಕೈಗೊಳ್ಳಲಾಗಿದೆ.

ಈ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರುವತ್ತ ಪರಿಷತ್ತು ತೀವ್ರವಾಗಿ ಆಲೋಚಿಸಬೇಕು. ಸಮ್ಮೇಳನ ನಡೆದ ಹೊಸದರಲ್ಲಿ ಸರ್ಕಾರಕ್ಕೆ ನಿರ್ಣಯ ಕಳಿಸುವುದೋ ಪತ್ರ ಬರೆಯುವುದೋ ನಡೆಯುತ್ತದಾದರೂ ಅಷ್ಟರಿಂದಲೇ ಕಾರ್ಯ ಸಾಧನೆಯಾಗುವುದಿಲ್ಲ. ಆದ್ದರಿಂದ ನಿರ್ಣಯಗಳನ್ನೇ ಕಾರ್ಯಗತಗೊಳಿಸುವುದಕ್ಕೆ ಒಂದು ಪ್ರತ್ಯೇಕ ಕಾರ್ಯಾಲಯವನ್ನು ಪರಿಷತ್ತು ವ್ಯವಸ್ಥೆ ಮಾಡಬೇಕು. ಈ ವಿಭಾಗಕ್ಕೆ ಸಮ್ಮೇಳನಾಧ್ಯಕ್ಷರೇ ಅಧ್ಯಕ್ಷರಾಗಿದ್ದು ಪರಿಷತ್ ಅಧ್ಯಕ್ಷರು ಕಾರ್ಯಾಧ್ಯಕ್ಷರಾಗಿರಬೇಕು. ನಿರ್ಣಯಗಳ ವಿಷಯಗಳಲ್ಲಿ ಪರಿಣತರಾದವರ ಒಂದು ಸಮಿತಿ ರಚಿಸಿ ಸಭೆಗಳಲ್ಲಿ ಚರ್ಚಿಸಿ ಅವುಗಳನ್ನು ಈಡೇರಿಸಬಹುದಾದ ರೀತಿ–ನೀತಿಗಳನ್ನು ಸಿದ್ಧಪಡಿಸಿ

ಸಂಬಂಧಿಸಿದ ಇಲಾಖೆಗಳಿಗೆ ಸರ್ಕಾರ ಬರೆದು ಈಡೇರಿಸುವ ವರೆಗೆ ಪದೇ ಪದೇ ಒತ್ತಾಯಿಸುವ ಕಾರ್ಯ ಆಗಬೇಕು. ಇದಕ್ಕೆ ಪರಿಷತ್ತಿನ ಈಗಿನ ಕಾರ್ಯಾಲಯವೇ ಆಗಬಹುದಾದರೂ ಇತರ ಕಾರ್ಯಗಳ ನಡುವೆ ಇದರ ನಿರಂತರ ಮೇಲ್ವಿಚಾರಣೆ ಸಾಧ್ಯವಾಗದುದರಿಂದ ಪ್ರತ್ಯೇಕ ವಿಭಾಗವನ್ನೇ ತೆರೆಯಬೇಕು. ಪರಿಷತ್ತಿನ ಒಬ್ಬ ಕಾರ್ಯದರ್ಶಿಯ ಮೇಲ್ವಿಚಾರಣೆಯಲ್ಲಿ ಈ ಕಾರ್ಯ ನಿರಂತರವಾಗಿ ನಡೆಯುತ್ತಿರಬೇಕು. ಇದರಿಂದ ಸರ್ಕಾರಕ್ಕೂ ಒಂದು ರೀತಿಯ ಕನ್ನಡಪರವಾದ ಧೋರಣೆ ರೂಢಿಗೆ ಬರುತ್ತದೆಯಲ್ಲದೆ ಕನ್ನಡ ವಿರೋಧಿ ನೀತಿಗಳನ್ನು ರೂಪಿಸುವುದಕ್ಕೆ ನಿಯಂತ್ರಣಕ್ಕೊಳಪಡುತ್ತದೆ. ಇಂಥ ಪ್ರಾತಿನಿಧಿಕ ಸಂಸ್ಥೆಯ ಒತ್ತಡವನ್ನು ಅಧಿಕಾರಿಗಳಾಗಲಿ ಮಂತ್ರಿಗಳಾಗಲಿ ನಿರಾಕರಿಸುವುದು ಕಷ್ಟವಾಗುತ್ತದಾದ್ದರಿಂದ ಕನ್ನಡ-ಕನ್ನಡಿಗ-ಕರ್ನಾಟಕದ ಹಿತದೃಷ್ಟಿ ಪರಿಣಾಮಕಾರಿಯಾಗಿ ಸಾಧ್ಯವಾಗುತ್ತದೆ. (ಈ ವಿಚಾರವನ್ನು ನಮ್ಮ ಜೂನ್ 90ರ ಸಂಚಿಕೆಯಲ್ಲಿಯೂ ಹೇಳಿದ್ದದನ್ನು ಇಲ್ಲಿ ಸ್ಮರಿಸಬಹುದು).

**ಪ್ರಾಚೀನ ಪರಂಪರೆ ಉಳಿಸಿ :** ಅಕ್ಟೋಬರ್ 30 "ಪ್ರಾಚೀನ ಪರಂಪರೆ ಉಳಿಸಿ" ದಿನವಾಗಿತ್ತು. ಕರ್ನಾಟಕ ಇತಿಹಾಸ ಅಕಾಡೆಮಿ ಕರ್ನಾಟಕದಾದ್ಯಂತ ಇತಿಹಾಸ ಸಂಸ್ಕೃತಿಯ ರಕ್ಷಣೆ ತಿಳುವಳಿಕೆಗಾಗಿ ಹಲವಾರು ಕಾರ್ಯಕ್ರಮಗಳನ್ನು ನಡೆಸುತ್ತದೆ. ಪ್ರತಿವರ್ಷ ಇತಿಹಾಸ ಸಮ್ಮೇಳನವನ್ನು ಸಂಘಟಿಸಿ ಯಶಸ್ವಿಯಾಗುತ್ತಿರುವ ಅಕಾಡೆಮಿ 30-11-90ರಂದು ಇತಿಹಾಸ ಪರಂಪರೆ ಉಳಿಸಿ ದಿನವನ್ನಾಗಿ ಆಚರಿಸಿತು. ಹಳೆಯ ನಾಣ್ಯ, ಕಲಾಕೃತಿ, ಶಾಸನ, ಕಾಗದಗಳು, ಓಲೆಗರಿಗಳು ಮಸೀದಿ, ಚರ್ಚ್, ದೇವಸ್ಥಾನ ಇವುಗಳೆಲ್ಲದರ ರಕ್ಷಣೆಗಾಗಿ ಈ ಉತ್ಸವ ಯಶಸ್ವಿಯಾಗಿ ನಡೆಯಿತು.

— o —

# ಅಭಿನಂದನೆ

**ನಮ್ಮ ಅಧ್ಯಕ್ಷರಿಗೆ ರಾಜ್ಯೋತ್ಸವ ಪ್ರಶಸ್ತಿ :** ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ|| ಎಲ್. ಎಸ್. ಶೇಷಗಿರಿ ರಾವ್ ಅವರ ಸಾಹಿತ್ಯ ಸೇವೆಯನ್ನು ಗೌರವಿಸಿ ರಾಜ್ಯ ಸರ್ಕಾರ ಈ ಬಾರಿಯ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿರುವುದು ಪ್ರತಿಷ್ಠಾನಕ್ಕೆ ಹೆಮ್ಮೆಯ ಸಂಗತಿಯಾಗಿದೆ. ಹಲವಾರು ಯೋಜನೆಗಳಲ್ಲಿ ತೊಡಗಿಕೊಂಡು ಬಿಡುವಿಲ್ಲದ ಸಾಹಿತ್ಯ ಚಟುವಟಿಕೆಯಲ್ಲಿ ತಲ್ಲೀನರಾಗಿರುವ ಪ್ರೊ|| ಶೇಷಗಿರಿ ರಾವ್ ಅವರನ್ನು ಈ ಸಂದರ್ಭದಲ್ಲಿ ಪ್ರತಿಷ್ಠಾನ 11–11–1990ರಂದು ನಡೆದ ಕಾರ್ಯಸಮಿತಿ ಸಭೆಯಲ್ಲಿ ಸದಸ್ಯರ ಪರವಾಗಿ ಅಭಿನಂದಿಸಿತು. ಡಾ|| ಎಂ. ಚಿದಾನಂದಮೂರ್ತಿ ಅವರು ಅಭಿನಂದನ ಭಾಷಣ ಮಾಡಿ ಶೇಷಗಿರಿರಾಯರ ವ್ಯಕ್ತಿತ್ವವನ್ನು ಸಾಹಿತ್ಯ ಸೇವೆಯನ್ನು ಕೆಲವೇ ಮಾತುಗಳಲ್ಲಿ ಸಮಗ್ರವಾಗಿ ಚಿತ್ರಿಸಿದರು.

**ಗಣ್ಯರಿಗೆ :** ಇವರ ಜೊತೆಯಲ್ಲಿ ಸರ್ಕಾರ ಇನ್ನೂ ಅನೇಕರಿಗೆ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಅವರಲ್ಲಿ ಪ್ರಸಿದ್ಧ ನಗೆ ಸಾಹಿತಿ ಶ್ರೀಮತಿ ಟಿ. ಸುನಂದಮ್ಮ, ಪ್ರಸಿದ್ಧ ಸಾಹಿತಿಗಳಾದ ಡಾ|| ರಾ.ಯ.ಧಾರವಾಡಕರ, ಎನ್.ಕೆ. ಕುಲಕರ್ಣಿ, ಮಳಲಿ ವಸಂತಕುಮಾರ್, ಪ್ರಮುಖ ಜನಪದ ಸಾಹಿತಿಗಳಾದ ಸಿಂಪಿ ಲಿಂಗಣ್ಣ, ಉತ್ತಮ ಶಿಕ್ಷಣ ತಜ್ಞರೂ, ಸಾಹಿತಿಗಳೂ ಆದ ಪ್ರೊ|| ಚಿ. ನ. ಮಂಗಳ, ಶಾಸನ ತಜ್ಞರಾದ ಡಾ|| ಜಿ. ಎಸ್. ಗಾಯಿ ಮುಂತಾದವರು ಪ್ರಮುಖರು. ಇವರೆಲ್ಲರೂ ಪ್ರತಿಷ್ಠಾನದ ಅಭಿಮಾನಿಗಳೂ ಹಿತೈಷಿಗಳೂ ಆಗಿದ್ದಾರೆ. ಈ ಎಲ್ಲ ಮಾನ್ಯರಿಗೆ ಪ್ರತಿಷ್ಠಾನ ಹಾರ್ದಿಕವಾದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

**ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ :** ಕನ್ನಡ ಪ್ರಮುಖ ದಲಿತ ಸಾಹಿತಿಗಳಾದ ಶ್ರೀ ದೇವನೂರು ಮಹಾದೇವ ಅವರ "ಕುಸುಮ ಬಾಲೆ"ಗೆ 1990ನೇ ವರ್ಷದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಕನ್ನಡ ಸಾಹಿತ್ಯದ ಇತ್ತೀಚಿನ ದಶಕದ ಮುಖ್ಯ ಲಕ್ಷಣವಾದ ಬಂಡಾಯದ ಧ್ವನಿಯನ್ನು ದಲಿತ ಪರಿಭಾಷೆಯಲ್ಲಿ ಅತ್ಯಂತ ಅರ್ಥಪೂರ್ಣವಾಗಿ ವ್ಯಕ್ತಪಡಿಸಿರುವ ಶ್ರೀ ದೇವನೂರು ಮಹಾದೇವ ಅವರು ದಲಿತ ಸಾಹಿತ್ಯಕ್ಕೆ ಸಾಹಿತ್ಯ ವಿಮರ್ಶೆಯಲ್ಲಿ ಒಂದು ಸ್ಥಾನವನ್ನು ತಂದುಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಶ್ರೀ ದೇವನೂರು ಮಹಾದೇವ ಅವರನ್ನು ಪ್ರತಿಷ್ಠಾನ ಈ ಸಂದರ್ಭದಲ್ಲಿ ಅತ್ಯಂತ ಹಾರ್ದಿಕವಾಗಿ ಅಭಿನಂದಿಸುತ್ತದೆ.

**ನಿರಂಜನ : "ಶ್ರೇಷ್ಠ ಕಾದಂಬರಿಕಾರ" :** ಗುಲ್ವಾಡಿ ವೆಂಕಟರಾಯ ಸ್ಮಾರಕ ಕೇಂದ್ರ "1990ನೇ ವರ್ಷದ ಶ್ರೇಷ್ಠ ಕಾದಂಬರಿಕಾರ" ಪ್ರಶಸ್ತಿಯನ್ನು ಶ್ರೀ ನಿರಂಜನ ಅವರಿಗೆ ಇತ್ತೀಚೆಗೆ ನೀಡಿ ಗೌರವಿಸಿದೆ. ಕ್ರಾಂತಿಕಾರಿ ಸಾಮಾಜಿಕ

ಹೋರಾಟದಲ್ಲಿ ಕ್ರಿಯಾಶೀಲರಾಗಿದ್ದ ಕಾದಂಬರಿಕಾರ ವೆಂಕಟರಾಯರ ಸ್ಮಾರಕ ಪ್ರಶಸ್ತಿಯನ್ನು ಇನ್ನೊಬ್ಬ ಕ್ರಾಂತಿಕಾರಿ ವಿಚಾರಧಾರೆಯ ಕ್ರಿಯಾಶೀಲ ಬರಹಗಾರರಾದ ನಿರಂಜನ ಅವರಿಗೆ ನೀಡಿರುವುದು ತುಂಬ ಉಚಿತವಾದದ್ದಾಗಿದೆ. ಅನಾರೋಗ್ಯದಿಂದ ಬಳಲುತ್ತಿರುವ ನಿರಂಜನ ಅವರಿಗೆ ಅವರ ಮನೆಯಲ್ಲಿಯೇ ಈ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ.

**ಸಿಂಪಿ ಲಿಂಗಣ್ಣ ಗೌರವ ಸದಸ್ಯತ್ವ :** ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವವನ್ನು ಖ್ಯಾತ ಜಾನಪದ ಲೇಖಕರಾದ ಬೀದರಿನ ಶ್ರೀ ಸಿಂಪಿ ಲಿಂಗಣ್ಣ ಅವರಿಗೆ ನೀಡಿ ಗೌರವಿಸಲಾಗಿದೆ. ದಿನಾಂಕ 6–10–90ರಂದು ನಡೆದ ಸರಳ ಸಮಾರಂಭದಲ್ಲಿ ಪರಿಷತ್ತು ಸಿಂಪಿ ಅವರಿಗೆ ಈ ಗೌರವವನ್ನು ನೀಡಿದ್ದಲ್ಲದೆ ಗೌರವ ಗ್ರಂಥ “ಸಾಗರಸಿಂಪಿಯನ್ನೂ ಬಿಡುಗಡೆ ಮಾಡಿದೆ.

**ಕೆ. ಎಸ್. ನ. ಸಮ್ಮೇಳನಾಧ್ಯಕ್ಷ :** “ಮೈಸೂರು ಮಲ್ಲಿಗೆ”ಯ ಖ್ಯಾತಿಯ ಕವಿ ಕೆ. ಎಸ್. ನರಸಿಂಹಸ್ವಾಮಿ ಅವರು ಈ ಬಾರಿ ನಡೆಯಲಿರುವ 60ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿರುವುದು ಕನ್ನಡಿಗರಿಗೆಲ್ಲ ಸಂತಸದ ವಿಷಯ. ತಮ್ಮ ಜೀವಿತ ಅವಧಿಯಲ್ಲಿಯೇ ಜನಮನವನ್ನು ಸೂರೆಗೊಂಡು ಜಾನಪದ ಕವಿಯಾಗಿ ಶಾಶ್ವತವಾಗಿರುವ ಕೆ. ಎಸ್. ನ. ರ ಮೈಸೂರು ಮಲ್ಲಿಗೆ ಕನ್ನಡ ಸಾಹಿತ್ಯದಲ್ಲಿಯೇ ಅದ್ವಿತೀಯ ಕೃತಿ. ನವೋದಯ, ನವ್ಯ ಎರಡೂ ಪ್ರಕಾರಗಳಲ್ಲಿ ಸಮರ್ಥವಾಗಿ ಕಾವ್ಯರಚನೆ ಮಾಡಿರುವ ಮೈಸೂರು ಮಲ್ಲಿಗೆಯ ತಂಪಿನ ಕವಿಗೆ ಮೈಸೂರು ಸಮ್ಮೇಳನ ಅಧ್ಯಕ್ಷ ಪದವಿ ನೀಡಿ ಗೌರವಿಸಿರುವುದು ಸೂಕ್ತವಾಗಿದೆ.

ಈ ಎಲ್ಲ ಮಹನೀಯರಿಗೆ ಪ್ರತಿಷ್ಠಾನ ತನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

— o —

# ಶ್ರದ್ಧಾಂಜಲಿ

ಪ್ರೊ|| ಸಂ. ಶಿ. ಭೂಸನೂರಮಠ : ದಿನಾಂಕ 6-11-1990ರಂದು ತಮ್ಮ 79ನೆಯ ವರ್ಷ ವಯಸ್ಸಿನಲ್ಲಿ ದಿವಂಗತರಾದ ಸ. ಸ. ಭೂಸನೂರಮಠ ಅವರು ಖ್ಯಾತ ವಚನ ಸಾಹಿತ್ಯ ವಿದ್ವಾಂಸರು. ಅವರ ಸಂಶೋಧನ ಗ್ರಂಥ "ಶೂನ್ಯ ಸಂಪಾದನೆಯ ಪರಾಮರ್ಶೆ" 1971ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಯಿಂದ ಬಹುಮಾನಿತವಾಗಿದೆ. "ಭವ್ಯಮಾನವ" ಎಂಬ ಮಹಾಕಾವ್ಯ ಅವರ ಮೇರುಕೃತಿ. ಅವರನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ 1969ರಲ್ಲಿ ಗೌರವಿಸಿದೆ. ಯು. ಜಿ. ಸಿ. ಪ್ರಾಧ್ಯಾಪಕರಾಗಿ, ಹಲವಾರು ವಿಶ್ವವಿದ್ಯಾಲಯಗಳ ಅಧ್ಯಯನ ಮಂಡಲಿ ಸದಸ್ಯರಾಗಿ, ಕೆ. ಎಲ್. ಇ. ಸೊಸೈಟಿಯ ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡವಿಭಾಗದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಶ್ರೀಯುತರ ಅಗಲಿಕೆ ಕನ್ನಡ ಸಾಹಿತ್ಯಕ್ಕೆ ನಷ್ಟವನ್ನುಂಟುಮಾಡಿದೆ.

ಬಿ. ಕೃಷ್ಣ : ಪ್ರತಿಷ್ಠಾನದ ಸಂಸ್ಥಾಪಕರಾದ್ದ ದಿವಂಗತ ಪ್ರೊ|| ಎಂ. ವಿ. ಸೀತಾರಾಮಯ್ಯನವರ ಸಹಪಾಠಿಗಳಾಗಿದ್ದ ಬಿ. ಕೃಷ್ಣ ಅವರು ಉತ್ತಮ ನಟ ರಾಗಿದ್ದರು. ತಮ್ಮ ಕಾಲೇಜಿನ ದಿನಗಳಲ್ಲಿ ದಿವಂಗತ ಸೀತಾರಾಮಯ್ಯನವರೊಂದಿಗೆ ಅನೇಕ ನಾಟಕಗಳಲ್ಲಿ ಸ್ತ್ರೀ ಪಾತ್ರಗಳಲ್ಲಿ ಅಭಿನಯಿಸಿದ್ದರು. ಈ ನಾಟಕ ಗುಂಪಿನ ಗೆಳೆಯರಿಗೆ ಎಂ. ವಿ. ಸೀ. ಅಚ್ಚುಮೆಚ್ಚಿನ "ಮಗು"ವಾಗಿದ್ದರೆ ಕೃಷ್ಣ "ತುಪ್ಪ" ಆಗಿದ್ದರು. ಇತ್ತೀಚೆಗೆ ಎಂ. ವಿ. ಸೀ. ಅವರು ನಿಧನರಾದಾಗ ಕೈಲಾಗದಿದ್ದರೂ ಸಹಾಯಕರ ನೆರವಿನೊಂದಿಗೆ ಬಂದು ಮೆಚ್ಚಿನ ಮಗು ಸೀತಾರಾಮಯ್ಯನಿಗೆ ಅಶ್ರು ತರ್ಪಣ ನೀಡಿ ಹೋಗಿದ್ದ ಶ್ರೀ ಬಿ. ಕೃಷ್ಣ ಅವರು ಇಷ್ಟು ಬೇಗ ನಮ್ಮನ್ನಗಲುತ್ತಾರೆ ಎಂದು ಯಾರೂ ಊಹಿಸಿರಲಿಲ್ಲ. ಕೆಲವು ಸಿನಿಮಾಗಳಲ್ಲೂ ನಟಿಸಿ ನಾಟಕ ಕಲೆಯಲ್ಲಿ ಪರಿಣತಿಯನ್ನು ಹೊಂದಿದ್ದ ದಿವಂಗತ ಕೃಷ್ಣ ಅವರ ನಿಧನದಿಂದ ನಾಟಕಕ್ಷೇತ್ರ ಬಡ ವಾಗಿದೆ. ಅಪಾರ ಪ್ರೀತಿಯ ಹೃದಯವಂತಿಕೆಯ ಸಜ್ಜನರಾಗಿದ್ದ ದಿವಂಗತರು ಪ್ರತಿಷ್ಠಾನದ ಆಜೀವ ಸದಸ್ಯರಾಗಿದ್ದರು.

ಕಾಶಿ ವಿಶ್ವನಾಥ ಶೆಟ್ಟಿ : ಸುಮಾರು ಮೂರು ದಶಕಗಳ ಕಾಲ ಸದ್ದು ಗದ್ದಲವಿಲ್ಲದೆ ಕನ್ನಡ ಸಾಹಿತ್ಯದಲ್ಲಿ ಕೃಷಿ ಮಾಡಿದ ಕಾಶಿ ವಿಶ್ವನಾಥ ಶೆಟ್ಟರು ಇತ್ತೀಚೆಗೆ ಚಿಕ್ಕಮಗಳೂರಿನಲ್ಲಿ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಅವರ "ಬುದ್ಧ ಚರಿತ ಮಹಾಮಥು" ಮಹಾಕಾವ್ಯ ಇತ್ತೀಚೆಗಷ್ಟೇ ಪ್ರಕಟವಾಗಿತ್ತು.

ಕನ್ನಡ ಉಪನ್ಯಾಸಕರಾಗಿದ್ದುಕೊಂಡು ತಮ್ಮ ಸಮರ್ಥ ಬೋಧನೆಯಿಂದ ಸಾವಿರಾರು ವಿದ್ಯಾರ್ಥಿಗಳಲ್ಲಿ ಕನ್ನಡ ಪ್ರೇಮವನ್ನು ಬೆಳೆಸಿದ್ದ ಶ್ರೇಷ್ಠಿಯವರು ಸುಮಾರು ನೂರು ಕೃತಿಗಳನ್ನು ಬರೆದಿದ್ದಾರೆ. ಕುಮಾರ ವಾಲ್ಮೀಕಿ, ಕನ್ನಡ ದಲ್ಲೊಂದು ಕ್ರೈಸ್ತಯುಗ, ಸಮಾಗಮ, ಕಾಶಿಕಾವೇರಿ ಮುಂತಾದವು ಹೆಸರಿಸ ಬೇಕಾದ ಕೃತಿಗಳು. ತಮ್ಮ ಕೃತಿಗಳನ್ನು ತಾವೇ ಪ್ರಕಟಪಡಿಸಿದ್ದುದು ಶೆಟ್ಟರ ಹೆಗ್ಗಳಿಕೆ. ಕೆಲವು ಕಾಲ ಚಿಕ್ಕಮಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿ ಸೇವೆ ಸಲ್ಲಿಸಿದ್ದರು. ಸ್ನೇಹಶೀಲರೂ, ಹೃದಯವಂತಿಕೆಯ ಸಾಕಾರ ಮೂರ್ತಿಗಳೂ ಆಗಿದ್ದ ಕಾಶಿ ವಿಶ್ವನಾಥಶೆಟ್ಟರು ಪ್ರತಿಷ್ಠಾನದ ಅಭಿಮಾನಿಗಳಾಗಿದ್ದರು.

## ಲೇಖಕರ ವಿಳಾಸ


ಕ. ಪು. ಸೀತಾರಾಮ ಕೆದಿಲ್ಲಾಯ
ಶಿಶಿಲ, ದಕ್ಷಿಣ ಕನ್ನಡ-574198

ವಿದ್ವಾನ್ ಎನ್. ರಂಗನಾಥ ಶರ್ಮ
"ಶ್ರೀ ಜಾನಕಿ ಕೃಪಾ" 831,
4ನೇ ಮೇನ್, ವಿಜಯನಗರ
ಬೆಂಗಳೂರು-560 040

ಪಾದೇಕಲ್ಲು ವಿಷ್ಣು ಭಟ್ಟ
ಕನ್ನಡ ಉಪನ್ಯಾಸಕ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹೆಬ್ರಿ, ದಕ್ಷಿಣ ಕನ್ನಡ ಜಿಲ್ಲೆ

ಪಿ. ವಿ. ಕೃಷ್ಣಮೂರ್ತಿ
510, ಜಿ. ಬಿ. ಜೆ. ಕ್ವಾರ್ಟರ್ಸ್
12ನೇ ಕ್ರಾಸ್, ಮಾರತ್‌ಹಳ್ಳಿ
ಬೆಂಗಳೂರು-560 037

ಡಾ॥ ಆರ್. ಎಸ್. ಶಿವಗಣೇಶಮೂರ್ತಿ
ಸಂಸ್ಕೃತ ಪ್ರಾಧ್ಯಾಪಕ
ಮೈಸೂರು ವಿಶ್ವವಿದ್ಯಾಲಯ
ಮೈಸೂರು-6

ಶಾಳ್ತಜೆ ಕೃಷ್ಣ ಭಟ್ಟ, ವಿದ್ವಾನ್
ಪಂಜಳ ಮನೆ
ಉಪ್ಪಿನಂಗಡಿ, ದ. ಕ. ಜಿಲ್ಲೆ-574241

ಗೋ. ಪು. ಜೋಶಿ
ವಿಠ್ಠಲನಗರ, ಗುಲ್ಬರ್ಗ-585103

ಎಂ. ವಿ. ವಿಶ್ವೇಶ್ವರ
ಸಹಾಯಕ ಪುರಾತತ್ವಜ್ಞ
ಭಾರತೀಯ ಪುರಾತತ್ವ ಸರ್ವೇಕ್ಷಣ
ಬೆಂಗಳೂರು ವೃತ್ತ
ಬೆಂಗಳೂರು-560 011

ಡಿ. ವಿ. ಪರಮಶಿವಮೂರ್ತಿ
ಸಂಶೋಧನಾ ವಿದ್ಯಾರ್ಥಿ
ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ
ಬೆಂಗಳೂರು-560 056

ಎಸ್. ಶಿವಣ್ಣ
ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ
ಬೆಂಗಳೂರು-560 056

ಬಿ. ಎಸ್. ರಾಮಪ್ರಸಾದ್
ಕನ್ನಡ ಅಧ್ಯಾಪಕರು
ವಿಜಯ ಕಾಲೇಜು, ಜಯನಗರ
ಬೆಂಗಳೂರು-560 011

ಕೆ. ಎಸ್. ಮಧುಸೂದನ
ರೀಡರ್, ಕನ್ನಡ ವಿಭಾಗ
ಎ.ಪಿ.ಎಸ್. ಕಲೆ ಮತ್ತು ವಿಜ್ಞಾನ
ಕಾಲೇಜು
ಬೆಂಗಳೂರು-560 019

ಶ್ರೀಧರ ಎಚ್. ಜಿ.
ಕನ್ನಡ ಉಪನ್ಯಾಸಕರು
ವಿವೇಕಾನಂದ ಕಾಲೇಜು
ಪುತ್ತೂರು-574203

ನಳಿನಿ ವೆಂಕಟೇಶ
ನಂ. 22 ಎ.
ರೂಪ್ಲ ಅಪಾರ್ಟ್‌ಮೆಂಟ್ಸ್
ನ್ಯೂ ಬ್ಯಾಂಕ್ ಆಫ್ ಮಹಾರಾಷ್ಟ್ರ
ಕರ್ವಾನಗರ ಶಾಖೆ
ಪುಣೆ-411029

34. The improvement of Kannada—B.M.Sri. 6-00
35. ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯ 4-00
36. ಭಾರತದ ಶ್ರೀಕೃಷ್ಣ 6-00
37. ಅಶ್ವತ್ಥಾಮ ('ಶ್ರೀ' ನಾಟಕದ ಸರಳಾನುವಾದ) 6-00

ದಶಮಾನೋತ್ಸವ ಸ್ಮೃತಿಮಾಲೆ

38. ಭಾಷಾಂತರ ಕಲೆ 15-00
39. ಸೃಜನಶೀಲತೆ ಮತ್ತು ಪಾಂಡಿತ್ಯ 10-00
40. ಹೊಸಗನ್ನಡದ ವ್ಯಾಕರಣ 15-00

## ಇತರ ಪ್ರಕಟನೆಗಳು

(ಇವುಗಳ ಮಾರಾಟದಿಂದ ಬಂದ ಹಣ ಪ್ರತಿಷ್ಠಾನದ ನಿಧಿಗೆ ಸೇರುತ್ತದೆ.)

1. ಅಧ್ಯಯನ (ಡಾ॥ ಶಂ.ಬಾ.ಜೋಶಿ ಅಭಿನಂದನ ಸಮಿತಿ ಕೊಡುಗೆ)† 50-00
2. ಕವಿಜಿಹ್ವಾಬಂಧನ ಎ.ಆರ್.ಕೃ. (ಶ್ರೀಮತಿ ಕೆ. ಶಾಂತ ಅವರ ಕೊಡುಗೆ) 2-00
3. ಆಸ್ವಾದ (ಪ್ರೊ॥ ಎಂ.ವಿ.ಸೀ. ಅವರ ಅಭಿನಂದನ ಗ್ರಂಥ) 75-00
4. ಕಾಣಿಕೆ (ನಾ. ಗೀತಾಚಾರ್ಯರ ಕೊಡುಗೆ) 5-00
5. ಪಟ್ಟಬಂಧ (ನಾಟಕ) ವಿ. ಸೀ. (ಶುಭ ಪ್ರಕಾಶನದ ಕೊಡುಗೆ) 6-00
6. ಚಿಂತನ ಮಂಥನ (ಎಚ್. ಎಸ್. ಪಾರ್ವತಿ ಅವರ ಕೊಡುಗೆ) 10-00
7. ಷೇಕ್ಸ್‌ಪಿಯರನ 12ನೇ ರಾತ್ರಿ (ಡಾ ಪಿ.ವಿ ನಾರಾಯಣರ ಕೊಡುಗೆ) 10-00
8. ನವ ದಂಪತಿಗಳು (ಕೆ. ರಾಜಾರಾಯರ ಕೊಡುಗೆ) 10-00

ಪ್ರೊ ಎಂ. ವಿ. ಸೀ.ಯವರ ಪುಸ್ತಕಗಳು (ರಾಘವ ಪ್ರಕಾಶನ)

| | | | |
|---|---|---|---|
| 1. ಶೃಂಗಾರ ವಿಹಾರ | 10-00 | 7. ಗೀತಭಾರತಿ | 5-00 |
| 2. ಹಿತಚಿಂತನ | 10-00 | 8. ಮೊದಲ ಹೆಜ್ಜೆ | 5-00 |
| 3. ಜೈಮಿನಿ ಭಾರತ ಸಮೀಕ್ಷೆ | 5-00 | 9. ಮಾದನ ಮಗಳು | 45-00 |
| 4. ಕನ್ನಡಮ್ಮನ ಕೊರಗು | 8-00 | 10. ನಿಲ್ದಾಣಗಳ ನಡುವೆ | 20-00 |
| 5. ಸಾಹಿತ್ಯ ಮತ್ತು ಚಿತ್ರಕಲೆ | 5-00 | 11. ನಾಡೋಜ ಬಿ.ಎಂ.ಶ್ರೀ | 5-00 |
| 6. ಹರಿದಾಸರು ಮತ್ತು ಅನುಭಾವ ಕವಿಗಳು | | | 10-00 |
| 12. ಪ್ರತಿಮಾಗೃಹ | 20-00 | 13. ಕಾವ್ಯಾಲಾಪ | 8-00 |

ಸಮೇತನಹಳ್ಳಿ ರಾಮರಾಯರ ಪುಸ್ತಕಗಳ ಕೊಡುಗೆ

| | | | |
|---|---|---|---|
| 1. ಶಾಕುಂತಲಾ | 50-00 | 4. ತಲಕಾಡುಗೊಂಡ | 5-00 |
| 2. ಪ್ರಾಣ ವೀಣೆ | 5-00 | 5. ಶ್ರೀಕೃಷ್ಣ ದರ್ಶನ | 70-00 |
| 3. ಶಿಲ್ಪ ಸಂಗೀತ | 5-00 | | |

Published by M. V. Satyanarayana, Honorary Secretary, on behalf of B. M. Sri. Memorial Foundation, Bangalore-560019; Editor: Vidwan T. Keshava Bhat; Printed at Sri Lakshmi Printers, Bangalore-5600 85.

# ಪ್ರತಿಷ್ಠಾನದ ಪ್ರಕಟನೆಗಳು

| | | |
|---|---|---|
| 1. | ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ) | 50–00 |
| 2. | ಬೇಂದ್ರೆ ಸ್ಮೃತಿ† | 5–00 |
| 3. | ಸರ್ವಜ್ಞ ವಚನಗಳು*† | 15–00 |
| 4. | ಸೂತ ಭಾರತ* | 15–00 |
| 5. | ಶ್ರೀಕೃಷ್ಣದೇವರಾಯ ದಿನಚರಿ* | 10–00 |
| 6. | ಹಸ್ತಪ್ರತಿ ಶಾಸ್ತ್ರ* | 15–00 |
| 7. | ಮಾಸ್ತಿ ಸ್ಮರಣೆ | 15–00 |
| 8. | ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ—ಭಾಗ-೧* | 20–00 |
| 9. | Early Vijayanagara: Studies its History & Culture | 60–00 |
| 10. | Sovenier of Vijayanagar Seminar† | 10–00 |
| 11. | ಮರುನ್ನಂದನ ಶತಕಂ | 5–00 |
| 12. | ಚಂದ್ರಚೂಡಾಮಣಿ ಶತಕ | 10–00 |
| 13. | ಶ್ರೀನಿವಾಸ ಕಲ್ಯಾಣ | 10–00 |
| 14. | ಕನ್ನಡ ಸಾಹಿತ್ಯದಲ್ಲಿ ಅದ್ವೈತ | 10–00 |
| 15. | ಕುಮಾರವ್ಯಾಸ ಭಾರತ ಸಂಗ್ರಹ (ಉತ್ತಮ ಪ್ರತಿ 75–00) | 40–00 |
| | **ದತ್ತಿ ಉಪನ್ಯಾಸ ಮಾಲೆ** | |
| 16. | ಮೂರು ದತ್ತಿ ಉಪನ್ಯಾಸಗಳು | 10–00 |
| 17. | ವೈವಸ್ವತ ಮನು | 5–00 |
| 18. | ಸ್ವಾಯಂಭುವ ಮನು : ವೈವಸ್ವತ ಮನು–ತೌಲನಿಕ ಅಧ್ಯಯನ | 5–00 |
| 19. | ಮೂರು ದತ್ತಿ ಉಪನ್ಯಾಸಗಳು—೧೯೮೪ | 10–00 |
| 20. | ದತ್ತಿ ಉಪನ್ಯಾಸಗಳು—೧೯೮೬ | 10–00 |
| 21. | ದತ್ತಿ ಉಪನ್ಯಾಸಗಳು–೧೯೮೮ | 10–00 |
| | **ತಿಮ್ಮಪ್ಪದಾಸ ಪ್ರಕಾಶನ ಮಾಲೆ** | |
| 22. | ಕೀರ್ತನ ಕುಸುಮಾಂಜಲಿ | 10–00 |
| 23. | ಧ್ರುವ ಚರಿತ್ರೆ* | 10–50 |
| 24. | ಶ್ರೀ ಕೃಷ್ಣಬಾಲಲೀಲೆ ಭಾಗ–೧ | 75–00 |
| 25. | ,, ಭಾಗ–೨* | 75–00 |
| | **ಜನ್ಮಶತಾಬ್ದಿ ಕೃತಿಮಾಲೆ** | |
| 26. | ಶ್ರೀವಾಣಿ (ಸೂಕ್ತಿ ಸಂಗ್ರಹ) | 1–00 |
| 27. | ಆಚಾರ್ಯ ಬಿ. ಎಂ. ಶ್ರೀ. (ಜೀವನ ಚಿತ್ರ) | 2–00 |
| 28. | ಕನ್ನಡ ಕಣ್ವ ಬಿ. ಎಂ. ಶ್ರೀ. (ಮಕ್ಕಳಿಗೆ) | 1–00 |
| 29. | ಶ್ರೀಯವರ ಆಯ್ದ ಕವನಗಳು | 2–00 |
| 30. | ಶ್ರೀನಿಧಿ (ಸಂಸ್ಮರಣ ಸಂಪುಟ) | 60–00 |
| 31. | B. M. S : The Man and His Mission | 25–00 |
| 32. | ಶ್ರೀಗಂಧ (ಸಂಸ್ಮರಣ ಸಂಚಿಕೆ) | 10–00 |
| 33. | ಇಂಗ್ಲಿಷ್ ಗೀತಗಳು (ಆಂಗ್ಲ ಮೂಲ ಕವನಗಳೊಂದಿಗೆ) | 20–00 |

* ಈ ಪುಸ್ತಕಗಳಿಗೆ ಪ್ರತಿಷ್ಠಾನದ ಸದಸ್ಯರಿಗೆ ಶೇ. 50 ರಿಯಾಯಿತಿ, †ಪ್ರತಿಗಳು ಮುಗಿದಿವೆ.